*ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಮಾಲಿಕೆ*

# ಡಿ. ದೇವರಾಜ ಅರಸು

ಪ್ರೊ. ಜೆ.ಎಸ್. ಸದಾನಂದ್

ಪ್ರಕಟಣೆ:
ಗ್ರಂಥಾಲಯ ಉಪ ಸಮಿತಿ
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

D. DEVARAJ AURS: Prathibhavantha Samsadiya Patugala Baduku Baraha Malike (Eminent Parliamentarian Series) Written by J.S. Sadananda, Published by Karnataka Legislative Assembly Secretariat, Vidhana Soudha, Bangalore - 01.

Pages - 120+11

Price - Rs. 15.00



First Edition, February, 2000

Number of Copies : 1500

Printed Front Page design at Government Printing Press, Banglaore-01

ಡಿ. ದೇವರಾಜ ಅರಸು : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಮೂಲ ಕೃತಿ : ಪ್ರೊ. ಜೆ.ಎಸ್. ಸದಾನಂದ್, ಪ್ರಕಟಣೆ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು-01.

ಪುಟ ಸಂಖ್ಯೆ : 120+11

ಬೆಲೆ ರೂ : 15.00



ಮೊದಲನೆ ಮುದ್ರಣ : ಫೆಬ್ರವರಿ, 2000

ಪ್ರತಿಗಳು: 1,500

ಮುಖ ಪುಟ ವಿನ್ಯಾಸ ಮತ್ತು ಮುದ್ರಣ: ಸರ್ಕಾರಿ ಮುದ್ರಣಾಲಯ, ಬೆಂಗಳೂರು -560 001

# ಪೀಠಿಕೆ

ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಅವುಗಳಲ್ಲಿ ಡಾ. ಬಿ.ಆರ್. ಅಂಬೇಡ್ಕರ್, ಡಾ: ರಾಂಮನೋಹರ ಲೋಹಿಯಾ ಮತ್ತು ಶೇಕ್ ಮಹಮದ್ ಅಬ್ದುಲ್ ಮತ್ತು ಕೃಷ್ಣ ಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ ರಾಜ್ಯದ ಸಂಸದೀಯ ಪಟುಗಳಾಗಿದ್ದ ಅನೇಕ ಮಹನೀಯರನ್ನು ಕುರಿತ ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ. ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆಯಲ್ಲಿ ಈಗಾಗಲೇ ಕೆಂಗಲ್ ಹನುಮಂತಯ್ಯ, ಶಾಂತವೇರಿ ಗೋಪಾಲಗೌಡ, ಎಸ್. ನಿಜಲಿಂಗಪ್ಪ, ವೈಕುಂಠಬಾಳಿಗ, ಈಗ ಈ ಸಾಲಿನಲ್ಲಿ ಕೆ.ಎಸ್. ನಾಗರತ್ನಮ್ಮ ಜಿ.ವಿ. ಹಳ್ಳಿಕೇರಿ ಅವರುಗಳ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ. ಕುವೆಂಪು ವಿಶ್ವವಿದ್ಯಾನಿಲಯದ ಪ್ರೊ.ಜೆ.ಎಸ್. ಸದಾನಂದ್ ಅವರು ರಚಿಸಿರುವ ಮಾಜಿ ಮುಖ್ಯಮಂತ್ರಿ ಮತ್ತು ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ ಡಿ. ದೇವರಾಜ ಅರಸು ಅವರ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

| | |
|---|---|
| **ಡಿ.ಬಿ.ಕಲ್ಮಣಕರ್** | **ಎಂ.ವಿ. ವೆಂಕಟಪ್ಪ,** |
| ಸಭಾಪತಿ | ಸಭಾಧ್ಯಕ್ಷರು |
| ಕರ್ನಾಟಕ ವಿಧಾನ ಪರಿಷತ್ತು | ಕರ್ನಾಟಕ ವಿಧಾನ ಸಭೆ |

# ಅರಿಕೆ

ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಪುಸ್ತಕ ಹೊರ ತರಲು ಉದ್ದೇಶಿಸಿರುವ ಕರ್ನಾಟಕ ರಾಜ್ಯದ ವಿಧಾನ ಮಂಡಲ ಸಚಿವಾಲಯದವರ ನಿರ್ಧಾರವು ನಿಜಕ್ಕೂ ಪ್ರಶಂಸನೀಯವಾದ ಕಾರ್ಯ. ಇದರಿಂದ ಹೊಸ ಪೀಳಿಗೆಯ ಶಾಸಕರುಗಳಿಗೆ ಅವರ ಜ್ಞಾನದ ಆಳ, ವಿಚಾರಗಳ ಮಂಥನ ಮತ್ತು ನಡವಳಿಕೆಗಳು ಸ್ಫೂರ್ತಿ ನೀಡುತ್ತವೆ ಎಂದು ಭಾವಿಸುತ್ತೇನೆ. ಈ ಯೋಜನೆಯಂತೆ ಶ್ರೀ ಡಿ. ದೇವರಾಜ ಅರಸು ಅವರ ಕಿರುಹೊತ್ತಿಗೆಯನ್ನು ಸಿದ್ಧಪಡಿಸುವ ಜವಾಬ್ದಾರಿಯನ್ನು ಸಮಿತಿಯು ನಮಗೆ ವಹಿಸಿರುವುದು ಸಂತೋಷದ ಸಂಗತಿಯಾಗಿರುತ್ತದೆ.

ಶ್ರೀ ಡಿ. ದೇವರಾಜ ಅರಸರ ಬದುಕು, ರಾಜಕೀಯ ಸಂಘಟನೆ ಮತ್ತು ವಿಧಾನ ಸಭೆಯಲ್ಲಿ ವಿವಿಧ ವಿಷಯಗಳ ಬಗ್ಗೆ ಮಾಡಿದ ಚರ್ಚೆ ಇವುಗಳನ್ನು ಕ್ರೋಢೀಕರಿಸಿ ಈ ಒಂದು ಪುಸ್ತಕದಲ್ಲಿ ಅಳವಡಿಸಲಾಗಿರುತ್ತದೆ. ರಾಜ್ಯದ ಭೂ ಹೀನರಿಗೆ ಭೂಮಿ ಹಂಚುವ ಕಾರ್ಯದಲ್ಲಿ ಅವರದು ಕ್ರಾಂತಿಕಾರಕವಾದ ಪಾತ್ರ ಎಂದರೆ ತಪ್ಪಾಗಲಾರದು. ಅವರದು ಬಹುಮುಖ ಪ್ರತಿಭೆ ಕ್ರಿಡಾಪಟುವಾಗಿ, ಪ್ರತಿಭಾವಂತ ವಾಗ್ಮಿಯಾಗಿ ಮತ್ತು ಚಿಂತನಶೀಲರಾಗಿ. ಈ ಕಿರುಹೊತ್ತಿಗೆಯಲ್ಲಿ ಅಡಕವಾಗಿರುವ ವಿಷಯಗಳು ಮಾನ್ಯ ಶಾಸಕರುಗಳಿಗೆ ಮತ್ತು ಸಾಮಾನ್ಯ ಓದುಗರಿಗೆ ಉಪಯುಕ್ತವಾದರೆ ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇವೆ.

ಈ ಹೊತ್ತಿಗೆಯನ್ನು ಹೊರತರಲು ಸಾಕಷ್ಟು ಸ್ವಾತಂತ್ರ್ಯ ನೀಡಿದ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ನಾವು ಕೃತಜ್ಞರಾಗಿದ್ದೇವೆ. ಈ ಕಾರ್ಯದಲ್ಲಿ ನಮಗೆ ಪ್ರೋತ್ಸಾಹ ನೀಡಿದ ಕುವೆಂಪು ವಿಶ್ವವಿದ್ಯಾನಿಲಯದ ಸನ್ಮಾನ್ಯ ಕುಲಪತಿಗಳಾದ ಪ್ರೊ:ಎಸ್. ಪಿ. ಹಿರೇಮಠ ಅವರಿಗೂ ನಾವು ಚಿರಋಣಿಗಳಾಗಿದ್ದೇವೆ.

ಪ್ರೊ: ಜೆ.ಎಸ್. ಸದಾನಂದ್
ಕುವೆಂಪು ವಿಶ್ವವಿದ್ಯಾಲಯ

ವಿಷಯಾನುಕ್ರಮಣಿಕೆ

## ಭಾಗ - 1

## ಬದುಕು ಮತ್ತು ರಾಜಕೀಯ



## ಭಾಗ - 2

## ಸದನದಲ್ಲಿ ಅರಸು

# 1. ಶ್ರೀ ಡಿ. ದೇವರಾಜ ಅರಸು: ಪರಿಚಯ

ಸುಮಾರು ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲ ಜನಪ್ರತಿನಿಧಿಯಾಗಿ ಸೇವೆ ಸಲ್ಲಿಸಿದ ಶ್ರೀ ಡಿ. ದೇವರಾಜ ಅರಸುರವರು ಜನಿಸಿದ್ದು 1915ರ ಆಗಸ್ಟ್ 20 ರಂದು. ಅವರು ಇಹಲೋಕ ತ್ಯಜಿಸಿದ್ದು 1982 ಜೂನ್ 6 ರಂದು ಅವರಿಗಾಗ 67 ವರ್ಷ ವಯಸ್ಸು. 1941ನೇ ಇಸವಿಯಲ್ಲಿ ಮೈಸೂರು ಪ್ರಾಂತ್ಯದ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಆಯ್ಕೆಯಾದ ಅರಸುರವರು ಎರಡನೆ ಬಾರಿಯೂ ಸದಸ್ಯರಾಗಿ ಚುನಾಯಿತಗೊಂಡರು. ನಂತರ ಸ್ವತಂತ್ರ್ಯ ಮೈಸೂರು / ಕರ್ನಾಟಕ ರಾಜ್ಯದ ವಿಧಾನ ಸಭೆಗೆ 1952ರಲ್ಲಿ ಆಯ್ಕೆಯಾದವರು ಸತತವಾಗಿ ಅಂದರೆ ತಮ್ಮ ಕೊನೆ ದಿನಗಳವರೆಗೂ ರಾಜ್ಯ ವಿಧಾನಸಭೆ ಸದಸ್ಯರಾಗಿ ಅನುಭವ ಪಡೆದವರು. ಅಷ್ಟೆ ಅಲ್ಲ ಕರ್ನಾಟಕ ರಾಜ್ಯದ ರಾಜಕೀಯ ಇತಿಹಾಸದಲ್ಲಿ ತಮ್ಮದೇ ಆದ ವಿಶಿಷ್ಠ ಸ್ಥಾನಗಳಿಸಿದ ವ್ಯಕ್ತಿ ಇವರು. ನಮ್ಮ ರಾಜ್ಯದ ರಾಜಕೀಯಕ್ಕೆ ಮಹತ್ವದ ತಿರುವು ನೀಡಿದ ಅರಸುರವರನ್ನು ಇಂದಿಗೂ ಕರ್ನಾಟಕದ ಜನತೆ ಅದರಲ್ಲೂ ಹಿಂದುಳಿದ ಹಾಗೂ ದಲಿತ ವರ್ಗದವರು ಕೃತಜ್ಞತೆಯಿಂದ ನೆನೆಸಿಕೊಳ್ಳು ವಂತಹ ಸಾಧನೆಗೆಯ್ದಿದ್ದಾರೆ. ಕರ್ನಾಟಕದ ಇತಿಹಾಸದಲ್ಲಿ ಹಿಂದುಳಿದ ವರ್ಗಗಳ ಸಂಘಟನೆಯ ಹರಿಕಾರ ಎನಿಸಿಕೊಂಡಿದ್ದಾರೆ.

## ಬಾಲ್ಯ ಹಾಗೂ ವೈಯಕ್ತಿಕ ಜೀವನ

ಅರಸುರವರು ಜನಿಸಿದ್ದು ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕಲ್ಲಹಳ್ಳಿ ಎಂಬ ಗ್ರಾಮದಲ್ಲಿ. ಆ ಗ್ರಾಮದಲ್ಲಿ ಅರಸು ಮನೆತನಕ್ಕೆ ಸೇರಿದ ದೇವರಾಜರ ಮನೆಯೇ ದೊಡ್ಡ ಮನೆ. ಮುಂದೆ ಇದೇ ಅವರ ಹೆಸರಿನ ಜೊತೆಗೆ ಸೇರಿಕೊಂಡು. ದೊಡ್ಡಮನೆ ದೇವರಾಜ ಅರಸು ಎಂದು ಪ್ರಸಿದ್ಧಿ ಪಡೆದರು.

ಅರಸು ಮನೆತನಗಳಲ್ಲಿ ಕೆಲವು ಜೈನ-ಶೈವ ವೈಷ್ಣವ ಸಂಪ್ರದಾಯವಾಗಿದ್ದವು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ದೊರೆಯುತ್ತವೆ. ಅರಸರ ಮನೆತನದ ಮೂಲಪುರುಷ ಮೂರನೆಯ ಮಂಗರಸನೆಂದು ಹೇಳುತ್ತಾರೆ. ಈತ ಚಂಗಾಳರಾಜರ ಸಚಿವ ಕುಲದಲ್ಲಿ ಜನಿಸಿರುವನು. ಪ್ರಸಿದ್ಧ ಜಟ್ಟಿ, ಉತ್ತಮ ಕವಿ, ಈತನ ತಮ್ಮನ ಮಗ ನಂಜುಂಡ ಕವಿ. ಮೈಸೂರು ಪ್ರಾಂತ್ಯದಲ್ಲಿ ಒಡೆಯರ ಆಡಳಿತ ಪ್ರಾರಂಭವಾದ ಮೇಲೆ ರಾಜಪರಿವಾರದವರು ಸ್ಥಳೀಯರೊಡನೆ ಸಂಬಂಧ ಬೆಳೆಸಿದಾಗ ಹುಟ್ಟಿಕೊಂಡ ಹೊಸ ಕುಲ, 'ಅರಸು ಮನೆತನ' ಎಂದೂ ಹೇಳುತ್ತಾರೆ. ಅರಸುರವರ ವಂಶವೃಕ್ಷವನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ಮೂರನೆಯ ಮಂಗರಸ

|

ಜಯರಾಜೇಶ್ವರ

|

ಚೆಲವರಾಜ ಅರಸ

|

ಪದ್ಮರಾಜ ಅರಸ

|

ಅನಂತರಾಜ ಅರಸ

|

ದೇವರಾಜ ಅರಸ

|

ಕೆಂಪರಾಜ ಅರಸ - ಕೆಂಪಾಜಮ್ಮಣ್ಣಿ (ತುಂಗದ ಪದ್ಮರಾಜ ಅರಸರ ಪುತ್ರಿ)

|

ಚೆನ್ನರಾಜ ಅರಸ -ಕೆಂಪಾಜಮ್ಮಣ್ಣಿ (ಚಂಗಳರಾಯರ ಆಧಿರಾಜ ಅರಸರ ಪುತ್ರಿ)

|

(ದತ್ತು) ದೇವರಾಜ ಅರಸ - ಚೆಲುವಾಜಮ್ಮಣ್ಣಿ (ಪಾಳ್ಯದ ಚತುರುಗ ಬಸವರಾಜ ಅರಸರ ಪುತ್ರಿ)

|

ಪದ್ಮರಾಜ ಅರಸ - ಗೌರಮ್ಮಣ್ಣಿ

ಅನಂತಮ್ಮಣ್ಣಿ
ಅಕ್ಕಾಜಮ್ಮಣ್ಣಿ
ಕೆಂಪಮ್ಮಣ್ಣಿ
ಮರುದೇವಮ್ಮಣ್ಣಿ

|

ಡಿ. ದೇವರಾಜ ಅರಸ - ಪವತಿ (ಮೊದಲನೆ ಹೆಂಡತಿ) ದೇವಿರಮ್ಮಣ್ಣಿ (ಎರಡನೆಯ ಹೆಂಡತಿ)

|

ಡಿ. ದೇವರಾಜ ಅರಸ -
ಡಿ. ಕೆಂಪರಾಜ ಅರಸು
ಡಿ. ಪುಟ್ಟರಾಜ ಅರಸು

ಚಿಕ್ಕಮ್ಮಣ್ಣಿ

|

|

ಚಂದ್ರಪ್ರಭಾ - ಮೋಹನರಾಜ ಅರಸ
ನಾಗರತ್ನ - ಎಂ. ಡಿ. ನಟರಾಜ್
ಭಾರತಿ - ಎಂ. ಜಿ. ನಾಗರಾಜ್.

(ಮೂಲ:ಕೋಣಂದೂರು ವೆಂಕಪ್ಪಗೌಡ,..ಸತ್ಯ ಸಾಧನೆ).

ಹೀಗೆ ರಾಜಮನೆತನಕ್ಕೆ ಸೇರಿದವರಾಗಿದ್ದರೂ ದೇವರಾಜ ಅರಸುರವರ ಕಾಲದಲ್ಲಿ ಅವರ ಆರ್ಥಿಕ ಸ್ಥಿತಿ ಉತ್ತಮವಾಗೇನೂ ಇರಲಿಲ್ಲ. ತಮ್ಮ ಬದುಕಿಗೆ ಬೇಸಾಯವನ್ನೆ ಅವಲಂಬಿಸಬೇಕಾಗಿತ್ತು. ಬದುಕಲು ಅನಿವಾರ್ಯವಾಗಿ ಕಷ್ಟಪಟ್ಟು ದುಡಿಯಲೇ ಬೇಕಾಗಿತ್ತು. ಒಂದು ಕಡೆ ರಾಜಮನೆತನದ ಬಂಧುತ್ವ ಹಾಗೂ ಆ ಕಾರಣದಿಂದಲೇ ಮನೆತನದ ಬಗ್ಗೆ ಒಂದು ರೀತಿಯ ಅಭಿಮಾನ, ಆ ಅಭಿಮಾನವನ್ನು ಕಾಯ್ದುಕೊಳ್ಳಲು ಹೆಣಗಾಟ. ತಮ್ಮ ಮನೆತನದ ಗೌರವವನ್ನು ಕಾಪಾಡಿಕೊಳ್ಳಲು ತಮ್ಮ ಅವಸ್ಥೆಯನ್ನು ಮರೆಮಾಚಿ ಒಂದು ಮರ್ಯಾದೆಯ ಮಧ್ಯಮ ವರ್ಗವಾಗಿ ಬಾಳಬೇಕಾದ ಇಕ್ಕಟ್ಟು. ಈ ಹಿನ್ನಲೆಯಲ್ಲಿ ಹುಟ್ಟಿ ಬಂದಕಾರಣದಿಂದಲೇ ಬಹುಶಃ ದೇವರಾಜ ಅರಸುರವರ ವ್ಯಕ್ತಿತ್ವ ವಿಶಿಷ್ಟವಾದುದಾಗಿತ್ತು. ರಾಜಮನೆತನದ ಗತ್ತು, ಬಡವರ ಕಷ್ಟಗಳ ನೇರ ಅನುಭವ ಇವೆರಡೂ ಅವರ ಮಾತಿನಲ್ಲಿ ಹಾಗೂ ಕೃತಿಯಲ್ಲಿ ಮೇಳೈಸಿದ್ದವು.

ಡಿ . ದೇವರಾಜ ಅರಸುರವರ ತಂದೆಯ ಹೆಸರು ದೇವರಾಜ ಅರಸು, ತಾಯಿಯ ಹೆಸರು ದೇವಿರಮ್ಮಣ್ಣಿ. ಮೊದಲನೆಯ ಮಗ ದೇವರಾಜ ಅರಸು. ಎರಡನೆಯವರು ಕೆಂಪರಾಜ ಅರಸು, ಮೂರನೆಯ ಮಗು ಪುಟ್ಟರಾಜ ಅರಸು ನಾಲ್ಕು ವರ್ಷಗಳಾಗಿದ್ದಾಗಲೇ ತೀರಿಕೊಂಡಿತು. ಡಿ. ದೇವರಾಜ ಅರಸರ ಬಾಲ್ಯ ಊರಿನ ಇತರ ಎಲ್ಲ ಮಕ್ಕಳಂತೆಯೇ ಇತ್ತು. ಮನೆಯಲ್ಲಿ ಸಣ್ಣಪುಟ್ಟ ಕೆಲಸ. ದನಕರುಗಳನ್ನು ಮೇಯಿಸುವುದು, ಆಟ, ಅವರ ನಿತ್ಯದ ದಿನಚರಿಯಾಗಿತ್ತು. ಅವರ ಮನೆಯ ಜಗುಲಿಯೇ ಅವರ ಪ್ರಥಮ ಪಾಠಶಾಲೆ. ಹಿಂದಿನ ಗುರುಕುಲ ಪದ್ಧತಿಯಂತೆ ಮರಳಿನ ಮೇಲೆ ಅಕ್ಷರಭ್ಯಾಸ. ತಮ್ಮ ಆರನೆಯ ವಯಸ್ಸಿನಲ್ಲಿ ಅರಸರು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಬಂದರು, ಕೆಲವು ಕಾಲ ಸಂಬಂಧಿಕರ ಮನೆಯಲ್ಲಿಯೇ ಇದ್ದ ಅರಸರು ನಂತರ ಮೈಸೂರು ಮಹಾರಾಜರು ಸ್ಥಾಪಿಸಿದ ಅರಸು ಬೋರ್ಡಿಂಗ್ ಶಾಲೆಯನ್ನು ಸೇರಿದರು. ಅವರಿಗೆ ಒಂಭತ್ತು ವರ್ಷವಾಗಿದ್ದಾಗ ಅವರು ತಂದೆಯನ್ನು ಕಳೆದುಕೊಂಡರು. ಅವರು ಹಿರಿಯ ಮಗನಾದ್ದರಿಂದ ಸಹಜವಾಗಿಯೇ ಅವರ ಜವಾಬ್ದಾರಿ ಹೆಚ್ಚಾಗಿತ್ತು. ಮನೆಯಲ್ಲಿ ದುಡಿಯುವುದು ಅನಿವಾರ್ಯವಾಯಿತು. ಹೊಲಗದ್ದೆಯಲ್ಲಿ ಕೆಲಸ ಮಾಡುವುದು, ಕಟ್ಟಿಗೆ ಒಡೆಯುವುದು, ನೀರು ತರುವುದು ಮುಂತಾದ ಎಲ್ಲ ಕೆಲಸಗಳನ್ನು ಮಾಡಿದ ಅನುಭವ ದೇವರಾಜ ಅರಸುರವರಿಗಿತ್ತು. ರೈತಾಪಿ ಕೆಲಸಗಳಲ್ಲಿ ಬಾಲ್ಯದಲ್ಲೇ ವ್ಯಕ್ತಗೊಂಡ ಪ್ರೀತಿ ಮುಂದೆಯೂ ಅವರೊಡನೆ ಬೆಳೆಯಿತು. ಅವರು ದೊಡ್ಡವರಾದ ಮೇಲೆ ಅವರ ಸಮ ಹೊಲ ಉಳುವವರು ನಮ್ಮ ಹಳ್ಳಿಯಲ್ಲಿ ಯಾರೂ ಇಲ್ಲ ಎಂದು ಗ್ರಾಮಸ್ಥರು ಮೆಚ್ಚಿ ಹೇಳುವುದನ್ನು ನಾನು ಕೇಳಿದ್ದೇನೆ, ಜೊತೆಗೆ ಒಂದು ಗಾಡಿ ಸೌದೆಯನ್ನು ಒಬ್ಬರೆ ಒಡಿದು ಹಾಕುತ್ತಿದುದ್ದನ್ನೂ 90 ಅಡಿಗಳ ಆಳದ ಬಾವಿಯಿಂದ ಮನೆಯವರ ಸ್ನಾನಕ್ಕೆ ಮತ್ತು ಅಡಿಗೆ ಕೆಲಸಕ್ಕಾಗಿ ಒಬ್ಬರೇ ನೀರು ಸೇದಿ ಹಾಕುತ್ತಿದುದ್ದನ್ನು ನಾನು ಕಂಡಿದ್ದೇನೆ. ಎಂದು ಚದುರಂಗರು ಬರೆಯುತ್ತಾರೆ.

ಅರಸುರವರನ್ನು ಪೈಲ್ವಾನ್ ಅರಸು. ಎಂದು ಮುಂದೆ ಜನ ಕರೆಯುವಂತಾಗಿದ್ದಕ್ಕೆ ನಡೆದ ಒಂದು ಘಟನೆಯನ್ನು ಬಹಳಷ್ಟು ಮಂದಿ ನೆನಪಿಸಿಕೊಳ್ಳುತ್ತಾರೆ. ಚಿಕ್ಕಂದಿನಲ್ಲಿ ಅವರ ಸಮವಯಸ್ಕ ಹುಡಗನೊಬ್ಬನಿಂದ ಪೆಟ್ಟು ತಿಂದು ತಿರುಗಿ ಹೊಡೆಯಲಾಗದ ಅಸಾಹಾಯಕತೆ ಅವರಿಗೆ ವ್ಯಾಯಾಮದ ಗೀಳು ಹಚ್ಚಿತು. ತಾನು ಬಲಿಷ್ಟನಾಗದಿದ್ದರೆ ಬದುಕುವುದು ಕಷ್ಟ ಎಂದು ತೀರ್ಮಾನಿಸಿದ ಅರಸು ಮೈಸೂರಿನಲ್ಲಿ ಇಂಟರ್ ಮೀಡಿಯಟ್ ಓದುತ್ತಿದ್ದಾಗ ಮಹಾರಾಜ ಕಾಲೇಜಿನ ಗರಡಿಗೆ

ಹೋಗಲು ಪ್ರಾರಂಭಿಸಿದರು. ಒಮ್ಮೆ ಅವರು ಸಾಮು ಮಾಡಿ ತನ್ನ ಸ್ನೇಹಿತನೊಬ್ಬನಿಗೆ ಹೇಳಿ ತಲೆಯೊಂದನ್ನು ಬಿಟ್ಟು ಮೈತುಂಬ ಮಟ್ಟಿಯ ಕೆಮ್ಮಣ್ಣಿನಿಂದ ಮುಚ್ಚಿಸಿಕೊಂಡು ಮಲಗಿದ್ದಾಗ ಮತ್ತೊಬ್ಬ ವಿದ್ಯಾರ್ಥಿ ಅವರಿರುವುದನ್ನು ಕಾಣದೆ ಗುದ್ದಲಿಯಿಂದ ಮಣ್ಣನ್ನು ಅಗೆಯುತ್ತಾ ಬಂದು ಅವರ ಎಡ ತೋಳಿಗೆ ಬಲವಾದ ಹೊಡೆತ ಕೊಟ್ಟಾಗ ತೋಳಿನ ಮಾಂಸಖಂಡ ಕಿತ್ತು ಬಂದಿತ್ತು. ಆ ಸ್ಥಿತಿಯಲ್ಲಿ ಕಣ್ಣೀರು ಹಾಕದೆ ಆಸ್ಪತ್ರೆಗೆ ನಡೆದು ಬಂದ ಅರಸರನ್ನು ನೋಡಿ ಆ ವಿದ್ಯಾರ್ಥಿ ಮೂಕ ವಿಸ್ಮಿತನಾದ. ಇದು ಅರಸುರವರ ಮನೋದಾರ್ಢ್ಯಕ್ಕೆ ಸಾಕ್ಷಿ. ಹೀಗೆ ಬೆಳೆಸಿಕೊಂಡ ಮನೋಭಾವನೆಯೇ ಮುಂದೆ ರಾಜಕೀಯದ ಗರಡಿಯಾಟದಲ್ಲೂ ಅವರಿಗೆ ನೆರವಾಯಿತೆಂದು ಹೇಳಬಹುದು.

ಸಾಮಾನ್ಯವಾಗಿ ಎಲ್ಲರ ಬದುಕಿನಲ್ಲಿ ನಡೆಯುವಂತೆ ಅರಸುರವರ ಬದುಕಿನಲ್ಲೂ ಅವರ ಬದುಕಿನ ದಿಕ್ಕನ್ನೆ ಬದಲಿಸುವ ಕೆಲವು ಘಟನೆಗಳು ನಡೆದವು. ಬಿ. ಎಸ್ಸಿ., ಪರೀಕ್ಷೆಯನ್ನು ಪಾಸುಮಾಡಿ ವಾಪಸ್ಸು ಕಲ್ಲಹಳ್ಳಿಗೆ ಬರಲು ತೀರ್ಮಾನಿಸಿದರು. ಆಗ ಎರಡನೆ ಮಹಾಯುದ್ಧದ ಕಾಲ ಸಾಕಷ್ಟು ಯುವಕರನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲು ಸರಕಾರದಿಂದ ಪ್ರಯತ್ನ ನಡೆದಿತ್ತು. ಅರಸುರವರು ಸೈನ್ಯದಲ್ಲಿ ಲೆಫ್ಟಿನೆಂಟ್ ಆಗಿ ಕೆಲಸ ಮಾಡಲು ಆಯ್ಕೆಗೊಂಡಿದ್ದರು. ಕೆಲಸಕ್ಕೆ ಸೇರಲು ಅರಸುರವರು ಉತ್ಸುಕರಾಗಿದ್ದರು. ಆದರೆ ಅವರ ತಾಯಿ ಒಪ್ಪಿಗೆ ನೀಡದೆ ಇದ್ದುದರಿಂದ ಅವರು ಆ ನಿರ್ಧಾರವನ್ನು ಕೈಬಿಡಬೇಕಾಯಿತು, ಒಂದು ವೇಳೆ ಅವರು ಲೆಫ್ಟಿನೆಂಟ್ ಆಗಿದ್ದರೆ ಅವರ ಜೀವನದ ಗತಿ ಮಾತ್ರವಲ್ಲ ಕರ್ನಾಟಕದ ರಾಜಕೀಯದ ಗತಿಯೂ ಬದಲಾಗುತ್ತಿತ್ತು. ಹಾಗೆಯೇ ಮತ್ತೊಂದು ಘಟನೆ ಅವರನ್ನು ಸಿನಿಮಾ ನಟರನ್ನಾಗಿ ಪರಿವರ್ತಿಸುವಂತಾಗಿತ್ತು. ಮೈಸೂರಿನಲ್ಲಿ ಮಹಾತ್ಮ ಪಿಕ್ಚರ್ಸ್‌ನವರು 'ಭಕ್ತ ರಾಮದಾಸ' ಚಿತ್ರ ತಯಾರಿಕೆಯಲ್ಲಿದ್ದರು. ಆ ಚಿತ್ರಕ್ಕೆ ಚದುರಂಗ ಹಾಗೂ ಛಾಯಗ್ರಾಹಕ ಜಾನಕಿರಾಮ್ ಇಬ್ಬರೂ ನಿರ್ದೇಶಕರಾಗಿದ್ದರು. 'ರಾಮದಾಸ್' ಚಿತ್ರಕ್ಕೆ ಶೋಧನೆ ನಡೆಯುತ್ತಿದ್ದಾಗ ಚದುರಂಗರಿಗೆ ಅರಸುರವರೇ ಈ ಪಾತ್ರ ಏಕೆ ಮಾಡಬಾರದು ಎಂದು ಅನಿಸಿತು. ಹಾಗೆ ಅನಿಸಲು ಕಾರಣವು ಇತ್ತು. ಅರಸುರವರು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಶಾಸ್ತ್ರೀಯ ಸಂಗೀತ ಅವರಿಗೆ ಒಲಿಯದೇ ಇದ್ದರೂ ನಾಟಕದಲ್ಲಿ ಹಾಡುವ ಹವ್ಯಾಸವೂ ಅವರಿಗಿತ್ತು. ಅದರೊಂದಿಗೆ ಕೆಲವು ನಾಟಕಗಳಲ್ಲಿ ಪಾತ್ರ ಮಾಡಿ ನಂಜನಗೂಡಿನ ಶ್ರೀಕಂಠಶಾಸ್ತ್ರಿಗಳಿಂದ ಭೇಷ್ ಎನಿಸಿಕೊಂಡಿದ್ದರು. ಇದರೊಂದಿಗೆ ಅವರಿಗೆ ಮತ್ತೊಂದು ಅರ್ಹತೆಯೂ ಇತ್ತು. ಅವರ ಅಂಗಸೌಷ್ಠವ. ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಕೆ. ವಿ. ಅಯ್ಯರ್ ಏರ್ಪಡಿಸಿದ ಅಂಗ ಸೌಂದರ್ಯ ಸ್ಪರ್ಧೆಯಲ್ಲಿ ಅರಸುರವರಿಗೆ ಪ್ರಥಮ ಬಹುಮಾನ ಬಂದಿತ್ತು. ಈ ಎಲ್ಲ ಕಾರಣಗಳಿಂದಾಗಿ ಅರಸುರವರನ್ನು ರಾಮದಾಸ್ ಪಾತ್ರಕ್ಕೆ ಆಯ್ಕೆ ಮಾಡಲಾಯಿತು. ಪಾತ್ರದ ವೇಷಭೂಷಣಗಳೊಂದಿಗೆ ಅವರನ್ನು ಸ್ಕ್ರೀನ್‌ಟೆಸ್ಟ್ ಮಾಡಿದಾಗ ಸಿನಿಮಾದ ತಾಂತ್ರಿಕ ಸಿಬ್ಬಂದಿಗಳೆಲ್ಲರೂ ಇವರೇ ಸರಿಯಾದ ಆಯ್ಕೆ ಎಂದು ತೀರ್ಮಾನಿಸಿದರು. ಸುಮಾರು ಮುನ್ನೂರು ಅಡಿಗಳಷ್ಟು ಚಿತ್ರೀಕರಣವಾದ ಮೇಲೆ ಅವರ ಸಹೋದರ ಕೆಂಪರಾಜ ಅರಸುರವರು ಇದಕ್ಕೆ ಅಡ್ಡಿ ಪಡಿಸಿದುದ್ದರಿಂದ ಅವರ ಸಿನಿಮಾ ನಟನೆಯ ಅಧ್ಯಾಯ ಅಲ್ಲಿಗೆ ಕೊನೆಗೊಂಡಿತು. ಒಂದು ವೇಳೆ ಅವರು ಸಿನಿಮಾ ನಟನಾಗಿ ಯಶಸ್ವಿಯಾಗಿದ್ದಿದ್ದರೆ? ಇತಿಹಾಸವನ್ನು ಗುರುತಿಸುವಾಗ ಇಂತಹ ಪ್ರಶ್ನೆಗಳನ್ನು ನಾವು ಕೇಳಬಾರದು ಅಲ್ಲವೆ?

ಡಿ. ದೇವರಾಜ ಅರಸುರವರನ್ನು ಕೇವಲ ರಾಜಕಾರಣಿಯಾಗಿ ನೋಡಿದವರಿಗೆ ಅವರು ಪುಸ್ತಕ ಪ್ರೇಮಿಯಾಗಿದ್ದರು ಎನ್ನುವುದು ತಿಳಿದಿಲ್ಲ. ಅವರಿಗೆ ತತ್ವಶಾಸ್ತ್ರದ ಬಗ್ಗೆ ಹೆಚ್ಚು ಅಭಿರುಚಿಯಿತ್ತೆಂದು ಅವರೇ ಹೇಳಿಕೊಂಡಿದ್ದಾರೆ. ಅವರು ಓದಿನ ಎಲ್ಲ ಪುಸ್ತಕಗಳನ್ನೂ ಒಬ್ಬ ಪಂಡಿತನಂತೆ ಅರಗಿಸಿಕೊಂಡಿದ್ದರು ಎಂದು ಹೇಳಲಾಗದಿದ್ದರೂ ರಸೆಲ್, ಕಾಂಟ್, ಹೆಗಲ್, ಮಾರ್ಕ್ಸ್, ಗಾಂಧಿ, ಪೆರಿಯಾರ್, ಅಂಬೇಡ್ಕರ್, ಲೋಹಿಯಾ ಮೊದಲಾದವರ ಚಿಂತನೆಗಳ ಪರಿಚಯವಿತ್ತೆಂದು ಧಾರಾಳವಾಗಿ ಹೇಳಬಹುದು. ರಾಮಾಯಣ ಮಹಾಭಾರತಗಳಂತೂ ಅವರಿಗೆ ಬಾಯಿಪಾಠವಾಗಿದ್ದವು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಭಾಷಣಗಳಲ್ಲಿ, ಮಾತುಕತೆಗಳಲ್ಲಿ, ರಾಮಾಯಣ, ಮಹಾಭಾರತಗಳ ಉಲ್ಲೇಖ ಪುಂಖಾನು ಪುಂಖವಾಗಿ ಬರುತ್ತಿದ್ದವು. ಅವರಿಗೆ ಅತ್ಯಂತ ಹೆಚ್ಚು ಪ್ರಿಯವಾದ ಕೃತಿಗಳೆಂದರೆ ಕೌಟಿಲ್ಯನ ಅರ್ಥಶಾಸ್ತ್ರ ಹಾಗೂ ಮೆಕೆವಲ್ಲಿಯ ದಿ ಪ್ರಿನ್ಸ್. ಇವೆಲ್ಲದರ ಜೊತೆಗೆ ಸಾಕಷ್ಟು ಸಾಹಿತ್ಯದ ಪರಿಚಯವೂ ಅರಸುರವರಿಗಿತ್ತು. ಬಂಕಿಮಚಂದ್ರ, ಬಳನನಾಥ, ವೆಂಕಟಾಚಾರ್ಯರ ಕೃತಿಗಳು ಹಾಗೂ ಅವರ ಸಮಕಾಲೀನ ಸಾಹಿತಿಗಳಾದ ಬಿ.ಎಂ. ಶ್ರೀ ವೆಂಕಣ್ಣಯ್ಯ, ಕುವೆಂಪು, ಬೇಂದ್ರೆ ಮೊದಲಾದವರ ಸಾಹಿತ್ಯವನ್ನೂ ಅವರು ಓದಿಕೊಂಡಿದ್ದರು. ದೇವರಾಜ ಅರಸುರವರ ಈ ಹಿನ್ನಲೆ ಅವರನ್ನು ಇತರೆ ರಾಜಕಾರಣಿಗಳಿಗಿಂತ ಭಿನ್ನವಾಗಿಸಿತ್ತು.

ದೇವರಾಜ ಅರಸುರವರ ವಿವಾಹ 1943ರಲ್ಲಿ ಕಲ್ಲಹಳ್ಳಿಯಲ್ಲಿ ನಡೆಯಿತು. ಅವರ ಕೈ ಹಿಡಿದವರು ಪಾಳೆಗಾರ ವಂಶಕ್ಕೆ ಸೇರಿದ ಚಿಕ್ಕಮ್ಮಣ್ಣಿಯವರು. ಅರಸುರವರಂತೆಯೇ ಅವರದೂ ಗ್ರಾಮೀಣ ಸಂಸ್ಕೃತಿಯ ಹಿನ್ನೆಲೆ. ಹಳ್ಳಿಯ ಬದುಕಿನ ಕಷ್ಟ ಕೋಟಲೆಗಳೆಲ್ಲವನ್ನೂ ತಿಳಿದವರು. ಅವರಿಗೆ ಜನಿಸಿದ ಮೂರು ಮಕ್ಕಳು ಹೆಣ್ಣು ಮಕ್ಕಳೆ - ಚಂದ್ರಪ್ರಭಾ, ನಾಗರತ್ನ, ಭಾರತಿ, ಗಂಡು ಸಂತಾನವಿಲ್ಲ. ಇವರಲ್ಲಿ ಚಂದ್ರಪ್ರಭಾ ಹಾಗೂ ಭಾರತೀಯವರು ಸಂಪ್ರದಾಯದಂತೆ ಅರಸು ಕುಲಕ್ಕೆ ಸೇರಿದವರೊಂದಿಗೆ ಮದುವೆಯಾದರು. ಎರಡನೇ ಮಗಳು ನಾಗರತ್ನ ಅರಸರ ಪ್ರೀತಿಯ ಮಗಳು. ಅವರದು ಅಂತರ್ಜಾತಿಯ ವಿವಾಹ. ಮುಂದೆ ರಾಜಕೀಯದಲ್ಲಿ ಪ್ರಖ್ಯಾತಿ ಪಡೆದ ಎಂ. ಡಿ. ನಟರಾಜ್‌ರವರು ಅವರ ಪತಿ. ನಾಗರತ್ನ ಮುಂದೆ ತಮ್ಮ ತೋಟದ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದು ದೇವರಾಜ ಅರಸುರವರು ಅವರ ಜೀವನದಲ್ಲಿ ಎದುರಿಸಿದ ದೊಡ್ಡ ಅಘಾತಗಳಲ್ಲೊಂದು.

ರಾಜಕೀಯ ಹಿನ್ನಲೆ; ಸ್ವಾತಂತ್ರ್ಯ ಪೂರ್ವ:

ದೇವರಾಜ ಅರಸುರವರು ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಆಗಿನ ಇತರೆ ನಾಯಕರಂತೆ ತಮ್ಮನ್ನು ಸಂಪೂರ್ಣವಾಗಿ ಕಾಂಗ್ರೆಸ್ ಚಳುವಳಿಯಲ್ಲಿ ತೊಡಗಿಸಿಕೊಂಡವರಲ್ಲ. 1942ರಲ್ಲಿ ಜೈಲಿಗೆ ಹೋಗಿ ಬಂದಿದ್ದು ಉಂಟು. ಆದರೆ ಮಹಾರಾಜರ ಆಡಳಿತವನ್ನು ನೇರವಾಗಿ ಎದುರುಹಾಕಿಕೊಂಡಿರಲಿಲ್ಲ. ತಮ್ಮ ರಾಜಮನೆತನದ ಹಿನ್ನಲೆಯೂ ಇದಕ್ಕೆ ಕಾರಣವಾಗಿರಬಹುದು. ಆದರೆ ಉಳಿದ ರಾಜ ಮನೆತನದವರಂತೆ ಕಾಂಗ್ರೆಸ್ಸನ್ನು ವಿರೋಧಿಸಿದವರಲ್ಲ. ಅವರು ರಾಷ್ಟ್ರೀಯ ಕಾಂಗ್ರೆಸ್‌ನ ಸಕ್ರೀಯ ಸದಸ್ಯರಾಗಿದ್ದರು. ಅವರ ರಾಜಕೀಯ ಚಿಂತನೆ, ಚಟುವಟಿಕೆಗಳಿಗೆ ಪ್ರಾರಂಭದಲ್ಲಿ ಇಂಬುಕೊಟ್ಟವರು ಹುಣಸೂರಿನ ಆಗಿನ ಖ್ಯಾತ ವಕೀಲ ಕೃಷ್ಣಮೂರ್ತಿಯವರು. ಆದರೆ ಅವರ ನಿಜವಾದ ರಾಜಕೀಯ ಜೀವನ ಪ್ರಾರಂಭವಾಗಿದ್ದು ಸಾಹುಕಾರ ಚೆನ್ನಯ್ಯನವರ

ಮಾರ್ಗದರ್ಶನದಲ್ಲಿ. ಚೆನ್ನಯ್ಯನವರು ಆಗ ಮೈಸೂರಿನ ಅತ್ಯಂತ ಪ್ರಭಾವಿ ರಾಜಕಾರಣಿಯಾಗಿದ್ದರು. ಕಿಂಗ್‌ಮೇಕರ್ ಎಂದು ಅವರು ಪ್ರಸಿದ್ಧಿಯಾಗಿದ್ದರು. 1941ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಎರಡು ಸ್ಥಾನಗಳಿಗೆ ಚುನಾವಣೆ ನಡೆಯಿತು. ಸಾಹುಕಾರ ಚೆನ್ನಯ್ಯನವರು ತಾವೇ ಸ್ವತಃ ಐವತ್ತು ರೂಪಾಯಿ ಠೇವಣಿ ತುಂಬಿ ಅರಸುರವರನ್ನು ಚುನಾವಣೆ ಕಣಕ್ಕೆ ಇಳಿಸಿದರು. ಶ್ರೀಯುತರಾದ ಎಚ್. ಎಂ. ಚೆನ್ನಬಸಪ್ಪ, ನಂಜರಾಜ ಅರಸು, ನಂಜನಗೂಡು ನಾರಾಯಣರಾಯರು ಆ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಇತರೆ ಉಮೇದುವಾರರಾಗಿದ್ದರು. ಇಪ್ಪತ್ತು ರೂಪಾಯಿ ಕಂದಾಯ ಕಟ್ಟುತ್ತಿದ್ದ ಪ್ರಜೆಗಳು ಆಗಿನ ಮತದಾರರು. ಚುನಾವಣೆಯಲ್ಲಿ ಎಚ್. ಎಂ. ಚೆನ್ನಬಸಪ್ಪ ಹಾಗೂ ಅರಸುರವರು ಪ್ರತಿನಿಧಿಗಳಾಗಿ ಆಯ್ಕೆಯಾದರು. ಆಗ ಅರಸುರವರಿಗೆ ಕೇವಲ 26 ವರ್ಷ ವಯಸ್ಸು. ಪ್ರಜಾಪ್ರತಿನಿಧಿ ಸಭೆಯ ಅತ್ಯಂತ ಕಿರಿಯ ಸದಸ್ಯರೆಂಬ ಹೆಗ್ಗಳಿಕೆಯಿಂದ ವಿದ್ಯುಕ್ತವಾಗಿ ಅವರು ರಾಜಕೀಯದಲ್ಲಿ ಪ್ರವೇಶ ಮಾಡಿದರು.

ಪ್ರಜಾಪ್ರತಿನಿಧಿ ಸಭೆಯಲ್ಲೂ ರಾಜಕೀಯ ಪಕ್ಷಗಳ ಗುಂಪುಗಾರಿಕೆ ಇತ್ತು. ಕಾಂಗ್ರೆಸ್ ಸಹ ಇದಕ್ಕೆ ಹೊರತಾಗಿರಲಿಲ್ಲ. ಅರಸುರವರು ಆಗ ಕಾಂಗ್ರೆಸ್‌ನೊಳಗೆ ಒಂದು ಗುಂಪಿನನಾಯಕರಾಗಿದ್ದ ಹಿರಳ್ಳಿ ದಾಸಪ್ಪನವರ ಬೆಂಬಲಿಗರಾಗಿದ್ದರು. 1945ರಲ್ಲಿ ಪುನಃ ಪ್ರಜಾಪ್ರತಿನಿಧಿ ಸಭೆಗೆ ಚುನಾವಣೆ ಬಂತು. ಆಗ ಅರಸುರವರ ಮನೆಯ ಆರ್ಥಿಕ ಪರಿಸ್ಥಿತಿ ಹದಗೆಟ್ಟಿತ್ತು. ಹಣಕಾಸಿನ ಬಿಕ್ಕಟ್ಟು ಕಾಡುತ್ತಿತ್ತು. 150 ರೂ. ಠೇವಣಿ ಕಟ್ಟಬೇಕಾಗಿತ್ತು. ಅದೂ ಸಹ ಅರಸುರವರಿಗೆ ಸಾಧ್ಯವಿರಲಿಲ್ಲ. ಈ ಎಲ್ಲಾ ಜಂಜಾಟಗಳನ್ನು ಬಿಟ್ಟು ಊರಿನಲ್ಲಿ ಬೇಸಾಯ ಮಾಡಬೇಕು ಎಂದು ನಿರ್ಧರಿಸಿ ಅರಸು ಊರಿಗೆ ಮರಳಿದರು. ಈ ನಿರ್ಧಾರವನ್ನು ಸಾಹುಕಾರ್ ಚೆನ್ನಯ್ಯನವರಿಗೂ ತಿಳಿಸಿದ್ದರು. ಚೆನ್ನಯ್ಯನವರು ಹುಣಸೂರು ಕ್ಷೇತ್ರದಿಂದ ಬೇರೊಬ್ಬ ಅಭ್ಯರ್ಥಿಯನ್ನು ಸ್ಪರ್ಧಾಳುವಾಗಿ ಆಯ್ಕೆ ಮಾಡಿದ್ದರು. ಆದರೆ ಅರಸು ರಾಜಕೀಯದಿಂದ ದೂರವಿರಲು ತೀರ್ಮಾನಿಸಿದರೂ ರಾಜಕೀಯ ಅವರನ್ನು ಮತ್ತೆ ಸೆಳೆದುಕೊಂಡಿತು. ಸ್ಪರ್ಧಿಸಬೇಕಿದ್ದ ಹುರಿಯಾಳು ನಾಮಪತ್ರ ಸಲ್ಲಿಸುವ ಎರಡು ದಿನದ ಮೊದಲೆ ನಾಪತ್ತೆ. ಆಗ ಕಾಂಗ್ರೆಸ್‌ಪಕ್ಷದ ಪರವಾಗಿ ಸ್ಪರ್ಧಿಸುವುದೆಂದರೆ ಮಹಾರಾಜರ ಸರ್ಕಾರವನ್ನು ವಿರೋಧಿಸಿದಂತೆಯೇ ಆಗಿತ್ತು. ಸರ್ಕಾರದ ವಿರೋಧವನ್ನು ಕಟ್ಟಿಕೊಳ್ಳಲಾಗದ ದಿಗಿಲಿನಿಂದ ಆ ಹುರಿಯಾಳು ಕೊನೆಗಳಿಗೆಯಲ್ಲಿ ಕೈಕೊಟ್ಟಿದ್ದರು. ದಿಗ್ಮೂಢರಾದ ಚೆನ್ನಯ್ಯನವರು ಬೇರೆ ದಾರಿ ತೋರದೆ ನೇರವಾಗಿ ಹುಣಸೂರಿಗೆ ಹೋಗಿ ಅರಸುರವರನ್ನು ಕರೆಸಿ ಪರಿಸ್ಥಿತಿಯನ್ನು ವಿವರಿಸಿ ಮತ್ತೆ ಸ್ಪರ್ಧಿಸುವಂತೆ ಒತ್ತಾಯಿಸಿದರು. ಅವರ ಒತ್ತಾಯಕ್ಕೆ ಮಣಿದು ಸ್ಪರ್ಧಿಸುವುದು ಅರಸುರವರಿಗೆ ಅನಿವಾರ್ಯವಾಯಿತು. ಮತ್ತೊಮ್ಮೆ ಜಯಗಳಿಸಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದರು.

ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಅರಸುರವರು ಅಷ್ಟೇನು ಪ್ರಖ್ಯಾತಿ ಪಡೆಯಲಿಲ್ಲ. ಅವರ ಮಾತಿನಲ್ಲಿ ಹೇಳುವುದಾದರೆ, 'ಆಗ ಸಭೆಯಲ್ಲಿ ಮಾತನಾಡಲು ಸಾಕಷ್ಟು ಕಟ್ಟುನಿಟ್ಟುಗಳಿದ್ದವು. ನಾನು ಎಲ್ಲವನ್ನು ದೂರದಿಂದಲೆ ಗಮನಿಸುತ್ತಿದ್ದೆ. ಪಕ್ಷದ ನಾಯಕರೆಂದರೆ ದೂರದಿಂದಲೇ ಗೌರವಿಸುತ್ತಿದ್ದ ಕಾಲ. ಸಭೆಯಲ್ಲಿ ಅವಕಾಶ ಕೊಟ್ಟಾಗ ಮಾತನಾಡಬೇಕು. ಅವಕಾಶ ಸಿಗುತ್ತಿದ್ದುದೆ ಕಷ್ಟವಾಗಿದ್ದ ಕಾಲ ಅದು" ಹೀಗೆ ಕೇವಲ ಗಮನಿಸುವುದೇ ಅರಸರ ಅನುಭವವಾಗಿತ್ತು. ಈ ಅನುಭವ ಮುಂದೆ ಸಾಕಷ್ಟು ಸಹಾಯಕ್ಕೆ ಬಂದಿತು ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ.

ಆಗಿನ ಪ್ರತಿನಿಧಿ ಸಭೆಯಲ್ಲಿ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಅಪ್ರತಿಮ ವಾಗ್ಮಿ ಎಂದು ಹೆಸರುಗಳಿಸಿದ್ದರು. ಒಮ್ಮೆ ಅವರು ಸಭೆಯಲ್ಲಿ ಭಾಷಣ ಮಾಡಿದ ನಂತರ ಪಕ್ಷದಲ್ಲಿದ್ದ ಅರಸುರವರನ್ನು "ಹೇಗಿತ್ತು ನನ್ನ ಭಾಷಣ" ಎಂದು ಆತ್ಮಪ್ರಶಂಸೆಯಿಂದ ಕೇಳಿದಾಗ ಅರಸು ಗ್ರಾಮ ಶುನಕ ಅರಚಿದಂತೆ ಇತ್ತು ಎಂದು ಪ್ರತಿಕ್ರಿಯಿಸಿದರಂತೆ. ದಿವಾನ್ ಮಾಧವರಾಯರು ನಂತರ ಯಾರಿಂದಲೋ ಅದನ್ನು ಕೇಳಿಕೊಂಡು ಬಿದ್ದು ಬಿದ್ದು ನಕ್ಕರಂತೆ. ಅಷ್ಟೆ ಅಲ್ಲ ಅರಸುರವರ ದಿಟ್ಟತನವನ್ನು ಪ್ರಶಂಶಿಸಿ ಮೈದಡವಿ ಮಾತನಾಡಿದ್ದನ್ನು ಬಹಳ ಕಾಲದವರೆಗೂ ನೆನಪಿಸಿಕೊಳ್ಳುತ್ತಿದ್ದರು, ಎಂದು ಅವರ ಮಿತ್ರ ನಾಯ್ಡು ಬರೆಯುತ್ತಾರೆ. ರಾಜಕೀಯ ಜೀವನದ ಪ್ರಾರಂಭದಲ್ಲಿಯೇ ದಿಟ್ಟತನವನ್ನು ಮೈಗೂಡಿಸಿಕೊಳ್ಳಲು ಕಲಿತಿದ್ದಕ್ಕೆ ಇದೊಂದು ಉದಾಹರಣೆ.

## ಸ್ವಾತಂತ್ರ್ಯನಂತರದ ರಾಜಕೀಯದಲ್ಲಿ

1941ರಲ್ಲಿ ಚುನಾವಣಾ ರಾಜಕೀಯಕ್ಕೆ ಪಾದರ್ಪಣೆ ಮಾಡಿದ ಅರಸರು ತಮ್ಮ ಜೀವನದ ಕೊನೆಯ ಗಳಿಗೆಯವರೆಗೂ ಸೋಲನ್ನೆ ಕಂಡವರಲ್ಲವೆಂಬುದು, ಅವರ ಜನಪ್ರಿಯತೆ ನಾಯಕತ್ವದ ಸಾಮರ್ಥ್ಯ, ಚುನಾವಣಾ ರಾಜಕೀಯವನ್ನು ಕರಗತ ಮಾಡಿಕೊಂಡ ಚಾಣಾಕ್ಷತೆ ಇವೆಲ್ಲವನ್ನು ತೋರಿಸುತ್ತದೆ. ಅವರು ನಡೆದ ಹಾದಿಯಲ್ಲಿ ಶತ್ರುಗಳು ಮಿತ್ರರಾದರು, ಮಿತ್ರರು ಶತ್ರುಗಳಾಗಿದ್ದು ಅದೆಷ್ಟು ಬಾರಿಯೋ. ಭಾರತ ಗಣತಂತ್ರವಾದ ಮೇಲೆ 1952ರಲ್ಲಿ ನಡೆದ ಪ್ರಥಮ ಚುನಾವಣೆಯಲ್ಲಿ ಅದೂವರೆವಿಗೂ ತಮ್ಮ ಮಾರ್ಗದರ್ಶಕರಾಗಿದ್ದ ಸಾಹುಕಾರ್ ಚೆನ್ನಯ್ಯನವರ ವಿರೋಧಿ ಪಾಳಯದವರಾದ ಕೆಂಗಲ್ ಹನುಮಂತಯ್ಯನವರ ಒಡನಾಡಿಯಾಗಿದ್ದರು. ಹನುಮಂತಯ್ಯನವರು ಶಿಫಾರಸ್ಸು ಮಾಡಿದ ವ್ಯಕ್ತಿಗಳಿಗೆ ಟಿಕೇಟು ನೀಡಬಾರದೆಂದು ಚನ್ನಯ್ಯನವರ ಬೆಂಬಲಿಗರು ಪಟ್ಟು ಹಿಡಿದರೂ ಅರಸುರವರಿಗೆ ಟಿಕೇಟು ಸಿಕ್ಕಿ ಜಯಗಳಿಸಿದರು. ಚೆನ್ನಯ್ಯನವರ ವಿರೋಧಿ ಪಾಳಯದಲ್ಲಿದ್ದವರು ಆರಿಸಿ ಬರಬಾರದೆಂದು ಪ್ರಬಲ ವ್ಯೂಹ ರಚಿಸಿದರೂ, 12 ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದ ಕಾಂಗ್ರೆಸ್ ಕೇವಲ ಮೂರರಲ್ಲಿ ಜಯಗಳಿಸಲು ಕಷ್ಟಪಟ್ಟ ಕಾಲದಲ್ಲೂ ಅರಸುರವರು ಆರಿಸಿ ಬಂದದ್ದು ಅವರ ಮಾತಿನಲ್ಲೇ ಹೇಳುವುದಾದರೆ. "ಭೂಕಂಪದಲ್ಲಿ ಬದುಕಿ ಬಂದ ಹಾಗೆ, ಕಂಟಕವೊಂದು ಕಳೆದ ಹಾಗೆ". 1957ರ ಚುನಾವಣೆಯಲ್ಲಿ ಯಾವ ಆತಂಕವೂ ಇಲ್ಲದೆ ನಿರಾಯಾಸವಾಗಿ ಗೆದ್ದರು. 1957ರಲ್ಲಿ ನಿಜಲಿಂಗಪ್ಪನವರ ಸರಕಾರ ಭೂ ಸುಧಾರಣೆಯನ್ನು ಜಾರಿಗೆ ತರುವ ಉದ್ದೇಶದಿಂದ ಸಮಸ್ಯೆಯನ್ನು ಸವಿವರವಾಗಿ ಪರಿಶೀಲಿಸಲು ವಿಧಾನಮಂಡಲದ ಉಭಯ ಸದನಗಳಿಂದ ಕೂಡಿದ ಸೆಲೆಕ್ಟ್ (ಜಂಟಿ ಸಮಿತಿ) ಸಮಿತಿಯನ್ನು ರಚಿಸಿತು. ಅದರ ಸದಸ್ಯನಾಗಲು ಅರಸುರವರು ಕಾತುರದಿಂದಿದ್ದರೂ ಅವರ ಬಯಕೆ ಈಡೇರದಂತೆ ಪಟ್ಟಭದ್ರ ಹಿತಾಸಕ್ತಿಗಳು ತಡೆದವು. 1958 ರಿಂದ 62ರ ವರೆಗೂ ಅವರು ಯಾವುದೇ ಸಮಿತಿಯ ಸದಸ್ಯರಾಗಲೂ ಅವರಿಗೆ ಸಾಧ್ಯವಾಗಲಿಲ್ಲ. ಇದು ಅರಸುರವರ ಚಿಂತನೆಗಳಿಗೆ ಆಗ ಕಾಲ ಇನ್ನೂ ಪಕ್ವವಾಗಿರಲಿಲ್ಲ ಎನ್ನುವುದನ್ನು ಸೂಚಿಸುತ್ತದೆ.

1962ರ ಚುನಾವಣೆಯಲ್ಲಿ ಹುಣಸೂರಿನಲ್ಲಿ ಅರಸುರವರಿಗೆ ಪ್ರತಿಸ್ಪರ್ಧಿಯೇ ಇಲ್ಲದಷ್ಟು ಪ್ರಬಲರಾಗಿದ್ದರು. ಅವರ ಆಯ್ಕೆ ಅವಿರೋಧವಾಗಿ ಆಯಿತು. ಅದೇ ಚುನಾವಣೆಯಲ್ಲಿ ನಿಜಲಿಂಗಪ್ಪನವರು ಹೊಸದುರ್ಗ ಕ್ಷೇತ್ರದಿಂದ ಸ್ಪರ್ಧಿಸಿ ಅನಿರೀಕ್ಷಿತವಾಗಿ ಪರಾಭವಗೊಂಡರು. ಆದರೆ ಆಗ ಪ್ರಬಲ ಜಾತಿಗಳ ಕೈ ಹಿಡಿತದಲ್ಲಿದ್ದ ಕರ್ನಾಟಕದ ರಾಜಕೀಯದಲ್ಲಿ ನಿಜಲಿಂಗಪ್ಪನವರೇ

ಮುಖ್ಯಮಂತ್ರಿಯಾಗಬೇಕೆಂಬ ಒತ್ತಾಸೆ ಮಾಡಲಾಯಿತು. ಚುನಾವಣೆಯಲ್ಲಿ ಪರಾಭವಗೊಂಡ ವ್ಯಕ್ತಿ ಮುಖ್ಯಮಂತ್ರಿಯಾಗುವುದು ಸರಿಯಲ್ಲ ಎನ್ನುವುದು ಅರಸರ ಅಭಿಮತವಾಗಿತ್ತು. ಅದನ್ನು ಅವರು ನಿಜಲಿಂಗಪ್ಪನವರ ಎದುರಲ್ಲೆ ವ್ಯಕ್ತಪಡಿಸಿದರು ಎಂದು ಹೇಳಲಾಗಿದೆ. ಆದರೆ ಅರಸುರವರ ಪ್ರತಿರೋಧಕ್ಕೆ ಸಾಕಷ್ಟು ಶಾಸಕರು ಬೆಂಬಲ ವ್ಯಕ್ತಪಡಿಸಲಿಲ್ಲವಾದ್ದರಿಂದ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿ ಆಯ್ಕೆಯಾದರು. ಮೊಟ್ಟಮೊದಲಿಗೆ ಅರಸು ಮಂತ್ರಿಯಾಗುವ ಅವಕಾಶ ಲಭಿಸಿತು. ಅವರಿಗೆ ಸಾರಿಗೆ ಖಾತೆ ಕೊಡಲಾಯಿತು, ಜೊತೆಗೆ ಕಾರ್ಮಿಕ ಹಾಗೂ ಪ್ರವಾಸೋದ್ಯಮ ಖಾತೆಗಳು ಸೇರಿಕೊಂಡವು ನಂತರ ಪಶುಸಂಗೋಪನ ವಾರ್ತಾ ಮತ್ತು ಪ್ರಸಾರ ಮೀನುಗಾರಿಕೆ ಹಾಗೂ ರೇಷ್ಮೆ ಉದ್ಯಮಗಳ ಸಚಿವರೂ ಆದರು. ತಮಗೆ ಕೊಟ್ಟ ಯಾವುದೇ ಖಾತೆಯನ್ನು ಸಮರ್ಥವಾಗಿ ನಿರ್ವಹಿಸುತ್ತಾರೆ ಎಂಬ ಹೆಗ್ಗಳಿಕೆಗೆ ಅರಸು ಪಾತ್ರರಾದರು.

1967ರ ಚುನಾವಣೆಯಲ್ಲಿ ಅರಸುರವರಿಗೆ ಕಾಂಗ್ರೆಸ್ ಟಿಕೇಟು ಸಿಗುವ ಬಗ್ಗೆಯೇ ಅನುಮಾನವಿತ್ತು. ಪ್ರದೇಶ ಚುನಾವಣೆ ಸಮಿತಿಯ ಸದಸ್ಯತ್ವಕ್ಕೆ ನಿಜಲಿಂಗಪ್ಪನವರ ಅಭಿಷ್ಟೆಗೆ ವಿರುದ್ಧವಾಗಿ ಸ್ಪರ್ಧಿಸಿದ್ದ ಕಾರಣದಿಂದ ಅವರಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಸಿಗಲಾರದೆಂಬ ಅನುಮಾನವೂ ಇತ್ತು. ಆದರೆ ಕೊನೆಗೂ ಟಿಕೇಟನ್ನು ಪಡೆದ ಅರಸು ಮತ್ತೊಮ್ಮೆ ಅನಾಯಾಸವಾಗಿ ಜಯಗಳಿಸಿದರು. ನಿಜಲಿಂಗಪ್ಪನವರು ಮತ್ತೆ ಮುಖ್ಯ ಮಂತ್ರಿಯಾದರೂ ಬಹಳ ಕಾಲ ಆ ಹುದ್ದೆಯಲ್ಲಿ ಮುಂದುವರೆಯಲಾಗದಂತ ರಾಜಕೀಯ ಪರಿಸ್ಥಿತಿಯಲ್ಲಿ ಬದಲಾವಣೆಯುಂಟಾಯಿತು. ಅವರು ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾದರು. ಅರಸುರವರ ಸಚಿವ ಸಹೋದ್ಯೋಗಿಗಳಲ್ಲಿ ಹಿರಿಯರಾಗಿದ್ದರೂ ಸಹ ತಮ್ಮ ಸ್ಥಾನಕ್ಕೆ ವೀರೇಂದ್ರಪಾಟೀಲರನ್ನು ತಂದ ನಿಜಲಿಂಗಪ್ಪನವರ ನಿರ್ಧಾರ ಅರಸುರವರಲ್ಲಿ ತೀವ್ರ ಅಸಮಾಧಾನವನ್ನು ಹುಟ್ಟುಹಾಕಿತು. 1969 ಎಲ್ಲರಿಗೂ ತಿಳಿದಿರುವಂತೆ ರಾಷ್ಟ್ರೀಯ ಕಾಂಗ್ರೆಸ್‌ನ ಪರ್ವಕಾಲ. ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಇಭ್ಭಾಗವಾಯಿತು. ಆ ವರ್ಷ ಬೆಂಗಳೂರಿನ ಗಾಜಿನ ಅರಮನೆಯಲ್ಲಿ ನಡೆದ ಕಾಂಗ್ರೆಸ್ ಮಹಾಧಿವೇಶನದಲ್ಲಿ ರಾಷ್ಟ್ರಪತಿ ಸ್ಥಾನಕ್ಕೆ ಕಾಂಗ್ರೆಸ್ ಅಭ್ಯರ್ಥಿಯನ್ನು ಆರಿಸುವ ವಿಚಾರದಲ್ಲಿ ಕಾಂಗ್ರೆಸ್‌ನಲ್ಲಿ ಎರಡು ಗುಂಪುಗಳು ಹುಟ್ಟಿಕೊಂಡಿದ್ದವು. ಕಾಂಗ್ರೆಸ್‌ನ ಹಳಬರೆಲ್ಲ ನೀಲಂ ಸಂಜೀವರೆಡ್ಡಿಯವರನ್ನು ಬೆಂಬಲಿಸಿದರೆ, ಇಂದಿರಾನಾಯಕತ್ವದ ಬಣ ವಿ. ವಿ. ಗಿರಿಯವರಿಗೆ ಮನಃ ಸಾಕ್ಷಿಯಿಂದ ಬೆಂಬಲಿಸುವಂತೆ ಕರೆ ಇತ್ತರು. ಈ ಸಂದರ್ಭದಲ್ಲಿ ಅರಸು ತಮ್ಮ ರಾಜಕೀಯ ಜೀವನದ ಕವಲು ದಾರಿಯಲ್ಲಿ ನಿಂತಿದ್ದರು. ಈ ಎರಡು ಬಣಗಳಲ್ಲಿ ಯಾವ ಬಣವನ್ನು ಅವರು ಬೆಂಬಲಿಸುತ್ತಿದ್ದಾರೆಂಬುದರ ಮೇಲೆ ಅವರ ರಾಜಕೀಯದ ಭವಿಷ್ಯ ನಿರ್ಧಾರ ವಾಗಬೇಕಿತ್ತು. ನಿಜಲಿಂಗಪ್ಪನವರು ಅಧ್ಯಕ್ಷರಾದ ಸಂಸ್ಥಾ ಕಾಂಗ್ರೆಸ್, ಹಳೆಯ ತಲೆಮಾರಿನ ರಾಜಕಾರಣಿಗಳಿಂದ ಕೂಡಿತ್ತು. ಆರ್ ಕಾಂಗ್ರೆಸ್ ಎಂದು ಕರೆಸಿಕೊಂಡ ಇಂದಿರಾ ಕಾಂಗ್ರೆಸ್ ಹೊಸ ತಲೆಮಾರಿನ ರಾಜಕೀಯ ಶಕ್ತಿಗಳನ್ನು ಪ್ರತಿನಿಧಿಸಿತು. ರಾಜಧನರದ್ಧತಿ, ಬ್ಯಾಂಕ್ ರಾಷ್ಟ್ರೀಕರಣ, ವಿಮಾ ಸಂಸ್ಥೆಗಳ ರಾಷ್ಟ್ರೀಕರಣ ಮುಂತಾದ ಪ್ರಗತಿಪರ ಯೋಜನೆಗಳನ್ನು ಇಂದಿರಾ ಹಮ್ಮಿಕೊಂಡಿದ್ದರು. ಇದರ ಜೊತೆಗೆ ಗರೀಬಿ ಹಟಾವೊ ಘೋಷಣೆಯೊಂದಿಗೆ ಇಂದಿರಾಗಾಂಧಿ ಇದುವರೆವಿಗೂ ಕಾಂಗ್ರೆಸ್‌ನ ಪ್ರಬಲ ಜಾತಿಗಳ ಕಪಿಮುಷ್ಟಿಯಲ್ಲಿ ತಮ್ಮ ಗುರುತನ್ನು ಕಳೆದುಕೊಂಡಿದ್ದ ಹಿಂದುಳಿದ ವರ್ಗ, ದಲಿತರು ಹಾಗೂ ಅಲ್ಪಸಂಖ್ಯಾತರಲ್ಲಿ ಹೊಸ ಭರವಸೆಯನ್ನು ಮೂಡಿಸಿದರು. ಈ

ಎಲ್ಲ ಅಂಶಗಳನ್ನು ಕೂಲಂಕುಷವಾಗಿ ಗಮನಿಸಿದ ಅರಸು ಪ್ರಬಲ ಜಾತಿಗಳವರ ಹಿಡಿತದಿಂದ ಬಿಡಿಸಿಕೊಂಡು ಹೊಸ ರಾಜಕೀಯ ಶಕ್ತಿಯನ್ನು ರಾಜ್ಯದಲ್ಲಿ ಕಟ್ಟಲು ಇದೊಂದು ಸದಾವಕಾಶ ಎಂದರಿತು ನಿಜಲಿಂಗಪ್ಪನವರ ಬಣದಿಂದ ಹೊರಬಂದು ಇಂದಿರಾರವರನ್ನು ಬೆಂಬಲಿಸಿದರು. ಅವರ ರಾಜಕೀಯ ವೃತ್ತಿಗೆ ಸಂಬಂಧಿಸಿದಂತೆ ಅವರು ಎಂತಹ ಮಹತ್ವದ ನಿರ್ಧಾರ ತೆಗೆದುಕೊಂಡರೆಂಬುದನ್ನು ಕರ್ನಾಟಕ ರಾಜ್ಯದ ನಂತರದ ರಾಜಕೀಯ ಬೆಳವಣಿಗೆಯನ್ನು ಗಮನಿಸಿದ ಯಾರಿಗಾದರೂ ಅರಿವಾಗುವ ಸಂಗತಿ.

ರಾಷ್ಟ್ರೀಯ ಮಟ್ಟದಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಕರ್ನಾಟಕದಲ್ಲಿ ವಿರೇಂದ್ರಪಾಟೀಲರು ಮುಖ್ಯಮಂತ್ರಿಯಾಗಿದ್ದರು. ಅವರಿಗೆ ಒತ್ತಾಸೆಯಾಗಿ ನಿಂತವರು ರಾಮಕೃಷ್ಣ ಹಗಡೆಯವರು. ಇವರಿಬ್ಬರೂ. ಲವ-ಕುಶರೆಂದೆ ಪ್ರಖ್ಯಾತಿ ಪಡೆದಿದ್ದರು. ಇಂದಿರಾಗಾಂಧಿಯವರಿಂದ ಪ್ರೇರೇಪಿಸಲ್ಪಟ್ಟ ಹೊಸ ರಾಜಕೀಯದ ಅಲೆ ಕರ್ನಾಟಕದ ಮೇಲೂ ಅಪ್ಪಳಿಸಿತು. ವೀರೇಂದ್ರ ಪಾಟೀಲರ ಬೆಂಬಲಿಗರೂ ಒಬ್ಬೊಬ್ಬರಾಗಿ ಇಂದಿರಾ ಕಾಂಗ್ರೆಸ್‌ಗೆ ವಲಸೆ ಹೋಗಲು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಅರಸುರವರು ಪಕ್ಷಾಂತರಿಗಳ ಬೆಂಬಲದಿಂದ ಸರಕಾರ ರಚಿಸುವ ಸಾಧ್ಯತೆಯೂ ಇತ್ತು. ಆದರೆ ಅರಸುರವರು ಅದಕ್ಕೆ ಸಮ್ಮತಿಸಲಿಲ್ಲವಾದ್ದರಿಂದ 1970ರಲ್ಲಿ ರಾಷ್ಟ್ರಪತಿ ಆಡಳಿತದ ಘೋಷಣೆಯಾಯಿತು. ರಾಜ್ಯಪಾಲ ಧರ್ಮವೀರರ ಆಡಳಿತ ಪಾರಂಭವಾಯಿತು. ಈ ಸಮಯದಲ್ಲಿ ಅರಸುರವರಿಗೆ ಬೆಂಬಲ ವ್ಯಕ್ತಪಡಿಸಿದ ಪ್ರಮುಖ ನಾಯಕರೆಂದರೆ ಎಂ. ವಿ. ಕೃಷ್ಣಪ್ಪ, ಕೆಂಗಲ್ ಹನುಮಂತಯ್ಯ, ಕೊಲ್ಲೂರು ಮಲ್ಲಪ್ಪ, ದಯಾನಂದ ಸಾಗರ್, ಮಲ್ಲಿಕಾರ್ಜುನ ಸ್ವಾಮಿ, ಬದರಿ ನಾರಾಯಣ್, ಕೆ. ಹೆಚ್. ಪಾಟೀಲ್, ಸಿದ್ದವೀರಪ್ಪ ಮೊದಲಾದವರು.

ರಾಜ್ಯದಲ್ಲಿ ಒಂದು ಹೊಸ ಪಕ್ಷವನ್ನೆ ಕಟ್ಟುವ ಗುರುತರ ಜವಾಬ್ದಾರಿಯು ಅರಸುರವರ ಮೇಲಿತ್ತು. ಆ ಮಾರ್ಗದಲ್ಲಿ ಅವರು ಎದುರಿಸಿದ ಅಡ್ಡಿಆತಂಕಗಳು ಹಲವಾರು. ಕರ್ನಾಟಕದಲ್ಲಿ ಇಂದಿರಾಗಾಂಧಿಯವರ ಕಾಂಗ್ರೆಸ್‌ನ ಅಧ್ಯಕ್ಷರು ಯಾರಾಗಬೇಕೆಂಬ ವಿಷಯದಲ್ಲಿ ಸಾಕಷ್ಟು ವಿವಾದವೆದ್ದಿತ್ತು. ಅಲ್ಪಸಂಖ್ಯಾತ ಕೋಮಿಗೆ ಸೇರಿದವರಾದ್ದರಿಂದ ಅವರು ಅಧ್ಯಕ್ಷರಾದರೆ ಬಹುಸಂಖ್ಯಾತ ಜಾತಿಗಳು ಚುನಾವಣೆಯಲ್ಲಿ ಬೆಂಬಲಿಸಲಾರವೆಂದು ಕೆಂಗಲ್ ಹನುಮಂತಯ್ಯ ಹಾಗೂ ಸಿದ್ದವೀರಪ್ಪನವರ ಅಭಿಪ್ರಾಯವಾಗಿತ್ತು. ದೆಹಲಿಯಲ್ಲಿ ಈ ಕುರಿತು ಕಾಂಗ್ರೆಸ್ ಅಡ್‌ಹಾಕ್ ಸಮಿತಿಯ ರಚನಾ ಸಂದರ್ಭದಲ್ಲಿ ಇಂದಿರಾಗಾಂಧಿಯವರ ಎದುರಿಗೆ ಈ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದ್ದರೂ ಕೂಡ ಇದಕ್ಕೆ ಅರಸು "ಈ ಜನ ಇದೇ ಅಳತೆಗೋಲನ್ನೇ ನಿಮಗೂ ಅನ್ವಯಿಸಿ ಮೈನಾರಿಟಿನಾಯಕಿ ಎನ್ನಬಹುದಲ್ಲ?" ಎಂದು ಪ್ರತಿಕ್ರಿಯಿಸಿದಾಗ ಅವರ ವಿರೋಧಿಗಳ ಬಾಯಿಕಟ್ಟಿತು. ಇಂದಿರಾಗಾಂಧಿ, ಅರಸುರವರನ್ನೆ ಕರ್ನಾಟಕ ರಾಜ್ಯ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರನ್ನಾಗಿ ನೇಮಕ ಮಾಡಿದರು. ಮುಂದೆ ಮುಖ್ಯ ಮಂತ್ರಿಯಾಗಲು ಅರಸುರವರಿಗೆ ಈ ಅಧ್ಯಕ್ಷ ಸ್ಥಾನ ಪ್ರಥಮ ಸೋಪಾನವಾಯಿತು.

ಪಕ್ಷದ ಅಧ್ಯಕ್ಷರಾದೊಡನೆ ಅರಸು ಪಕ್ಷದ ಸಂಘಟನೆಗೆ ಹೊಸ ಸ್ವರೂಪ ನೀಡಿದರು. ಕರ್ನಾಟಕದಾದ್ಯಂತ ಸಂಚಾರ ಮಾಡಿ ಹೊಸ ಅಲೆಯನ್ನು ಎಬ್ಬಿಸಿದರು. ಅದುವರೆವಿಗೆ

ರಾಜಕೀಯದಲ್ಲಿ ಕಡೆಗಣಿಸಲ್ಪಟ್ಟ ವರ್ಗ, ಜಾತಿಗಳನ್ನು ಒಗ್ಗೂಡಿಸಿ ಒಂದು ಹೊಸ ರಾಜಕೀಯ ಚಲನಶೀಲತೆಯನ್ನು ಹಿಂದುಳಿದ ಹಾಗೂ ದಲಿತ ವರ್ಗಗಳಲ್ಲಿ ಹುಟ್ಟುಹಾಕುವ ಪ್ರಯತ್ನ ಮಾಡಿದರು. ಈ ಪ್ರಯತ್ನದ ಫಲವನ್ನು ಅವರು 1972ರ ಚುನಾವಣೆಯಲ್ಲಿ ಕಂಡರು. ಆ ಚುನಾವಣೆಯಲ್ಲಿ ಪಕ್ಷದ ಟಿಕೇಟನ್ನು ಅಭ್ಯರ್ಥಿಗಳಿಗೆ ಹಂಚುವಾಗಲೆ ಅರಸುರವರು ಹಿಂದುಳಿದ ವರ್ಗ, ಅಲ್ಪಸಂಖ್ಯಾತರು ಹಾಗೂ ದಲಿತರಿಗೆ ಅದೂವರೆವಿಗೆ ಸಿಗದಿದ್ದಷ್ಟು ಪ್ರಾತಿನಿಧ್ಯವನ್ನು ನೀಡಿದರು. ಅರಸುರವರ ಪ್ರಯತ್ನ, ಇಂದಿರಾ ಬಿರುಗಾಳಿ ಈ ಎಲ್ಲದರ ಪರಿಣಾಮವಾಗಿ, ಕಾಂಗ್ರೆಸ್ (ಆರ್) ಕರ್ನಾಟಕದಲ್ಲಿ ಪ್ರಚಂಡ ಜಯಗಳಿಸಿತು. ಕರ್ನಾಟಕ ರಾಜಕೀಯದಲ್ಲಿ ಮೊದಲಬಾರಿಗೆ ಹಿಂದುಳಿದ ವರ್ಗಗಳಿಗೆ ರಾಜಕೀಯ ಶಕ್ತಿ ಬಂದಿತು. ಕೇವಲ ಪ್ರಬಲ ಜಾತಿಗಳ ನಾಯಕರುಗಳಿಗೆ ಮಾತ್ರ ಅಧಿಕಾರದ ಗದ್ದುಗೆ ಮೀಸಲು ಎನ್ನುವ ಅಧ್ಯಾಯ ಮುಗಿದಿತ್ತು. 1972 ಮಾರ್ಚ್ 20ರಂದು ಕರ್ನಾಟಕ ರಾಜ್ಯದ ಎಂಟನೆಯ ಮುಖ್ಯಮಂತ್ರಿಯಾಗಿ ಅರಸು ಆಯ್ಕೆಯಾದರು.

# 2 ಮುಖ್ಯಮಂತ್ರಿಯಾಗಿ ಅರಸು ಸಾಧನೆಗಳು

ಮುಖ್ಯಮಂತ್ರಿಯಾಗಿ ಅರಸು ಅಧಿಕಾರ ವಹಿಸಿಕೊಂಡ ಪ್ರಾರಂಭದಲ್ಲೆ ಎರಡು ಆದ್ಯತೆಗಳನ್ನು ಗುರುತಿಸಿಕೊಂಡಿದ್ದರು. ಮೊದಲನೆಯದು, ಹಿಂದುಳಿದ ಹಾಗೂ ದಲಿತರ ರಾಜಕೀಯ ಸಂಘಟನೆ, ಎರಡನೆಯದಾಗಿ ಬಡವರ ಏಳಿಗೆಗಾಗಿ ಅಗತ್ಯವಾದ ಆರ್ಥಿಕ ಪರಿವರ್ತನೆ. ಹೀಗೆ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಯ ಹರಿಕಾರರಾಗಿ ತಮ್ಮನ್ನು ಗುರುತಿಸಿಕೊಂಡರು. ಅದರ ಪರಿಣಾಮವಾಗಿ ಕರ್ನಾಟಕದ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಅವರ ಅಧಿಕಾರವಧಿಯಲ್ಲಿ ಕೆಲವು ಕ್ರಾಂತಿಕಾರಕ ಬದಲಾವಣೆಗಳಾದವು. ಅದು ಒಂದು ರೀತಿಯಲ್ಲಿ ಪಕ್ಷ ರಾಜಕಾರಣ, ದಕ್ಷ ಆಡಳಿತ ಎರಡರ ಸಾಮರ್ಥ್ಯವನ್ನೂ ಸಮರ್ಥವಾಗಿ ನಿರ್ವಹಿಸಿದ ಸಫಲ ರಾಜಕಾರಣಿ ಮುಖ್ಯಮಂತ್ರಿಯಾಗಿ ಅವರ ಸಾಧನೆಗಳ ದೊಡ್ಡ ಪಟ್ಟಿಯೇ ಇದೆ.

1972ರ ಚುನಾವಣೆಯ ಸಮಯದಲ್ಲಿ ನಾಡಿನ ಉದ್ದಗಲಕ್ಕೂ ಸಂಚರಿಸಿ ಅರಸು ಎಲ್ಲ ಕಡೆಯಲ್ಲೂ ಜನರಿಗೆ ಮೈಸೂರು ರಾಜ್ಯವನ್ನು ಕರ್ನಾಟಕ ಎಂದು ನಾಮಕರಣ ಮಾಡುವ ಬಯಕೆ ಇದೆ ಎಂದು ಅರಿತರು. ಅಧಿಕಾರಕ್ಕೇರಿದ ಮರು ವರ್ಷವೆ ಅಂದರೆ 1973ರಲ್ಲಿ 'ಕರ್ನಾಟಕ'ದ ಉದಯವಾಯಿತು.

ಎರಡನೆಯದಾಗಿ, ಅರಸು ಭೂಸುಧಾರಣೆಯನ್ನು ಜಾರಿಗೆ ತರುವಲ್ಲಿ ತೋರಿದ ಆಸಕ್ತಿ. ಈ ಬಗೆಗಿನ ಪ್ರಯತ್ನ ಈ ಮೊದಲೆ ಪ್ರಾರಂಭವಾಗಿತ್ತಾದರೂ ಗೇಣಿದಾರರ ಪರವಾಗಿ ಭೂಸುಧಾರಣೆಯನ್ನು ಜಾರಿಗೆ ತರಲು ಬೇಕಾದ ರಾಜಕೀಯ ಇಚ್ಛಾಶಕ್ತಿಯನ್ನು ಯಾರೂ ಪ್ರದರ್ಶಿಸಿರಲಿಲ್ಲ. (ಸ್ವಲ್ಪಮಟ್ಟಿಗೆ ಕಡಿದಾಳ್ ಮಂಜಪ್ಪನವರನ್ನು ಹೊರತುಪಡಿಸಿ). ಚುನಾವಣಾ ಪ್ರಚಾರದ ಸಮಯದಲ್ಲಿ ನೀಡಿದ ವಾಗ್ದಾನವನ್ನು ಈಡೇರಿಸಲು ಅರಸು ಬದ್ಧರಾಗಿದ್ದರು. ಅವರು ಅಧಿಕಾರಕ್ಕೆ ಬಂದ ಮರುವರ್ಷವೇ ಭೂಸುಧಾರಣಾ ಕಾನೂನಿನ ಕರಡು ಸಿದ್ಧವಾಯಿತು. ವಿಧಾನ ಮಂಡಲದಲ್ಲಿ ಶಾಸನಕ್ಕೆ ವಿರೋಧ ಬರದಂತೆ ಜನಾಭಿಪ್ರಾಯ ರೂಪಿಸಲು ಅರಸು ಸಫಲರಾಗಿದ್ದರು. ಗೇಣಿಹಕ್ಕನ್ನು ನಿರ್ಧರಿಸಲು, ಜನತಾ ನ್ಯಾಯಾಲಯಗಳನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಈ ಜನತಾ ನ್ಯಾಯಾಲಯದಲ್ಲಿ ಶಾಸಕರು, ಮಹಿಳೆಯರು, ಹರಿಜನ, ಗಿರಿಜನರಿಗೆ ಪ್ರಾತಿನಿಧ್ಯವಿತ್ತು. 1974ರ ಏಪ್ರಿಲ್ ಒಂದರಿಂದ ಈ ಐತಿಹಾಸಿಕ ಕಾರ್ಯ ಆರಂಭವಾಯಿತು. ಭೂಮಿಯ ಒಡೆತನ, ಗೇಣಿ ಹಕ್ಕು ಇವುಗಳನ್ನು ಆಯಾ ಗ್ರಾಮದ ಜನರ ಸಮ್ಮುಖದಲ್ಲೆ ನಿರ್ಧರಿಸಲು ಇದರಿಂದ ಸಹಾಯಕವಾಯಿತು. ದೂರದ ನ್ಯಾಯಾಲಯಗಳಿಗೆ ಈ ಕಾರ್ಯ ವಹಿಸಿದರೆ ಕಾನೂನಿನ ಸಂಕೀರ್ಣ ಬಲೆಯಲ್ಲಿ ಭೂಮಾಲೀಕರು ಬಚಾವಾಗುವ ಸಾಧ್ಯತೆ ಇದೆ ಎಂದು ಅರಸುರವರಗೆ ತಿಳಿದಿತ್ತು. ಇಡೀ ರಾಷ್ಟ್ರದಲ್ಲೆ ಇದೊಂದು ಐತಿಹಾಸಿಕ ಸಾಧನೆ ಎಂದು ಗುರುತಿಸಲ್ಪಟ್ಟಿತ್ತು.

ಅರಸುರವರ ಮತ್ತೊಂದು ಮಹತ್ಸಾಧನೆ ಎಂದರೆ ಜೀತವಿಮುಕ್ತಿ ಪದ್ಧತಿ ಈ ಅಮಾನುಷ ಪದ್ಧತಿಗೆ ಮಂಗಳ ಹಾಡಲು ಕಂಕಣಬದ್ಧವಾಗಿ ನಿಂತರು. ಇದನ್ನು ಸಂಪೂರ್ಣವಾಗಿ ತೊಡೆದುಹಾಕಲು ಅವರಿಗೆ ಸಾಧ್ಯವಾಗಲಿಲ್ಲ ಎನ್ನುವುದು ನಿಜವಾದರೂ ಸಿರಿವಂತರ ದುಡಿಮೆಯ ಗಾಣಕ್ಕೆ ಸಿಕ್ಕಿ, ಕ್ರೌರ್ಯಕ್ಕೆ ಬೆನ್ನು ಬಾಗಿದವರಿಗೆ ಸಿಡಿದು ನಿಲ್ಲುವಂತೆ ಮಾಡಲು ಪ್ರಾಮಾಣಿಕ ಪ್ರಯತ್ನ ಪಟ್ಟಿದ್ದು ನಿಜ. ಅವರ ಕಾಲದಲ್ಲಿ ಸುಮಾರು 65 ಸಾವಿರ ಜೀತದಾಳುಗಳು ಋಣವಿಮುಕ್ತಿ ಹೊಂದಿದರು ಎನ್ನುವ ಅಂಶ ಸಾಮಾನ್ಯ ಸಾಧನೆಯೇನಲ್ಲ.

ಬಡಕೂಲಿಕಾರ್ಮಿಕರಿಗೆ ನ್ಯಾಯವಾಗಿ ಸಿಗಬೇಕಾದ ಕೂಲಿ ಸಿಗುವಂತೆ ಮಾಡಲು ಅರಸು ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಪಟ್ಟಭದ್ರ ಹಿತಾಸಕ್ತಿಗಳನ್ನು ಎದುರು ಹಾಕಿಕೊಂಡು, ಕನಿಷ್ಟ ಕೂಲಿಯನ್ನು ನಿಗದಿಪಡಿಸಿದ ಕೀರ್ತಿ ಅವರಿಗೆ ಸಲ್ಲಬೇಕು. ಇದರಿಂದಾಗಿ ಅವರು ಅಪಾರ ಸಂಖ್ಯೆಯ ಕೂಲಿಕಾರ್ಮಿಕರ ಮೆಚ್ಚುಗೆಗೆ ಪಾತ್ರರಾದರು. ಅಷ್ಟೆ ಅಲ್ಲದೆ ಹೆಚ್ಚುವರಿ ಭೂಮಿಯನ್ನು ಕೃಷಿಕಾರ್ಮಿಕರಿಗೆ ಹಂಚುವ ವ್ಯವಸ್ಥೆಯನ್ನು ಅವರು ಮಾಡಿದರು. ಸಣ್ಣ ಹಿಡುವಳಿದಾರರಿಗೆ ಸಾಲ ಸೌಲಭ್ಯ ಶೀಘ್ರಗತಿಯಲ್ಲಿ ದೊರಕುವಂತೆ ವ್ಯವಸ್ಥೆ ಮಾಡಲಾಯಿತು. ನಿರಂತರ ಸಾಲದಲ್ಲಿ ಮುಳುಗಿದ ನಿರ್ಗತಿಕರಿಗೆ ಋಣ ಪರಿಹಾರವನ್ನು ನೀಡಲಾಯಿತು. ಇದರಿಂದ ಲಕ್ಷಾಂತರ ಮಂದಿ ಋಣಮುಕ್ತರಾಗಿ ಸ್ವಾಭಿಮಾನದಿಂದ ತಮ್ಮ ಕಾಲ ಮೇಲೆ ತಾವೇ ನಿಲ್ಲುವಂತೆ ಮಾಡಿದ ಕೀರ್ತಿಯೂ ಇವರಿಗೆ ಸಲ್ಲುತ್ತದೆ, ಅಲಕ್ಷ್ಯ ಮಾಡಲಾಗಿದ್ದ ಶೋಷಿತ ಹಾಗೂ ಗ್ರಾಮೀಣ ಜನರ ಬದುಕಿಗೆ ಒಂದು ಹೊಸ ಆಯಾಮ ದೊರೆಯಿತು.

ಕೃಷಿಗೆ ಸಂಬಂಧಿಸಿದಂತೆ ಹತ್ತು ಹಲವು ಕಾರ್ಯಕ್ರಮಗಳನ್ನು ಅರಸುರವರ ಅವಧಿಯಲ್ಲಿ ಹಮ್ಮಿಕೊಳ್ಳಲಾಯಿತು. ನೆಲದ ಆಳದ ಜಲದ ಬಳಕೆ, ಹರಿದು ವ್ಯರ್ಥವಾಗುವ ನೀರನ್ನು ಸದುಪಯೋಗ ಪಡಿಸುವುದು ಸಣ್ಣ ನೀರಾವರಿ ಯೋಜನೆ, ಮಣ್ಣು ಸಂರಕ್ಷಣೆ, ಸಣ್ಣ ಹಾಗೂ ದೊಡ್ಡ ವಿದ್ಯುತ್ ಯೋಜನೆ ಎಲ್ಲವುಗಳಿಗೆ ಆದ್ಯತೆ ನೀಡಲಾಯಿತು. ಕಾಳಿಯೋಜನೆ ಆರಂಭಗೊಂಡಿದ್ದು ಅರಸುರವರ ಕಾಲದಲ್ಲಿಯೇ. ನಗರ ಗ್ರಾಮೀಣ ಬಡಜನರಿಗೆ ಚಿಕ್ಕ ಮನೆ ಕಟ್ಟಿಕೊಳ್ಳಲು ನೆರವು, ಆರ್ಥಿಕವಾಗಿ ದುರ್ಬಲರಾದವರಿಗಾಗಿ ಉಚಿತ ನಿವೇಶನಗಳ ಹಂಚಿಕೆ ಹೀಗೆ ಹಂಚಿಕೆಯಾದ ಮನೆಗಳಲ್ಲಿ ಶೇಕಡಾ 55 ರಷ್ಟು ಹಿಂದುಳಿದ ವರ್ಗದವರ ಮನೆಗಳಿಗೆ ಒಂದೊಂದು ದೀಪ ಹಾಕಿಸುವ ಭಾಗ್ಯಜ್ಯೋತಿ ಕಾರ್ಯಕ್ರಮ ದಲಿತರ ಕಷ್ಟ ಹಾಗೂ ಅವರ ಮುಂದಿನ ಭವಿಷ್ಯಕ್ಕೆ ಬೇಕಾದ ಅಗತ್ಯಗಳ ಬಗ್ಗೆ ಅವರಿಗೆ ಎಷ್ಟು ಸ್ಪಷ್ಟವಾದ ಅರಿವಿತ್ತು ಎಂಬುದನ್ನು ತೋರಿಸುತ್ತದೆ.

ಅರಸು ಅವರ ಮತ್ತೊಂದು ಕ್ರಾಂತಿಕಾರಕ ಯೋಜನೆ ಶಿಕ್ಷಣದ ರಾಷ್ಟ್ರೀಕರಣ ಕಾರ್ಯಗತವಾಗಲಿಲ್ಲ. ಆದರೆ ಎಲ್ಲರಿಗೂ ಸಮಾನ ಶಿಕ್ಷಣದ ಅವಕಾಶ ಸಿಗಬೇಕೆಂಬುದು ಅವರ ಹಂಬಲವಾಗಿತ್ತು. ಕೇವಲ ಕೆಲವೇ ಜಾತಿಗಳ ಜನರಿಗೆ ಕೈಗೆಟುಕುವಂತಿದ್ದ ಶಿಕ್ಷಣವನ್ನು ಎಲ್ಲರಿಗೂ ದೊರಕಿಸಿಕೊಡಬೇಕೆಂಬುದು ಅವರ ಇಚ್ಚೆಯಾಗಿತ್ತು. ಆದರೆ ಅವರ ಯೋಜನೆಗೆ ಸಾಕಷ್ಟು ಬೆಂಬಲ ಸಿಗಲಿಲ್ಲ. ಶಿಕ್ಷಣದ ರಾಷ್ಟ್ರೀಕರಣ ಅಸಭ್ಯವಾದರೂ ಜೀತದಾಳುಗಳಂತೆ ದುಡಿಯುತ್ತಿದ್ದ ಶಿಕ್ಷಕರಿಗೆ ಆರ್ಥಿಕ ಸ್ವಾವಲಂಬನೆಯನ್ನು ನೀಡಲು ಅವರು ಸ್ವಲ್ಪಮಟ್ಟಿಗೆ ಸಫಲರಾದರು. ಸರಿಯಾಗಿ ಸಂಬಳವಿಲ್ಲದೆ ದುಡಿಯುತ್ತಿದ್ದ ಶಿಕ್ಷಕರಿಗೆ ಸರಕಾರದಿಂದ ಚೆಕ್ ಮೂಲಕ ಹಣ ಪಾವತಿಯಾಗುವಂತೆ ನೋಡಿಕೊಂಡರು. ನಿರುದ್ಯೋಗದ ಸಮಸ್ಯೆ ಅರಸುರವರನ್ನು ಕಂಗೆಡಿಸಿತ್ತು. ಆ ಸಮಸ್ಯೆಯನ್ನು ಅಷ್ಟು ಸುಲಭವಾಗಿ ಪರಿಹರಿಸಲು ಸಾಧ್ಯವಿಲ್ಲವೆಂದು ಅವರಿಗೆ ತಿಳಿದಿತ್ತು. ಉದ್ಯೋಗ ದೊರಕದೆ ಹತಾಶರಾದ ಲಕ್ಷಾಂತರ ಯುವಕರಿಗೆ ಸ್ವಲ್ಪಮಟ್ಟಿಗಾದರೂ ನೆರವಾಗುವ ಯೋಜನೆಯೊಂದನ್ನು ಹಾಕಿಕೊಳ್ಳಲಾಯಿತು. ಅದೇ ಸ್ಟೈಫಂಡರಿ ಯೋಜನೆ ಈ ಯೋಜನೆಯನ್ನು ನಂತರ ಪಶ್ಚಿಮ ಬಂಗಾಳ, ಕೇರಳ ರಾಜ್ಯಗಳೂ ಅನುಸರಿಸಿದವು ಎನ್ನುವುದು ಅರಸು ಅವರ ದೂರದೃಷ್ಟಿಗೆ ಒಂದು ಉದಾಹರಣೆ. ಜನರಿಗೆ ಅನುಕೂಲವಾಗುವಂತಹ

ಕಾರ್ಯಕ್ರಮಗಳನ್ನು ಪಟ್ಟಭದ್ರ ಹಿತಾಸಕ್ತಿಗಳನ್ನು ಎದುರು ಹಾಕಿಕೊಳ್ಳಲು ಅವರು ಹಿಂಜರಿಯುತ್ತಿರಲಿಲ್ಲ ಎನ್ನುವುದಕ್ಕೆ ಸರಕಾರಿ ನೌಕರರ ನಿವೃತ್ತಿ ವಯಸ್ಸನ್ನು 58 ವರ್ಷಗಳಿಂದ 55 ವರ್ಷಗಳಿಗೆ ಇಳಿಸಿದ್ದು ಸಾಕ್ಷಿಯಾಗಿದೆ. ಈ ನಿರ್ಧಾರ ಸಹಜವಾಗಿಯೇ ಸರ್ಕಾರಿ ನೌಕರರಲ್ಲಿ ಅಸಮಧಾನ ಮೂಡಿಸಿತ್ತು. ಆದರೆ ರಾಜ್ಯದ ಅಸಂಖ್ಯಾತ ಯುವಕರು, ನಿರುದ್ಯೋಗಿಗಳು ಅರಸರ ಈ ಕ್ರಮವನ್ನು ಶ್ಲಾಘಿಸಿದರು. ಇದರ ಜೊತೆಯಲ್ಲಿ ಇಪ್ಪತ್ತು ವರ್ಷ ಸೇವೆ ಸಲ್ಲಿಸಿದ ನೌಕರರಿಗೆ ಸ್ವಯಂ ನಿವೃತ್ತಿಯ ಯೋಜನೆಯನ್ನು ಜಾರಿಗೊಳಿಸಲಾಯಿತು. ಅರಸರ ಕಳಕಳಿ ನಿರುದ್ಯೋಗಿ ಯುವಕರ ಬಗ್ಗೆ ಮಾತ್ರ ಇರಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಇರುವಂತೆ ವೃದ್ಧರಿಗೆ ನೆರವಾಗುವ ಪ್ರಯತ್ನವನ್ನೂ ಅವರು ಮಾಡಿದರು. ಇದರ ಪರಿಣಾಮವೇ ವೃದ್ಧಾಪ್ಯವೇತನ ಯೋಜನೆ. ಇದರಿಂದಾಗಿ ನಿಸ್ಸಹಾಯಕರಾದ ಲಕ್ಷಾಂತರ ವೃದ್ಧರು ಮಾಸಿಕ 40 ರೂಪಾಯಿ ವೇತನ ಪಡೆಯುವಂತಾದರು.

ಅರಸು ಅವರನ್ನು ಬಹುವಾಗಿ ಕಾಡಿದ ಮತ್ತೊಂದು ಸಮಸ್ಯೆ ಜಾತಿ ವ್ಯವಸ್ಥೆ. ಸಾವಿರಾರು ವರ್ಷಗಳಿಂದ ಬೇರುಬಿಟ್ಟ ಈ ವ್ಯವಸ್ಥೆಯನ್ನು ಸುಲಭವಾಗಿ ಕಿತ್ತೊಗೆಯುವುದು ಅಸಾಧ್ಯವೆಂಬ ಅರಿವು ಅವರಿಗಿತ್ತು. ಅತ್ಯಂತ ಅಮಾನವೀಯ ಸ್ಥಿತಿಯಲ್ಲಿ ಬದುಕುತ್ತಿದ್ದ ಜಾತಿ ವ್ಯವಸ್ಥೆಯು ಅತ್ಯಂತ ಕೆಳಸ್ತರದಲ್ಲಿದ್ದ ಅಸ್ಪೃಶ್ಯರ ಬದುಕನ್ನು ಸ್ವಲ್ಪಮಟ್ಟಿಗಾದರೂ ಸಹನೀಯವಾಗಿಸಬೇಕೆಂದು ಅವರು ಹವಣಿಸಿದರು. ಅಸ್ಪೃಶ್ಯರಿಗೆ ಪರಂಪರಾನುಗತವಾಗಿ ಬಂದ ಮಲಹೊರುವ ವೃತ್ತಿಗೆ ಇತಿಶ್ರಿ ಹಾಡಲು ನಿರ್ಧರಿಸಿ ಒಂದು ಶಾಸನವನ್ನು ಮಾಡಲಾಯಿತು. ಈ ಅನಿಷ್ಠ ಪದ್ಧತಿಯನ್ನು ಕಾನೂನುಬದ್ಧವಾಗಿ ನಿಷೇಧಿಸಿದ ಕೀರ್ತಿಅರಸುರವರಿಗೆ ಸಲ್ಲುತ್ತದೆ.

ಶ್ರೀ ಡಿ. ದೇವರಾಜ ಅರಸುರವರ ಹೆಸರು ಕರ್ನಾಟಕದಲ್ಲಿ ಅಜರಾಮರವಾಗಿ ಉಳಿಯುವಂತೆ ಮಾಡಿದ ಅವರ ದೊಡ್ಡ ಸಾಧನೆಯೆಂದರೆ ಹಾವನೂರು ವರದಿಯ ಅನುಷ್ಠಾನ. ಶಿಕ್ಷಣದಿಂದ ವಂಚಿತರಾದ ಆರ್ಥಿಕ, ಸಾಮಾಜಿಕ ಅಸಮಾನತೆಗೆ ಒಳಗಾದ ಬಹುಸಂಖ್ಯಾತ ಹಿಂದುಳಿದ ವರ್ಗಗಳ ಜನರಲ್ಲಿ ಆತ್ಮಸ್ಥೈರ್ಯವನ್ನು ತುಂಬುವ, ತಮ್ಮ ಹಕ್ಕುಗಳನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚಲಾಯಿಸುವ ಶಕ್ತಿಯನ್ನು ಅವರಿಗೆ ಕೊಡುವಂತೆ ಮಾಡುವ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕಾದ ಅಗತ್ಯವನ್ನು ಅವರು ಮನಗಂಡರು. ತಮ್ಮ ದೀರ್ಘವಾದ ಸಾರ್ವಜನಿಕ ಜೀವನದಲ್ಲಿ ಅವರು ಕಂಡುಕೊಂಡ ಅಂಶವೆಂದರೆ ಅಸಂಘಟಿತರಾದ ಹಿಂದುಳಿದ, ಅಲ್ಪಸಂಖ್ಯಾತ ವರ್ಗದವರನ್ನು ಸಂಘಟಿಸುವ ಪ್ರಯತ್ನ ಮಾಡದಿದ್ದರೆ ಕೆಲವೇ ಪ್ರಬಲ ಜಾತಿಗಳ ಕಪಿಮುಷ್ಠಿಯಿಂದ ಪಾರಾಗುವುದು ಸಾಧ್ಯವಿಲ್ಲವೆನ್ನುವುದು. ಭಾರತ ಸ್ವತಂತ್ರವಾಗಿ ಸುಮಾರು ಕಾಲು ಶತಮಾನವೇ ಆದರೂ ಸರಕಾರಿ ನೌಕರಿಯಲ್ಲಿ ಸಿಂಹಪಾಲು ಮುಂದುವರಿದ ಜಾತಿಗಳ ಪಾಲಾಗಿರುವುದನ್ನು ತಪ್ಪಿಸುವುದು ಹಿಂದುಳಿದ ವರ್ಗಗಳ ಬಲವರ್ಧನೆಗೆ ಮೊದಲ ಮೆಟ್ಟಿಲು ಎನ್ನುವುದು ಅವರ ನಿಲುವಾಗಿತ್ತು. ಸಂವಿಧಾನದಲ್ಲಿ ಹರಿಜನರಿಗೆ ಶೇ. 18ರಷ್ಟು ಸರಕಾರಿ ನೌಕರಿಯಲ್ಲಿ ಮೀಸಲಾತಿ ಇತ್ತು. ಆದರೆ ಹೆಚ್ಚು ಕಡಿಮೆ ಅಷ್ಟು ಹೀನಾಯವಾದ ಸ್ಥಿತಿಯಲ್ಲಿ ಬದುಕುತ್ತಿದ್ದ ಹಿಂದುಳಿದ ವರ್ಗಗಳಿಗೆ ಅಂತಹ ಯಾವುದೇ ಅವಕಾಶವಿರಲಿಲ್ಲ. ಇದನ್ನು ಮನಗಂಡ ಅರಸುರವರು ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗದವರಿಗೆ ಸರಕಾರಿ ನೌಕರಿಯಲ್ಲಿ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾತಿಯನ್ನು ನೀಡುವ ಉದ್ದೇಶದಿಂದ ಆಗಿನ ಕಾನೂನು ಮಂತ್ರಿ ಹಾಗೂ ದಲಿತ ನಾಯಕರಾದ

ಶ್ರೀ ಲಕ್ಷ್ಮಣ ಹಾವನೂರರವರ ನೇತೃತ್ವದಲ್ಲಿ ಮೊದಲನೆ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಿದರು. ಈ ಮೊದಲೆ ಇಂತಹ ಒಂದು ಪ್ರಯತ್ನ 1962ರಲ್ಲಿ ನಡೆದಿತ್ತಾದರೂ ಆಗಿನ ನಾಗನಗೌಡ ಸಮಿತಿಯ ವರದಿಯನ್ನು ಅನುಷ್ಠಾನಗೊಳಿಸುವ ಇಚ್ಛಾಶಕ್ತಿ ಆಗಿನ ರಾಜಕೀಯ ನಾಯಕರಲ್ಲಿರಲಿಲ್ಲ ಎನ್ನುವುದು ಗಮನಾರ್ಹ ಅಂಶ. ನಾಗನಗೌಡ ಸಮಿತಿಯ ವರದಿಯ ಹಾವನೂರು ವರದಿಯಂತೆ ಸಮಸ್ಯೆಯ ಆಳಕ್ಕೆ ಹೋಗಿ ವಿಶ್ಲೇಷಣೆ ಮಾಡಿರಲಿಲ್ಲ. ಹಾವನೂರು ಸಮಿತಿಯು 1975ರಲ್ಲಿ ತನ್ನ ವರದಿಯನ್ನು ಅಂಕಿ ಅಂಶಗಳ ಆಧಾರದ ಮೇಲೆ ಸಲ್ಲಿಸಿತು. ಅದನ್ನು ಅನುಷ್ಠಾನಗೊಳಿಸಿದರೆ ಎದುರಿಸಬಹುದಾದ ಭಾರಿ ರಾಜಕೀಯ ವಿರೋಧದ ಅರಿವಿದ್ದರೂ ಅರಸು ಸ್ವಲ್ಪವೂ ಎದೆಗುಂದದೆ ವರದಿಯನ್ನು ಜಾರಿಗೊಳಿಸುವ ಸರಕಾರಿ ಆಜ್ಞೆಯನ್ನು ಹೊರಡಿಸಿದರು. ಈ ಆಜ್ಞೆಯಂತೆ ಹಿಂದುಳಿದ ವರ್ಗದ ಜಾತಿಯ ಜನರಿಗೆ ಶೇ. 55 ರಷ್ಟು ಮೀಸಲಾತಿ ದೊರೆಯಿತು. ಹಾವನೂರು ವರದಿಯ ವೈಜ್ಞಾನಿಕ ಕುಂದು ಕೊರತೆಗಳೇನೆ ಇದ್ದರೂ ಮತ್ತು ವರದಿಯ ಅನುಷ್ಠಾನದಲ್ಲಿ ಅರಸುರವರು ಕೆಲವು ಹೊಂದಾಣಿಕೆ ಮಾಡಿಕೊಳ್ಳಬೇಕಾಗಿ ಬಂದರೂ, ವರದಿಯ ಅನುಷ್ಠಾನದ ನಿರ್ಧಾರ ಒಂದು ಕ್ರಾಂತಿಕಾರಿ ಹೆಜ್ಜೆ ಎಂದು ರಾಷ್ಟ್ರಾದ್ಯಾಂತ ಖ್ಯಾತಿ ಪಡೆಯಿತು. ಹಾವನೂರು ವರದಿ ಹಿಂದುಳಿದ ವರ್ಗಗಳ ಬೈಬಲ್ ಎಂದೆ ಇಂದಿಗೂ ಪ್ರಖ್ಯಾತವಾಗಿದೆ ಎಂದರೆ ಇದರ ಮಹತ್ವದ ಅರಿವಾಗುತ್ತದೆ. ವರದಿಯ ಅನುಷ್ಠಾನದ ಈ ನಿರ್ಧಾರ ಅರಸುರವರು ನಿರೀಕ್ಷಿಸಿದಂತೆಯೇ ಫಲ ನೀಡಿತು. ಪ್ರಬಲ ಕೋಮುಗಳ ರಾಜಕೀಯ ಹಿಡಿತ ಗಣನೀಯವಾಗಿ ಸಡಿಲವಾಯಿತು. ಅಸಂಖ್ಯಾತ ಹಿಂದುಳಿದ ಜಾತಿಗಳು ರಾಜಕೀಯವಾಗಿ ಸಂಘಟಿತರಾಗುವ ಅನಿವಾರ್ಯತೆಯನ್ನು ಕಂಡುಕೊಂಡವು.

ಅರಸುರವರು ಈ ಕ್ರಮದಿಂದ ಮುಖ್ಯಮಂತ್ರಿಯಾಗಿ ಚುನಾಯಿತರಾಗಿ ತಮ್ಮ ಸ್ಥಾನವನ್ನು ಭದ್ರಮಾಡಿಕೊಂಡಿದ್ದು ಮಾತ್ರವಲ್ಲ, ಕರ್ನಾಟಕದಲ್ಲಿ ಪರ್ಯಾಯವಾದ ರಾಜಕೀಯ ಶಕ್ತಿಯೊಂದು ಉದಯವಾಗಲು ಅವರು ಕಾರಣಕರ್ತರಾದರು. ರಾಜ್ಯದ ರಾಜಕಾರಣವೇ ಒಂದು ಹೊಸ ತಿರುವನ್ನು ಕಂಡುಕೊಂಡಿತು. ಕೇವಲ ತಮ್ಮ ಅಧಿಕಾರವನ್ನು ಭದ್ರ ಮಾಡಿಕೊಳ್ಳಲು ಅವರು ಪ್ರಯತ್ನಿಸಲಿಲ್ಲ ಎನ್ನುವುದು ಹಿಂದುಳಿದ ವರ್ಗದವರಿಗೆ ಮೀಸಲಾತಿ ನೀಡುವುದರ ಜೊತೆಗೆ ಅವರ ಸರ್ವತೋಮುಖ ಅಭಿವೃದ್ಧಿಗೆ ಸಹಾಯಕವಾಗುವಂತಹ ಇತರೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಸಾಕ್ಷಿ. ಅವಕಾಶ ವಂಚಿತರಿಗೆ ಅನುಕೂಲವಾಗುವ ರೀತಿಯಲ್ಲಿ ಶಿಷ್ಯವೇತನ, ಶುಲ್ಕ ರಿಯಾಯಿತಿ, ಉಚಿತ ಊಟ ವ್ಯವಸ್ಥೆ ಹೀಗೆ ಸಾಂಸ್ಕೃತಿಕವಾಗಿಯೂ ಅವರು ಮೇಲೆ ಬರಲು ತಕ್ಕ ಅನುಕೂಲವನ್ನು ಕಲ್ಪಿಸಿದರು. ಅರಸು ರಾಜಕೀಯ ಸಂದರ್ಭದ ಶಿಶು ಮಾತ್ರವಾಗಿದ್ದರು ಎಂದು ಕೆಲವರ ಅಭಿಪ್ರಾಯ. ಆದರೆ ಅವರು ಸಂದರ್ಭದ ನಿರ್ಮಾಪಕರೂ ಆಗಿದ್ದರು ಎನ್ನುವುದು ಅವರ ಕಾಲದ ರಾಜಕೀಯ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ಗಮನಿಸಿದ ಯಾರಿಗಾದರೂ ಗೋಚರವಾಗುವ ಅಂಶ. ಅವರು ತಮ್ಮದೇ ಆದ ಹೊಸ ರಾಜಕೀಯ ವರಸೆಯನ್ನು ಪ್ರಜ್ಞಾಪೂರ್ವಕವಾಗಿಯೇ ರೂಢಿಸಿಕೊಂಡಿದ್ದರು. ಅದು ಸಂಪೂರ್ಣ ದೋಷರಹಿತವಾಗೇನೂ ಇರಲಿಲ್ಲ ಎನ್ನುವುದು ಅಷ್ಟೆ ಸತ್ಯ. ಒಂದು ಪರ್ಯಾಯ ರಾಜಕೀಯ ಶಕ್ತಿಯನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಹೊಸ ಬದಲಾವಣೆಯ ಉದ್ದೇಶವನ್ನೇ ಅರ್ಥ ಮಾಡಿಕೊಳ್ಳದ ಅವಕಾಶವಾದಿಗಳು ಆಯಕಟ್ಟಿನ ಭಾಗದ ಅಧಿಕಾರದ ಗದ್ದುಗೆಯೇರುವಂತಾಯಿತು. ಅದರ ಕೆಟ್ಟ ಪರಿಣಾಮಗಳನ್ನು

ತುಂಬಾ ತಡವಾಗಿ ಅವರು ಕಂಡುಕೊಂಡರು. ಅರಸರ ಕೃಪಾಶಯದಲ್ಲಿ ಹಲವಾರು ಅನರ್ಹರೆ ಆಶ್ರಯ ಪಡೆದಿದ್ದರಿಂದ ಯೋಗ್ಯರು ದುಷ್ಟ ಶಕ್ತಿಗಳ ಒತ್ತಡಕ್ಕೆ ಮಣಿಯಬೇಕಾದಂತಹ ಪ್ರಸಂಗ ಬಂದಿತು. ಶ್ರೀಸಾಮಾನ್ಯನ ಅಭಿವೃದ್ಧಿಯನ್ನೇ ಅವರು ಗುರಿಯಾಗಿಟ್ಟುಕೊಂಡರೂ, ಆ ದಿಕ್ಕಿನಲ್ಲಿ ದೃಢವಾದ ಹೆಜ್ಜೆಗಳನ್ನಿಟ್ಟಿದ್ದರೂ ಸಮಾಜದ ಒಟ್ಟಾರೆ ಅಭಿವೃದ್ಧಿಯ ಮೇಲೆ ಅವು ಒಳ್ಳೆಯ ಪರಿಣಾಮವನ್ನು ಬೀರದಿದ್ದುದು ಈ ಕಾರಣದಿಂದಲೆ. ಇದರ ಒಟ್ಟಾರೆ ಪರಿಣಾಮವೆಂದರೆ ಹಲವಾರು ಉತ್ತಮ ಉದ್ದೇಶಗಳನ್ನು ಇಟ್ಟುಕೊಂಡ ಕಾರ್ಯಕ್ರಮಗಳನ್ನು ಹಾಕಿಕೊಂಡರೂ, ಅವರ ಆಡಳಿತ ಅತ್ಯಂತ ಭ್ರಷ್ಟ ಆಡಳಿತ ಎಂದು ಕುಖ್ಯಾತಿ ಪಡೆಯುವಂತಾಯಿತು. ಹೀಗಾಗುತ್ತಿರುವುದು ಅರಸುರವರಿಗೆ ಗೊತ್ತಿರದ ವಿಷಯವೇನಾಗಿರಲಿಲ್ಲ. ಅವರು ಅದಕ್ಕೆ ತಮ್ಮದೆ ಆದ ವಿಶಿಷ್ಟ ವಿವರಣೆಯನ್ನು ಕೊಡುತ್ತಿದ್ದರು. ಒಮ್ಮೆ ಅವರ ಚಿಕ್ಕಪ್ಪ ಕನ್ನಡದ ಖ್ಯಾತ ಸಾಹಿತಿ ದಿವಂಗತ ಚದುರಂಗರು "ನೀನು ಮುಖ್ಯಮಂತ್ರಿಯಾಗಿದ್ದಾಗ ಒಳ್ಳೆಯ ಕೆಲಸ ಮಾಡಿದೆ ನಿಜ, ಆದರೆ ಭ್ರಷ್ಟಾಚಾರದ ಆರೋಪವೂ ನಿನ್ನ ಮೇಲಿದೆಯಲ್ಲ" ಎಂದು ಹೇಳಿದ್ದಕ್ಕೆ ಅರಸು"ಮಾತುಬಾರದ ಜನರಿಗೆ ಮಾತುಕೊಡಬೇಕಾಗಿತ್ತು, ಅದಕ್ಕಾಗಿ ಅಧಿಕಾರ ಬೇಕಾಗಿತ್ತು. ಬಂದ ಅಧಿಕಾರವನ್ನು ಉಳಿಸಿಕೊಳ್ಳಲು ಹಣ ಬೇಕಾಗಿತ್ತು, ನನ್ನನ್ನು ಬೆಂಬಲಿಸಿದ ಶಾಸಕರುಗಳಲ್ಲಿ ಹಲವರು ಯಾವ ಸೈದ್ಧಾಂತಿಕ ನೆಲೆಗಟ್ಟನ್ನು ಹೊಂದಿದವರಲ್ಲ, ಅವರು ನನ್ನನ್ನು ಬೆಂಬಲಿಸುವುದಕ್ಕೆ ಕಾರಣ ನಾನು ಅವರಿಗೆ ಕೊಡುತ್ತಿದ್ದ ಹಣ ಮದ್ಯ ಮಾರಾಟದ ಗುತ್ತಿಗೆದಾರರಿಂದ ಹಣ ಸಂಗ್ರಹಿಸಿ ಅವರಿಗೆ ಕೊಡುತ್ತಿದ್ದೆ. ಇದು ಸಹಜವಾಗಿ ಭ್ರಷ್ಟಾಚಾರವನ್ನು ಹುಟ್ಟಿಹಾಕಿತು" ಎಂದು ಹೇಳಿದ್ದರಂತೆ.

ದೇವರಾಜ ಅರಸು ಒಬ್ಬ ಆದರ್ಶವಾದಿಯಲ್ಲ, ಅವರನ್ನು ಕೆಲವರು ಮೆಕ್ಕೆವಲ್ಲಿ ಎಂದು ಕರೆದಿದ್ದೂ ಉಂಟು. ಅಧಿಕಾರವನ್ನು ಪಡೆಯುವುದು ಹಾಗೂ ಅದನ್ನು ಉಳಿಸಿಕೊಳ್ಳುವುದು ರಾಜಕೀಯದ ಪರಮಗುರಿ ಎಂದು ಅವರು ನಂಬಿದ್ದರು. ಆದರೆ ಅವರನ್ನು ಸಂಪೂರ್ಣ ಆದರ್ಶದ ವಿರೋಧಿ ಎಂದು ತಿಳಿಯುವುದೂ ತಪ್ಪಾಗುತ್ತದೆ. ಅವರ ರಾಜಕೀಯಕ್ಕೆ ಬಡಜನರ ಬಗೆಗಿನ ಕಾಳಜಿಯ ಗುರಿ ಇತ್ತು. ಅದೂ ಒಂದು ರೀತಿ ಆದರ್ಶವೆ, ಆದರೆ ಅಂತಹ ಗುರಿಯನ್ನು ಸಾಧಿಸಲು ಅನುಸರಿಸುವ ಮಾರ್ಗವೂ ಪರಿಶುದ್ಧವಾಗಿರಬೇಕು ಎನ್ನುವುದರಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಈಗಿನ ವ್ಯವಸ್ಥೆಯಲ್ಲಿ ಬಡವರಿಗೆ, ದಲಿತರಿಗೆ ಒಳ್ಳೆಯದನ್ನು ಮಾಡಬೇಕಾದರೆ ಅಧಿಕಾರದಲ್ಲಿ ಇರುವುದು ಅಗತ್ಯ ಹಾಗೂ ಅಧಿಕಾರದಲ್ಲಿ ಉಳಿಯಬೇಕಾದರೆ ಭ್ರಷ್ಟಾಚಾರದೊಂದಿಗೆ ಹೊಂದಾಣಿಕೆ ಅನಿವಾರ್ಯ ಎನ್ನುವುದು ಅವರ ರಾಜಕೀಯ ತತ್ವಶಾಸ್ತ್ರವಾಗಿತ್ತು. ಚುನಾವಣಾ ರಾಜಕೀಯದಲ್ಲಿ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರನ್ನು ಬಹುಸಂಖ್ಯಾತ ವರ್ಗಕ್ಕೆ ಸೇರಿದ ಶಾಸಕರನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಭ್ರಷ್ಟನಾಗುವುದರ ಹೊರತು ಬೇರೆ ದಾರಿಯೇ ಇಲ್ಲ ಎಂಬುದು ಅವರು ಕಂಡುಕೊಂಡಿದ್ದ ಸತ್ಯವಾಗಿತ್ತು.

ವೈಯುಕ್ತಿಕವಾಗಿ ಅರಸುರವರು ಅತ್ಯಂತ ಮಾನವೀಯ ಅಂತಃಕರಣದ ವ್ಯಕ್ತಿಯಾಗಿದ್ದರು. ಅವರು ಹತ್ತಿರ ಹೋಗಿ ಸಹಾಯ ಪಡೆಯದೆ ಬರಿಕೈಯಿಂದ ಬಂದವರೆ ಇಲ್ಲ ಎನ್ನುವುದು ಅವರನ್ನು ಸನಿಹದಿಂದ ನೋಡಿದವರೆಲ್ಲರೂ ಹೇಳುತ್ತಾರೆ. ತಮಗೆ ಭ್ರಷ್ಟ ಮೂಲದಿಂದ ಬಂದ ಹಣದಲ್ಲಿ ಬಹುಪಾಲನ್ನು ಅವರು ಕಷ್ಟ ಎಂದು ಬಂದವರಿಗೆ ಧಾರಾಳವಾಗಿ ಹಂಚುತ್ತಿದ್ದರು. ನಾನೊಬ್ಬ ಅಂಚೆ ಮನುಷ್ಯ, ಅಲ್ಲಿ ಬರುತ್ತೆ, ಇಲ್ಲಿ ಹೋಗುತ್ತೆ ಎಂದು ತಮಾಷೆಯಾಗಿ ಅವರು

ಹೇಳುತ್ತಿದ್ದರು ಎಂದು ಕೋಣಂದೂರು ವೆಂಕಪ್ಪಗೌಡರು ತಮ್ಮ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಬಹುಶಃ ಈ ಕಾರಣದಿಂದಲೇ ಅವರಿಗೆ ಅಧಿಕಾರವಿಲ್ಲದಿದ್ದಾಗಲೂ ಅವರು ಇದ್ದಲ್ಲಿ ಜನ ಸೇರುತ್ತಿದ್ದರು, ಹಾಗೆ ಸೇರುತ್ತಿದ್ದ ಜನರಲ್ಲಿ ಬಹುಪಾಲು ಬಡವರೆ ಆಗಿರುತ್ತಿದ್ದರು.

ಅರಸುರವರ ಆಡಳಿತ ದಕ್ಷತೆಗೆ ಜನಪರ ಕಾಳಜಿಗೆ ಅತ್ಯಂತ ಜ್ವಲಂತ ಸಾಕ್ಷಿ ಎಂದರೆ ದೇಶದಲ್ಲಿ ತುರ್ತುಪರಿಸ್ಥಿತಿಯ ನಂತರ ನಡೆದ ಚುನಾವಣೆಯಲ್ಲಿ ಅವರು ಜಯಭೇರಿ ಗಳಿಸಿದ್ದು. ಇಂದಿರಾಗಾಂಧಿಯವರ ಸರ್ವಾಧಿಕಾರಕ್ಕೆ ಅವರ ಮಗ ಸಂಜಯಗಾಂಧಿಯವರ ಪುಂಡಾಟಿಕೆಗೆ ರೋಸಿಹೋಗಿದ್ದ ಜನ ಉತ್ತರ ಭಾರತದಲ್ಲಿ ಕಾಂಗ್ರೆಸ್‌ನ್ನು ನಮ್ಮ ದೇಶದ ಇತಿಹಾಸದಲ್ಲಿ ಕಂಡರಿಯದ ಸೋಲಿಗೆ ಗುರಿಮಾಡಿದ್ದರು. ಅದಕ್ಕೆ ಮುಖ್ಯ ಕಾರಣ ಕಾಂಗ್ರೆಸ್ ಮುಖ್ಯಮಂತ್ರಿಗಳೆಲ್ಲರೂ ಸಂಜಯಗಾಂಧಿಯ ದಾಸರಂತೆ ವರ್ತಿಸಿ ಜನ ವಿರೋಧಿ ಕಾರ್ಯಗಳಲ್ಲಿ ಮೈಮರೆತಿದ್ದು, ಇಂದಿರಾಗಾಂಧಿಯವರ ಕೃಪಾಕಟಾಕ್ಷವೊಂದಿದ್ದರೆ ನಾವು ಏನು ಮಾಡಿದರೂ ನಡೆಯುತ್ತದೆ ಎಂದು ತಪ್ಪಾಗಿ ಗ್ರಹಿಸಿ ಅವರೆಲ್ಲರೂ 1977ರ ಚುನಾವಣೆಯಲ್ಲಿ ಇನ್ನಿಲ್ಲದಂತೆ ನೆಲಕಚ್ಚಿದ್ದರೂ, ಇಂತಹ ಪರಿಸ್ಥಿತಿಯಲ್ಲಿ ಅರಸುರವರು ತಮ್ಮ ಮೇಲೆ ಎಂತಹ ಒತ್ತಡವಿದ್ದಾಗಲೂ ಜನಪರ ಧೋರಣೆಗಳನ್ನು ಕಡೆಗಣಿಸಲಿಲ್ಲ. ಹಾಗೂ ಎಲ್ಲ ಅಧಿಕಾರವನ್ನು ಹೊಂದಿ ಸರ್ವಾಧಿಕಾರಿಯಂತೆ ಮೆರೆಯುವ ಅವಕಾಶವಿದ್ದಾಗಲೂ ಮಾನವೀಯತೆಯನ್ನು ಮರೆಯಲಿಲ್ಲ. ಆ ಕಾರಣದಿಂದಲೆ ಅವರು ಮತ್ತೆ ಅಧಿಕಾರಕ್ಕೆ ಬರುವಂತಾಯಿತು.

ಎಂದೂ ಸೋಲನ್ನು ಕಾಣದಿದ್ದ ಇಂದಿರಾಗಾಂಧಿಯವರು ಮೊದಲ ಬಾರಿಗೆ ಚುನಾವಣೆಯಲ್ಲಿ ಸೋತು ಸ್ಥೈರ್ಯಗುಂದಿದ್ದರು. ಅವರು ತಮ್ಮ ಆತ್ಮಸ್ಥೈರ್ಯವನ್ನು ಕುಡುಕೊಳ್ಳಲು ದೇವರಾಜ ಅರಸುರವರು ನೆರವಾದರೂ, ಕರ್ನಾಟಕದ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರವನ್ನು ತೆರವುಗೊಳಿಸಿ ಇಂದಿರಾಗಾಂಧಿಯವರು ಸ್ಪರ್ಧಿಸಿ ಜಯಗಳಿಸಲು ಅನುವು ಮಾಡಿಕೊಟ್ಟರು. ಈ ಗೆಲುವಿನ ಸಂಪೂರ್ಣ ಕೀರ್ತಿ ಅರಸುರವರಿಗೆ ದೊರಕಿತು. ಅವರ ಸಂಘಟನಾ ಶಕ್ತಿ, ಛಲ, ರಾಜಕೀಯ ಜಾಣತನ ಎಲ್ಲರ ಪ್ರಶಂಸೆಗೆ ಗುರಿಯಾದವು. ಇಂದಿರಾಗಾಂಧಿಯವರ ವಿರುದ್ಧ ಸ್ಪರ್ಧಿಸಿದವರು ಕರ್ನಾಟಕದ ಜನಪ್ರಿಯ ನಾಯಕರಾಗಿದ್ದ ವೀರೇಂದ್ರಪಾಟೀಲರು. ಚುನಾವಣೆಯ ಸಾರಥ್ಯವನ್ನು ವಹಿಸಿದವರು ಜಾರ್ಜ್‌ಫರ್ನಾಂಡಿಸ್ ಅವರು. ಅಲ್ಲದೆ ರಾಷ್ಟ್ರಾದ್ಯಂತ ಇಂದಿರಾ ವಿರೋಧಿ ಅಲೆ ಎದ್ದ ಕಾಲವದು. ಅಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ ಇಂದಿರಾಗಾಂಧಿಯವರು ಪ್ರಚುಂಡ ಬಹುಮತದಿಂದ ಆರಿಸಿ ಬಂದರೆಂದರೆ ಅರಸುರವರ ನಾಯಕತ್ವ ಎಂಥ ಸಮರ್ಥವಾಗಿತ್ತು ಎಂಬುದು ನಮಗೆ ತಿಳಿಯುತ್ತದೆ. ಆದರೆ ಇಂದಿರಾರವರನ್ನು ಗೆಲ್ಲಿಸಿದ ತನ್ನ ಸಾಧನೆಯೇ ತನ್ನ ರಾಜಕೀಯ ಅವರೋಹಣದ ಮೊದಲ ಮೆಟ್ಟಿಲಾಗಬಹುದು ಎಂದು ಬಹುಶಃ ಅರಸುರವರಿಗೆ ತಿಳಿದಿರಲಿಲ್ಲ. ಚಿಕ್ಕಮಗಳೂರು ಲೋಕಸಭಾ ಚುನಾವಣೆಯ ಕೀರ್ತಿ ದೇಶ ವಿದೇಶಗಳೆಲ್ಲೆಲ್ಲಾ ಹಬ್ಬುತ್ತಿದ್ದಂತೆ ಅದು ಅರಸುರವರ ನೆತ್ತಿಗೂ ಏರತೊಡಗಿದ್ದು ಒಂದು ದುರಂತವೆಂದೇ ಹೇಳಬೇಕು ತಾವೊಬ್ಬ ರಾಷ್ಟ್ರೀಯ ನಾಯಕ, ತನ್ನಿಂದಲೇ ಇಂದಿರಾರವರ ಅಸ್ತಿತ್ವ ಮುಂತಾದ ಬಟ್ಟಂಗಿಗಳ ಹೇಳಿಕೆಗಳನ್ನೆಲ್ಲ ಅರಸು ನಂಬುವುದಕ್ಕೆ ಪ್ರಾರಂಭಿಸಿದರು. ಅರಸುರವರ ನಡೆನುಡಿಯಲ್ಲಿನ ಬದಲಾವಣೆ ಅತ್ಯಂತ ಉತ್ಪ್ರೇಕ್ಷಿತವಾಗಿ ಇಂದಿರಾಗಾಂಧಿಯವರನ್ನು ತಲುಪಿತು. ಇದೆಲ್ಲದರ ಒಟ್ಟಾರೆಯ ಪರಿಣಾಮವೆಂದರೆ ಅರಸು ಹಾಗೂ ಇಂದಿರಾ ನಡುವೆ ಉಂಟಾದ ಒಡಕು. ಇಲ್ಲಿಂದಲೆ ಅರಸುರವರ ರಾಜಕೀಯ ಪತನವೂ ಪ್ರಾರಂಭವಾಯಿತು.

## 3. ಕಾಂಗ್ರೆಸ್ಸಿನಿಂದ ಉಚ್ಚಾಟನೆ

ರಾಜಕೀಯದಲ್ಲಿ ಯಾರು ಶಾಶ್ವತವಾಗಿ ಮಿತ್ರರಲ್ಲ ಹಾಗೆ ಶತ್ರುವೂ ಅಲ್ಲ, ಸದಾ ಸಂಚು-ವಂಚನೆಗಳ ಸುಳಿಯ ರಾಜಕಾರಣ, ಅಧಿಕಾರಕ್ಕಾಗಿ ಯಾರನ್ನೂ ಯಾರು ಬಲಿತೆಗೆದುಕೊಳ್ಳುವ ಅಖಾಡವೆ ರಾಜಕೀಯ ಎಂದೆಲ್ಲ ರಾಜಕೀಯದ ಬಗ್ಗೆ ವ್ಯಾಖ್ಯಾನ ನೀಡುತ್ತಿದ್ದ ಅರಸುರವರೆ ಅಂತಹ ರಾಜಕೀಯಕ್ಕೆ ಬಲಿಪಶುವಾದ ಇತಿಹಾಸದ ಒಂದು ವ್ಯಂಗ್ಯವೆಂದು ಹೇಳಬೇಕು. ಇಂದಿರಾರವರನ್ನು ಅತ್ಯಂತ ಹತ್ತಿರದಿಂದ ಬಲ್ಲವರಾಗಿದ್ದರೂ ಅರಸು ಇಂದಿರಾಗಾಂಧಿಯ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲರಾದರು. ಕಾಂಗ್ರೆಸ್ ಪಕ್ಷವು ಸದಾ ತನ್ನ ಕಪಿಮುಷ್ಟಿಯಲ್ಲೇ ಇರಬೇಕು ಎಂದು ಬಯಸಿದ್ದ ಇಂದಿರಾಗಾಂಧಿಯವರು ಆ ಕಾರಣದಿಂದಲೆ ಪಕ್ಷದೊಳಗೆ ಯಾರೂ ಪ್ರಬಲವಾಗಿ ಬೆಳೆಯದಂತೆ ನೋಡಿಕೊಳ್ಳುವಲ್ಲಿ ಎಚ್ಚರವಹಿಸಿದ್ದರು. ಅದುವರೆವಿಗೂ ಇಂದಿರಾರವರ ಇಚ್ಛೆಯಂತೆ ನಡೆದುಕೊಂಡಿದ್ದ ಅರಸು ಚಿಕ್ಕಮಗಳೂರು ಚುನಾವಣೆಯ ನಂತರ ಅವರ ಕಪಿಮುಷ್ಟಿಯಿಂದ ಹೊರಗೆ ಬರಲು ಮಾಡಿದ ಪ್ರಯತ್ನ ಒಂದು ವಿಶ್ವಾಸ ದ್ರೋಹದಂತೆ ಅವರಿಗೆ ಕಂಡಿತು.

ಇಂದಿರಾಗಾಂಧಿಯವರ ಪ್ರಭಾವ ವಲಯದಿಂದ ಹೊರಬಂದು ರಾಷ್ಟ್ರನಾಯಕರಾಗುವ ಸನ್ನಾಹದಲ್ಲಿದ್ದ ಅರಸುರವರಿಗೆ ತನ್ನ ತಾಯಿಯ ಪ್ರಭಾವವನ್ನು ಬಳಸಿ ಕಾಂಗ್ರೆಸ್ ಮುಖ್ಯಮಂತ್ರಿಗಳನ್ನು ತನ್ನ ಇಚ್ಛೆಯಂತೆ ನಡೆಸಿಕೊಳ್ಳತೊಡಗಿದ ಇಂದಿರಾಪುತ್ರ ಸಂಜಯಗಾಂಧಿಯವರನ್ನು ವಿರೋಧಿಸುವುದು ಅನಿವಾರ್ಯವಾಯಿತು. ಕಾಂಗ್ರೆಸ್ ಪಕ್ಷದ ಎಲ್ಲ ವ್ಯವಹಾರಗಳಲ್ಲೂ ಕೈಯಾಡಿಸತೊಡಗಿದ್ದ ಸಂಜಯ್‌ಗಾಂಧಿಯವರಿಂದ ಹಿರಿಯ ಕಾಂಗ್ರೆಸ್ ನಾಯಕರಿಗೆಲ್ಲ ಇರಸು ಮುರುಸಾಗತೊಡಗಿತ್ತು. ಅದಕ್ಕೆ ಇಂದಿರಾರವರ ಅವಕೃಪೆಗೆ ಪಾತ್ರರಾಗಬಹುದೆಂಬ ಹೆದರಿಕೆಯಿಂದ ಯಾರೂ ಸಹ ಅವರನ್ನು ಎದುರುಹಾಕಿಕೊಳ್ಳುವ ಧೈರ್ಯತೋರಲಿಲ್ಲ. ಮೊತ್ತಮೊದಲ ಬಾರಿಗೆ ಸಂಜಯಗಾಂಧಿಯವರ ಚಟುವಟಿಕೆಗಳನ್ನು ವಿರೋಧಿಸಿದ ಕೀರ್ತಿ ಅರಸುರವರಿಗೆ ಸಲ್ಲಬೇಕು. ದೆಹಲಿಯಲ್ಲಿ ಕಾಂಗ್ರೆಸ್ ಪಕ್ಷದ ಸಮಾವೇಶದಲ್ಲಿ ತಾರಕೇಶ್ವರಿ ಸಿನ್ಹಾ ಅವರ ಜೊತೆಗೂಡಿ ಅರಸುರವರು ಸಂಜಯಗಾಂಧಿಯವರಿಂದ ಹಿರಿಯ ಕಾಂಗ್ರೆಸ್ ನಾಯಕರುಗಳಿಗೆ ಆಗುತ್ತಿರುವ ಅವಮಾನವನ್ನು ಬಹಿರಂಗವಾಗಿ ಪ್ರತಿಭಟಿಸಿದರು. ಸಹಜವಾಗಿಯೇ ಅಂದಿನಿಂದ ಅವರು ಇಂದಿರಾರವರ ಕೆಂಗಣ್ಣಿಗೆ ಗುರಿಯಾದರು. ಅವರ ಹಾಗೂ ಇಂದಿರಾರವರ ನಡುವಿನ ಸಂಬಂಧದಲ್ಲಿ ಬಿರುಕು ಕಾಣತೊಡಗಿತು. ಅಲ್ಲಿಯವರೆಗೂ ಇಂದಿರಾಗಾಂಧಿಯ ನಿಷ್ಠ ಅನುಯಾಯಿಯೆಂದು ಕರೆಸಿಕೊಂಡಿದ್ದ ಅರಸು ವ್ಯಕ್ತಿ ಪೂಜೆಯನ್ನು ವಂಶಪಾರಂಪರ್ಯ ರಾಜಕೀಯವನ್ನು ಧಿಕ್ಕರಿಸಿ ಅದರ ವಿರುದ್ಧ ಹೋರಾಡಲು ಪಣತೊಟ್ಟರು. ಆದರೆ ಅವರ ಜೊತೆಗೂಡಿ ಹೋರಾಡಬೇಕಿದ್ದ, ರಾಜಕೀಯವಾಗಿ ಅವರೇ ಬೆಳೆಸಿದಂತಹ ರಾಜ್ಯಮಟ್ಟದ ಉಳಿದ ನಾಯಕರುಗಳಾರೂ ಅವರನ್ನು ಬೆಂಬಲಿಸದೆ ಇದ್ದುದ್ದು ಅರಸು ರಾಜಕೀಯ ಜೀವನದ ಒಂದು ದೊಡ್ಡ ದುರಂತ. ಅರಸುರವರಿಗೆ ಋಣಿಯಾಗಬೇಕಿದ್ದ ಈ ನಾಯಕರುಗಳು ತಮ್ಮ ನಿಷ್ಠೆಯನ್ನು ಬದಲಿಸಿ ಸಂಜಯಗಾಂಧಿ ಬ್ರಿಗೇಡನ್ನು ಸೇರಿಕೊಂಡು ತಮ್ಮ ಗುರುವಿನ ವಿರುದ್ಧವೆ ಮಸಲತ್ತು ಮಾಡತೊಡಗಿದರು. ಇದರಿಂದ ಅರಸುರವರ ಮನಸ್ಸಿನ ಮೇಲೆ ಬಹಳ

ಆಘಾತವಾಯಿತು. ಇದೇ ಸಮಯದಲ್ಲಿ ಅವರು ಅನಾರೋಗ್ಯಕ್ಕೆ ತುತ್ತಾದರು. ಸರ್ಪಸುತ್ತು ರೋಗ ಅವರನ್ನು ಹಣ್ಣಾಗಿಸಿತ್ತು. ಹಳ್ಳಕ್ಕೆ ಬಿದ್ದ ತೋಳವಾದ ಅರಸುರವರಿಗೆ ಇಂದಿರಾಗಾಂಧಿಯವರು ಪಕ್ಷದ ಶಿಸ್ತಿನ ಉಲ್ಲಂಘನೆಯ ಆರೋಪ ಹೊರಸಿ "ನಿಮ್ಮ ಮೇಲೆ ಏಕೆ ಶಿಸ್ತಿನ ಕ್ರಮ ಕೈಗೊಳ್ಳಬಾರದು?" ಎಂದು ನೋಟೀಸ್ ನೀಡಿದರು. ಅದಕ್ಕೆ ಅರಸುರವರು ಕೊಟ್ಟ ಉತ್ತರ ಅವರ ಆತ್ಮಗೌರವದ ಪ್ರತೀಕವಾಗಿತ್ತು "ಶಿಸ್ತು ಉಲ್ಲಂಘಿಸಿ ಅಪರಾಧಿ ಸ್ಥಾನದಲ್ಲಿ ನಿಂತಿರುವವರು ಸರ್ವಾಧಿಕಾರಿಣಿಯಾದ ತಾವು ತಮ್ಮ ಧೋರಣೆಯಿಂದ ಈ ವಿಶಾಲ ಭರತ ಖಂಡವನ್ನು ಒಗ್ಗಟ್ಟಾಗಿ ಹಿಡಿದಿರಲು ಸಾಧ್ಯವಿಲ್ಲ. ಒಳ್ಳೆಯವರು, ದಕ್ಷರು, ಸಮರ್ಥರಿಂದ ವ್ಯಕ್ತಿಗಳನ್ನು ನೀವು ಬೆದರಿಸಿ ಓಡಿಸುತ್ತೀರಿ. ನಿಮ್ಮ ಸುತ ಅದಕ್ಷರು, ಅಸಮರ್ಥರು ಹಾಗೂ ಹೊಗಳುಭಟ್ಟರನ್ನು ಸೇರಿಸಿಕೊಂಡು ಈ ವಿಶಾಲ ದೇಶವನ್ನು ಆಳುವುದು ಸಾಧ್ಯವಿಲ್ಲ. ಶಿಸ್ತನ್ನು ಮುರಿದವರಾರು? ಕರ್ನಾಟಕದಲ್ಲಿರುವ ನಾನೆ? ಕಾರ್ಯಕಾರಣಿ ಸಮಿತಿಯಲ್ಲಿರುವ ನೀವೆ? ಶಿಸ್ತು ಶಿಸ್ತನ್ನು ಹುಟ್ಟುಹಾಕುತ್ತದೆ ಎಂಬುದನ್ನು ನಾವು ಮರೆಯಬಾರದು ಶಿಸ್ತು ಎರಡು ಅಲುಗಿನ ಕತ್ತಿಯಿದ್ದಂತೆ ಎರಡೂ ಕಡೆಯಿಂದಲೂ ಕತ್ತರಿಸುತ್ತದೆ" ಈ ಉತ್ತರದಿಂದ ಕನಲಿದ ಇಂದಿರಾ 1979ರಲ್ಲಿ ಕಾಂಗ್ರೆಸ್ (ಐ) ಪಕ್ಷದಿಂದ ಅರಸುರವರನ್ನು ಉಚ್ಚಾಟಿಸಿದರು.

## 4. ಕರ್ನಾಟಕ ಕಾಂಗ್ರೆಸ್ ಸ್ಥಾಪಕನಾಗಿ

ಅದೇ ವರ್ಷ ಜೂನ್ 25ರಂದು ಇಂದಿರಾ ನಿಷ್ಠರು ಹಾಗೂ ಅರಸು ಬೆಂಬಲಿಗರ ನಡುವೆ ಬಲಾಬಲದ ಪರೀಕ್ಷೆಯಾಯಿತು. ಅಂದಿನ ಬಲ ಪ್ರದರ್ಶನದಲ್ಲಿ ಅರಸರ ಸಂಘಟನಾ ಶಕ್ತಿ ಪ್ರದರ್ಶಿತವಾಯಿತು. 155 ಕಾಂಗ್ರೆಸ್ ವಿಧಾನಸಭಾ ಸದಸ್ಯರಲ್ಲಿ 131ಜನ ಅರಸುರವರಿಗೆ ಬೆಂಬಲ ವ್ಯಕ್ತಪಡಿಸಿದರು. 8 ಮಂದಿ ಸದಸ್ಯರು ತಂತಿ ಮೂಲಕ ಬೆಂಬಲ ಸೂಚಿಸಿದರು. ಅಲ್ಲದೆ 18 ಜನ ಲೋಕಸಭಾ ಸದಸ್ಯರು ಅವರಿಗೆ ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಿದರು. ಇಂದಿರಾಗಾಂಧಿಯವರ ಕಡೆ ಕೇವಲ ಹತ್ತಿಪ್ಪತ್ತು ಸದಸ್ಯರಿದ್ದರು. ಅರಸುರವರಿಗೆ ಅದುವರೆವಿಗೂ ನಿಷ್ಠರಾಗಿದ್ದ ಗುಂಡುರಾವ್, ಬಂಗಾರಪ್ಪ ಇಂದಿರಾಪಾಳೆಯ ಸೇರಿದರು. ಬಂಗಾರಪ್ಪ ಇಂದಿರಾ ಕಾಂಗ್ರೆಸ್‌ನ ಆಡ್‌ಹಾಕ್ ಸಮಿತಿಯ ಅಧ್ಯಕ್ಷರೂ ಆದರು. ಇಂದಿರಾ ಕೂಟದಿಂದ ಹೊರಬಿದ್ದ ಅರಸು "ಕರ್ನಾಟಕ ಕಾಂಗ್ರೆಸ್" ಎಂಬ ಹೊಸ ಪಕ್ಷವನ್ನು ರಚಿಸಿದರು.

### ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷನಾಗಿ:

1979ರ ಸೆಪ್ಟೆಂಬರ್ 12-13 ರಂದು ಬೆಂಗಳೂರು ಲಾಲ್‌ಬಾಗ್ ಗಾಜಿನ ಮನೆಯಲ್ಲಿ ವಿಭಜಿತ ರಾಷ್ಟ್ರೀಯ ಕಾಂಗ್ರೆಸ್(-) ನ ಅಧಿವೇಶನ ನಡೆಯಿತು. ಅಂದು ಸರ್ದಾರ್ ಸ್ವರಣ್ ಸಿಂಗ್ ತಮ್ಮ ಅಧ್ಯಕ್ಷ ಸ್ಥಾನವನ್ನು ದೇವರಾಜ ಅರಸುರವರಿಗೆ ವಹಿಸಿಕೊಟ್ಟರು. ಅಧ್ಯಕ್ಷ ಸ್ಥಾನದಲ್ಲಿ ಅರಸುರವರು ಮಾಡಿದ ಭಾಷಣ ಅವರ ಹೊಸ ಚಿಂತನಾಕ್ರಮವನ್ನು ಪ್ರತಿಬಿಂಬಿಸುತ್ತಿತ್ತು. ಕಾಂಗ್ರೆಸ್ ಪಕ್ಷದ ಶ್ರೀಮಂತರು ಹಾಗೂ ಬಡವರನ್ನು ಸಮಾನವಾಗಿ ಓಲೈಸುವ ಸಿದ್ಧಾಂತವನ್ನು ಟೀಕಿಸುತ್ತಾ ಇದು 'ಕುರಿ ಮತ್ತು ತೋಳ' ಎರಡರ ಮೇಲೆಯೂ ಸಮಾನವಾಗಿ ಕೈಇಡುವ ಆಟ ಎಂದು ವಿವರಿಸಿದರು. ತಮ್ಮ ಪಕ್ಷ ಬಡ ಜನರು ಹಾಗೂ ದಲಿತರ ಪರವಾಗಿ ನಿಲ್ಲಬೇಕಾದ ಅಗತ್ಯವನ್ನು ಒತ್ತಿ ಹೇಳಿದರು. ಜಾತಿ ಮತಗಳನ್ನು ಮೀರಿ ವರ್ಗ ಸಮರವನ್ನು ಸಾರುವ ಮೂಲಕ ಒಂದು ರಾಷ್ಟ್ರೀಯ ಪರ್ಯಾಯ ಪಕ್ಷವನ್ನು ಕಟ್ಟುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗುವ ಅಭಿಲಾಷೆಯನ್ನು ಅವರು ವ್ಯಕ್ತಪಡಿಸಿದರು. ಇಂತಹ ಒಂದು ಕ್ರಾಂತಿಕಾರಕ ರಾಜಕೀಯ ಸಿದ್ಧಾಂತವನ್ನು ಆಚರಣೆಗೆ ತರಲು ಬೇಕಾದ ಸಮಯಾವಕಾಶವಾಗಲಿ, ಅದೃಷ್ಟವಾಗಲಿ ಅವರಿಗಿರಲಿಲ್ಲ. 1979ರ ಅಕ್ಟೋಬರ್‌ನ ರಾಜ್ಯಶಾಸನ ಸಭೆಯ ಅಧಿವೇಶನದಲ್ಲಿ ಇತ್ತೀಚಿನವರೆಗೂ ತಮ್ಮ ನಿಷ್ಠಾವಂತ ಬೆಂಬಲಿಗರಾಗಿದ್ದವರಿಂದಲೆ ಅರಸು ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಮಂಡನೆಯಾಯಿತು. ಆ ಸಮಯದಲ್ಲಿ ಅರಸು ಬೆಂಬಲಿಗರೆಲ್ಲ ಕೆಲವರು ಇಂದಿರಾಗಾಂಧಿಯವರ ಬಣ ಸೇರಿದರು. ತಮ್ಮ ಭದ್ರತೆಗಾಗಿ ಅರಸು ಜನತಾ ಪಕ್ಷದಿಂದ ಕೆಲವರನ್ನು ಸೆಳೆದರು. ಪಕ್ಷಾಂತರ, ಭ್ರಷ್ಟಾಚಾರ, ನಂಬಿಕೆದ್ರೋಹ ಮುಂತಾದ ಕೆಟ್ಟ ರಾಜಕೀಯ ಪ್ರಕ್ರಿಯೆಗಳೆಲ್ಲ ಅನಾವರಣಗೊಳ್ಳ ತೊಡಗಿದವು. ಕ್ರಾಂತಿಯ ಮಾತನಾಡುತ್ತಿದ್ದ ಅರಸುರವರು ಈ ಸುಳಿಯಲ್ಲಿ ಸಿಕ್ಕಿಬಿದ್ದರು.

ಅರಸು ನಾಯಕತ್ವದ ಕರ್ನಾಟಕ ಕಾಂಗ್ರೆಸ್ ಪಕ್ಷ ಅಧಿಕಾರಾವಧಿಯಲ್ಲಿದ್ದುದು ಕೆಲವೇ ಕಾಲ ಮಾತ್ರ. 1980ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಜನರ ಒಲವು ಇಂದಿರಾ ಕಾಂಗ್ರೆಸ್ ಕಡೆಗೆ ಬಲವಾಗಿತ್ತು. ಇಂದಿರಾ ಕಾಂಗ್ರೆಸ್ ಪ್ರಚಂಡ ಬಹುಮತಗಳಿಸಿತು. ಜನತಾ ಪಕ್ಷದೊಡನೆ ಕರ್ನಾಟಕ ಪಕ್ಷವೂ ನೆಲಕಚ್ಚಿತು. ಒಟ್ಟು 28 ಸ್ಥಾನಗಳಲ್ಲಿ ಇಂದಿರಾ ಕಾಂಗ್ರೆಸ್ 27 ಸ್ಥಾನಗಳನ್ನು ಜನಾತಾಪಕ್ಷ ಒಂದು ಸ್ಥಾನವನ್ನು ಗಳಿಸಿದವು. ಅರಸು ಪಕ್ಷ ಒಂದು ಸ್ಥಾನವನ್ನೂ

ಗಳಿಸಲಿಲ್ಲ. ದೇವರಾಜ ಅರಸುರವರು ಒಬ್ಬ ದಕ್ಷ ನಾಯಕನಾಗಿ, ಒಳ್ಳೆಯ ಸಂಘಟಕರಾಗಿ ಎಲ್ಲಕ್ಕಿಂತ ಹೆಚ್ಚಾಗಿ ಅತ್ಯಂತ ಸಮರ್ಥ ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸಿಯೂ ಅಂತಹ ಅವಮಾನಕರ ಸೋಲನ್ನನುಭವಿಸಿದ್ದು ಏಕೆ? ಜನರು ಅವರ ಸಾಧನೆಗಳನ್ನೆಲ್ಲ ಮರೆತರೆ? ಅಥವಾ ಅರಸುರವರ ಕಾರ್ಯಸಾಧನೆ ಸಾಧ್ಯವಾದದ್ದು ಇಂದಿರಾಗಾಂಧಿಯವರ ನಾಯಕತ್ವದಲ್ಲಿ ಮಾತ್ರ ಎಂದು ನಂಬಿದ್ದರೆ? ಇದಕ್ಕೆ ಉತ್ತರ ಕಂಡು ಹುಡುಕುವುದು ಅಷ್ಟು ಸುಲಭವಲ್ಲ. ರಾಜಕೀಯದಲ್ಲಿ ಎಂತಹ ವೈಚಾರಿಕ ಲೆಕ್ಕಾಚಾರಗಳು ತಲೆಕೆಳಗಾಗುತ್ತವೆ ಎನ್ನುವುದಕ್ಕೆ ಇದೊಂದು ಉದಾಹರಣೆ ಮಾತ್ರ. ಅರಸುರವರ ರಾಜಕೀಯ ಬದುಕಿನಲ್ಲಿ ನಡೆದ ಅತ್ಯಂತ ಆಘಾತಕಾರಿಯಾದ ಈ ಸಂದರ್ಭದಲ್ಲಿಯೂ ಅವರು ನಡೆದುಕೊಂಡ ರೀತಿ ಮಾತ್ರ ಎಲ್ಲರ ಮನಸ್ಸಿನಲ್ಲಿ ಬಹುಕಾಲ ಉಳಿಯುವಂತಹದು. ಫಲಿತಾಂಶ ಪ್ರಕಟವಾದ ಕೆಲವೇ ಘಂಟೆಗಳಲ್ಲಿ ತಮ್ಮ ಮುಖ್ಯಮಂತ್ರಿ ಸ್ಥಾನಕ್ಕೆ ರಾಜಿನಾಮೆ ನೀಡಿ ಪ್ರಜಾಪ್ರಭುತ್ವದಲ್ಲಿದ್ದ ತಮ್ಮ ನಂಬಿಕೆಯನ್ನು ಸಾಬೀತುಪಡಿಸಿದರು. ತುರ್ತು ಪರಿಸ್ಥಿತಿಯ ಕಾಲದಲ್ಲಿ ಹಾಗೂ ತಾವು ದಯನೀಯವಾಗಿ ಚುನಾವಣೆಯಲ್ಲಿ ಸೋಲನ್ನನು ಭಾವಿಸಿದಾಗ ಈ ಎರಡೂ ಸಂದರ್ಭಗಳಲ್ಲಿ ನಡೆದುಕೊಂಡ ರೀತಿಯಿಂದಲೇ ಅವರ ವ್ಯಕ್ತಿತ್ವದ ಅರಿವು ನಮಗಾಗುತ್ತದೆ. ಇಂದಿರಾಗಾಂಧಿಯವರು ಅಲಹಾಬಾದ್ ಹೈಕೋರ್ಟಿನ ತೀರ್ಪು ಬಂದಾಗ ಪ್ರತಿಕ್ರಿಯಿಸಿದ ರೀತಿಗೂ ಅರಸುರವರ ಪ್ರತಿಕ್ರಿಯೆಗೂ ಇರುವ ವ್ಯತ್ಯಾಸ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಅವರು ಹೊಂದಿದ ವಿಶ್ವಾಸ ಹಾಗೂ ಗೌರವದಲ್ಲಿನ ವ್ಯತ್ಯಾಸ ಎಂದು ಹೇಳಬಹುದು.

ಅರಸುರವರ ರಾಜಕೀಯ ಅನಿಶ್ಚಿತತೆಯ ಕಾಲದಲ್ಲಿಯೆ ವೈಯುಕ್ತಿಕ ಬದುಕಿನಲ್ಲೂ ಬಹಳಷ್ಟು ದುರ್ಘಟನೆಗಳನ್ನು ಎದುರಿಸಬೇಕಾಯಿತು. ತೀವ್ರ ಅನಾರೋಗ್ಯ, ಅತ್ಯಂತ ಆಪ್ತರೆನಿಸಿಕೊಂಡವರೆ ಕೈಕೊಟ್ಟ ಮಾನಸಿಕ ಆಘಾತ, ಇದರ ಜೊತೆಗೆ ಅವರ ಸಹೋದರ ಕೆಂಪರಾಜ ಅರಸು ಹಾಗೂ ಅವರ ಮುದ್ದಿನ ಮಗಳು ನಾಗರತ್ನ ಅವರ ದುರ್ಮರಣ ಹೀಗೆ ಒಂದರ ಹಿಂದೊಂದರಂತೆ ಸಂಕಷ್ಟಗಳ ಸರಮಾಲೆಯನ್ನೆ ಎದುರಿಸಬೇಕಾಯಿತು. ಇಂತಹ ಪರಿಸ್ಥಿತಿಯಲ್ಲೂ ಅವರು ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯ ಜೀವನದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದುದು ಅವರದು ಎಂತಹ ಗಟ್ಟಿಯಾದ ವ್ಯಕ್ತಿತ್ವ ಎನ್ನುವುದು ತೋರಿಸುತ್ತದೆ. ಚಿಕ್ಕಂದಿನಿಂದಲೂ ಹೋರಾಟದ ಕಣದಲ್ಲೆ ರೂಪುಗೊಂಡ ವ್ಯಕ್ತಿತ್ವ ಅವರದು. ಹೋರಾಟವಿಲ್ಲದ ಬದುಕು ನೀರಸ ಎಂದುಕೊಂಡವರು ಅವರು. ವಿರೋಧ ಪಕ್ಷಗಳು ಛಿದ್ರವಿಚ್ಛಿದ್ರವಾಗಿರುವುದನ್ನು ಗಮನಿಸುತ್ತಿದ್ದ ಅರಸುರವರು ಎಲ್ಲ ವಿರೋಧಪಕ್ಷಗಳನ್ನು ಒಟ್ಟುಗೂಡಿಸುವ ಕೈಂಕರ್ಯದಲ್ಲಿ ತೊಡಗಿದರು. ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರ 80ನೇ ಹುಟ್ಟು ಹಬ್ಬವನ್ನು ಆಚರಿಸುವ ವೇದಿಕೆಯನ್ನು "ವಿರೋಧ ಪಕ್ಷಗಳ ಐಕ್ಯತೆಯ ವೇದಿಕೆ"ಯನ್ನಾಗಿ ಮಾಡಿದರು. ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ನಡೆದ ಈ ಬೃಹತ್ ಸಮಾರಂಭದಲ್ಲಿ ಮಾಜಿ ಪ್ರಧಾನಿ ಚರಣ್‌ಸಿಂಗ್, ಜನತಾ ಪಕ್ಷದ ಅಧ್ಯಕ್ಷ ಚಂದ್ರಶೇಖರ್, ಸಮಾಜವಾದಿ ನಾಯಕ ಜಾರ್ಜ್‌ಫರ್ನಾಂಡಿಸ್, ರಾಮಕೃಷ್ಣ ಹೆಗಡೆ, ಎಸ್. ಆರ್. ಬೊಮ್ಮಾಯಿ ಮುಂತಾದ ಮುಖಂಡರನ್ನೆಲ್ಲ ಒಂದೇ ವೇದಿಕೆಯಡಿಯಲ್ಲಿ ತಂದ ಕೀರ್ತಿ ಅರಸುರವರದು. ಅಧಿಕಾರದ ಆಸೆಯಿಲ್ಲದೆ ವಂಶಪಾರಂಪರ್ಯದ ವಿರುದ್ಧ ಹೋರಾಡುವ ಛಲವನ್ನು ಅವರು ಘೋಷಿಸಿದರೂ ಕೂಡ ಅವರ ವಿರೋಧಿ ಐಕ್ಯತೆಯ ಕನಸು ಕೈಗೂಡಲೇ ಇಲ್ಲ. ಈ ಸಂದರ್ಭದಲ್ಲಿಯೇ ಲೋಕದಳ ಒಡೆಯಿತು. ಕಪ್ಪೆಗಳನ್ನು ತಕ್ಕಡಿಯಲ್ಲಿಡುವ ಕಾರ್ಯಕ್ಕಿಂತ ಈ ಕೆಲಸ ಕಠಿಣವೆನಿಸಿತು.

# 5. ಕ್ರಾಂತಿರಂಗದ ಸ್ಥಾಪನೆ

ರಾಷ್ಟ್ರಮಟ್ಟದಲ್ಲಿ ವಿರೋಧಪಕ್ಷಗಳನ್ನು ಒಂದುಗೂಡಿಸುವ ಪ್ರಯತ್ನ ವಿಫಲವಾದಂತೆ ಅರಸುರವರು ತಾವು ರಾಷ್ಟ್ರನಾಯಕರಾಗುವ ಭ್ರಮೆಯನ್ನು ಕಳಚಿಕೊಳ್ಳತೊಡಗಿದರು. ಕರ್ನಾಟಕ ಮಟ್ಟದಲ್ಲಿ ಒಂದು ಪ್ರಾದೇಶಿಕ ಪಕ್ಷ ಕಟ್ಟುವ ಹಂಬಲ ಬೆಳೆಸಿಕೊಂಡರು. ಇದರ ಪರಿಣಾಮವೇ ಕ್ರಾಂತಿರಂಗದ ಸ್ಥಾಪನೆ, ರಾಜ್ಯಮಟ್ಟದಲ್ಲಿ ತಮಗಿದ್ದ ಜನಪ್ರಿಯತೆಯಿಂದ ಕ್ರಾಂತಿರಂಗವನ್ನು ಇಂದಿರಾ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯ ಪಕ್ಷವಾಗಿ ಕಟ್ಟುವ ಭರವಸೆಯನ್ನು ಅವರು ಹೊಂದಿದ್ದರು. ಸದ್ಯಕ್ಕೆ ಪ್ರಾದೇಶಿಕ ಪಕ್ಷವಾದರೂ ಮುಂದೆ ಇದನ್ನು ಚರಣಸಿಂಗ್‌ರ ಲೋಕದಳದಲ್ಲಿ ವಿಲೀನಗೊಳಿಸುವ ಮೂಲಕ ರಾಷ್ಟ್ರ ಮಟ್ಟದಲ್ಲೂ ಒಂದು ಪರ್ಯಾಯವನ್ನು ರೂಪಿಸುವ ಉದ್ದೇಶ ಅವರಿಗಿತ್ತು. ಎಷ್ಟು ಜನಪ್ರಿಯತೆಯಿದ್ದರೂ ಒಂದು ರಾಜಕೀಯ ಪಕ್ಷವನ್ನು ಕಟ್ಟಲು ಅದಕ್ಕೆ ಸುಭದ್ರವಾದ ತಾತ್ವಿಕ ತಳಹದಿ ಇರಬೇಕಾಗುತ್ತದೆ. ಅಷ್ಟು ಸುದೀರ್ಘವಾದ ರಾಜಕೀಯ ಅನುಭವವಿದ್ದರೂ ಒಳ್ಳೆಯ ಸಂಘಟಿಕರು ಎಂದು ಹೆಸರು ಮಾಡಿದ್ದರೂ ಅರಸು ಅವರಿಗೆ ಒಂದು ಹೊಸ ಪಕ್ಷವನ್ನು ಕಟ್ಟಲುಬೇಕಾದ ಸೈದ್ಧಾಂತಿಕ ಸಿದ್ಧತೆಗಳಿದ್ದವೆ? ಕ್ರಾಂತಿರಂಗ ಪಕ್ಷದ ತಾತ್ವಿಕ ತಳಹದಿಯನ್ನು ನೋಡಿದರೆ ಈ ಪ್ರಶ್ನೆಗೆ ಉತ್ತರ ನಕಾರಾತ್ಮಕವಾಗಿಯೇ ಇತ್ತು ಎನ್ನುವುದು ತಿಳಿಯುತ್ತದೆ. ಬಹುಶಃ ಅರಸುರವರು ತತ್ವಕ್ಕಿಂತ ಅಧಿಕಾರಕ್ಕೆ ಬರುವುದಕ್ಕೆ ಹೆಚ್ಚು ಮಹತ್ವ ಕೊಟ್ಟಿರುವಂತೆ ಕಾಣುತ್ತದೆ. ಈ ಸಂದರ್ಭದಲ್ಲಿ ಶ್ರೀ ಎ. ಕೆ. ಸುಬ್ಬಯ್ಯನವರು ಆಡಿದ ಮಾತು ಹೆಚ್ಚು ಪ್ರಸ್ತುತವೆನಿಸುತ್ತದೆ. "ಅರಸರಿಗೆ ರಾಷ್ಟ್ರಮಟ್ಟದಲ್ಲಿ ಅಟಲ್ ಬಿಹಾರಿ ವಾಜಪೇಯಿ ಬೇಕು, ಆದರೆ ರಾಜ್ಯ ಮಟ್ಟದಲ್ಲಿ ಜನಸಂಘದ ಸಹವಾಸ ಬೇಡ" ಇದು ಅರಸರ ತಾತ್ವಿಕ ಇಬ್ಬಂದಿತನವನ್ನು ತೋರಿಸುತ್ತದೆ. ಅಲ್ಲದೆ ಅವರ ಬಗ್ಗೆ ಬಂದ ಮತ್ತೊಂದು ಟೀಕೆ ಎಂದರೆ ಚುನಾವಣೆಯಲ್ಲಿ ಸೋತನಂತರ ಪ್ರಜಾಪ್ರಭುತ್ವದ ಮೌಲ್ಯದ ರಕ್ಷಣೆಗಾಗಿ ವಿರೋಧಿಗಳ ಐಕ್ಯತೆ ಅಗತ್ಯ ಎಂದು ಹೇಳುವ, ವಂಶಪಾರಂಪರ್ಯ ಅಧಿಕಾರದ ವಿರುದ್ಧ ಹೋರಾಡಬೇಕು ಎನ್ನುವ ಅರಸು ಅವರು ಅಧಿಕಾರದಲ್ಲಿದ್ದಾಗ ಇಂತಹ ಕಳಕಳಿಯೆಲ್ಲ ಎಲ್ಲಿಗೆ ಹೋಗಿದ್ದವು ಎನ್ನುವುದು. ಅವರ ಅಧಿಕಾರಾವಧಿಯಲ್ಲಿ ಪಕ್ಷದ ಆಂತರಿಕ ಪ್ರಜಾಪ್ರಭುತ್ವಕ್ಕೆ ಮಾನ್ಯತೆ ಇರಲಿಲ್ಲ. ತುರ್ತುಪರಿಸ್ಥಿತಿ ಹೇರಿಕೆ ಸಮಯದಲ್ಲಿ ಅವರು ಪ್ರತಿಭಟಿಸಿಲ್ಲ. ಹೀಗಾಗಿ ಅರಸರ ನಿಲುವು ನಂಬಿಕೆಗೆ ಅರ್ಹವೆಂಬುದಲ್ಲ ಅದೊಂದು ಅಧಿಕಾರಕ್ಕಾಗಿ ಹೂಡಿದ ಆಟ ಎಂಬ ಭಾವನೆ ಬಲಿಯಿತು.

ಈ ಸಂದರ್ಭದಲ್ಲಿ ಕೋಣಂದೂರು ವೆಂಕಪ್ಪಗೌಡರು ಅರಸುರವರ ಬಗೆಗಿನ ಅಭಿಪ್ರಾಯ ಉಲ್ಲೇಖಾರ್ಹ. ದೇವರಾಜ ಅರಸರ ಸತ್ಯ ಸಾಧನೆಯ ಬಗ್ಗೆ ಬರೆಯುತ್ತಾ ಅವರ ಕ್ರಾಂತಿರಂಗದ ಸ್ಥಾಪನೆಯ ಬಗ್ಗೆ ವೆಂಕಪ್ಪಗೌಡರು ಹೀಗೆ ಹೇಳುತ್ತಾರೆ "ಅರಸರ ರಾಜಕಾರಣ ಚಿಂತನೆಯ ಒಂದು ತಾತ್ವಿಕ ನೆಲೆಗಟ್ಟಿನ ಮೇಲೆ ನಿಂತ ಗಟ್ಟಿಯಾದ ಸೌಧವಲ್ಲ, ಅವರೊಬ್ಬ ಪರಂಪರೆಯ ನಿರ್ಮಾಪಕರಲ್ಲ. ಅವರಿಗೆ ಒಂದು ಪರಂಪರೆ ಇಲ್ಲದಿದ್ದರಿಂದಲೆ ಸಮರ್ಥ ಅನುಯಾಯಿಗಳಿರಲಿಲ್ಲ. ತಾತ್ವಿಕ ಮಾರ್ಗದಲ್ಲಿ ಆ ಆದರ್ಶವನ್ನು ಸ್ಥಾಪಿಸಿ ತೋರಿಸಿಕೊಡುವ, ಹೊಸ ಹೊಸ ಸಾಧ್ಯತೆಗಳನ್ನು ವಾಸ್ತವವನ್ನಾಗಿ ಮಾರ್ಪಡಿಸಬಲ್ಲ ಸಮರ್ಥ ಅನುಯಾಯಿಗಳ ತಂಡವಿಲ್ಲದೆ ಪರಂಪರೆ ನಿರ್ಮಾಣವಾಗುವುದಿಲ್ಲ. ಹೀಗಾಗಿ ಅರಸರ ಜೀವನದ ಒಳಪೊಟರೆಯಲ್ಲಿ ಬಾಳಿ ಬೆಳೆದ

ಅರಸರ ಬೆನ್ನ ಹಿಂದೆ ಮುಂದೆ ಸಮಯ ಸಾಧಕರಾಗಿ ಅವರ ಅಧಿಕಾರದ ಬೆಳದಿಂಗಳ ಬೆಳಕಿನಲ್ಲಿ ಬದುಕಿದರು. ರಾಜಕಾರಣದ ಕತ್ತಲೆಯಲ್ಲಿದ್ದು ಜೀವನದಲ್ಲಿ ಏಳಲಾರದ, ನಿಶ್ಚಿತ ಗೊತ್ತುಗುರಿ ಹೊಂದಿರದ (ಹೋರಲಾದ) ಪ್ರಪಾತದಲ್ಲಿ ಬಿದ್ದವರೆಲ್ಲ (ಪುಂಡು ಪೋಕರಿಗಳು.) ಅವರ ಕೃಪೆ ಮಾತ್ರದಿಂದಲೆ ವ್ಯಕ್ತಿತ್ವ ಗಳಿಸಿಕೊಂಡವರು, ಶಾಸಕರು, ಮಂತ್ರಿಗಳು, ದೊಡ್ಡವರು ಎನಿಸಿಕೊಂಡವರು, ಅವರ ಈ ಔದಾರ್ಯ ಗುಣ ಅಂತಹ ಜೀವಿಗಳಿಗೆ ಅದೃಷ್ಟದ ಬಾಗಿಲು ತೆರೆಸಿದರೂ, ಅರಸರ ದೃಷ್ಟಿಯಿಂದ ದುರಂತ. ಏಕೆಂದರೆ ಅರಸರು ತಮ್ಮ ಜೀವಂತ ಬದುಕಿನ ಎದುರಿನಲ್ಲಿಯೆ ತನಗೆ ತನ್ನವರಿಂದ ಆತ್ಮಶಕ್ತಿಯನ್ನು ನಿರೀಕ್ಷಿಸುವ ಸಂದರ್ಭದಲ್ಲಿಯೆ ವಿಶ್ವಾಸದ್ರೋಹಕ್ಕೆ ಬಲಿಯಾಗಿ ನಿಸ್ಸಾಹಾಯಕ ಸ್ಥಿತಿಗೆ ತಲುಪಿ ದುರಂತ ಅಪ್ಪಬೇಕಾಯಿತು. ಅಲ್ಲದೆ ಅರಸರು ಕಟ್ಟಿ ಬೆಳೆಸಿದ ಸಂಬಂಧಗಳು ಮುಕ್ತವಾದವುಗಳಲ್ಲ ರಾಜಕೀಯಕ್ಕಿಂತ ಮಿಗಿಲಾದವುಗಳು. ಆದುದರಿಂದಲೆ ಅರಸು ಅಂತಹವವನ್ನು ಸಾರ್ವಜನಿಕವಾಗಿ ಪ್ರತಿಭಟಿಸುವ ನೈತಿಕ ಶಕ್ತಿಯನ್ನು ಹೊಂದಿರಲಿಲ್ಲ. ಹೀಗಾಗಿ ಅರಸರ ರಾಜಕಾರಣ ತಾತ್ವಿಕತೆಯಿಲ್ಲದೆ ಸೊರಗಿ ಕುಸಿದು ಬಿದ್ದಿದೆ. ಇದಕ್ಕೆ ಕಾರಣ ಅರಸರ ರಾಜಕಾರಣ. ಮಾನವೀಯತೆಯ ಆಕಾಂಕ್ಷೆಗೂ ಪಶುತ್ವದ ಇರುವಿಕೆಗೂ ಆದರ್ಶಗಳ ಸುಂದರ ಕಲ್ಪನೆಗೂ, ಅವು ಕೃತಿಗಳಿಯುವಾಗಿನ ಕ್ರೂರ ವಾಸ್ತವತೆಗೂ ಇರುವ ಕಂದಕ.

ಹೀಗೆ ಶ್ರೀ ದೇವರಾಜ ಅರಸುರವರ ಬಾಳು ರಾಜಕೀಯದ ತೀವ್ರ ಏರಿಳಿತಗಳನ್ನು ಕಂಡು 1982 ಜೂನ್ 6 ರಂದು ಕೊನೆಗೊಂಡಿತು. ಆದಮ್ಯ ಉತ್ಸಾಹದ, ಅತೀವ ಛಲದ, ಅಪ್ರತಿಮ ಸಾಹಸದ ಬದುಕು ಕೊನೆಗೂ ಅಸ್ತಂಗತವಾಯಿತು. ಅರಸರ ರಾಜಕೀಯದ ಕಡು ವಿರೋಧಿಗಳೂ ದುಃಖತಪ್ತರಾದ ದಿನವದು. ಕರ್ನಾಟಕದ ರಾಜಕೀಯದಲ್ಲಿ ಬೇರೆ ಯಾರಿಗೂ ಸಿಗದ ಸ್ಥಾನ ಅವರಿಗೆ ಲಭಿಸಿದೆ, ಇಂದಿಗೂ ಹಿಂದುಳಿದ ಹಾಗೂ ದಲಿತ ವರ್ಗದ ಜನರು ಅವರಿಗೆ ಕೃತಜ್ಞರಾಗಿದ್ದಾರೆ. ಧ್ವನಿ ಇಲ್ಲದವರಿಗೆ ಧ್ವನಿ ಕೊಟ್ಟವರು ಅವರು. ಅವರ ಪಾರ್ಥಿವ ಶರೀರವನ್ನು ಬೆಂಗಳೂರಿನಿಂದ ಅವರ ಸ್ವಂತ ಊರಾದ ಕಲ್ಲಹಳ್ಳಿಯವರೆಗೂ ಮೆರಗಣಿಗೆಯಲ್ಲಿ ತರಲಾಯಿತು. ದಾರಿಯುದ್ದಕ್ಕೂ ನೆರದ ಲಕ್ಷಾಂತರ ಜನಸಮೂಹ ಆಶ್ರುತರ್ಪಣ ನೀಡಿ ಅಗಲಿದ ಧೀಮಂತ ನಾಯಕನಿಗೆ ನಮನ ಸಲ್ಲಿಸಿತು. ರಾಷ್ಟ್ರದ ಹಿರಿಯ ನಾಯಕರೆಲ್ಲರೂ ಆಗಮಿಸಿ ಗೌರವ ಸಲ್ಲಿಸಿದರು. ಅವರ ವ್ಯಕ್ತಿತ್ವದ ಬಗ್ಗೆ ಕೋಣಂದೂರು ವೆಂಕಪ್ಪಗೌಡರು ಹೀಗೆ ಹೇಳುತ್ತಾರೆ ದೇವರಾಜ ಅರಸರ ವರ್ಣರಂಜಿತ ಬದುಕಿಗೆ ಅವರ ಶಾರೀರಿಕ ಸಂಪತ್ತು ಪೂರಕವಾಗಿತ್ತು. ಕೆಂಪುಮಿಶ್ರಿತ ಬಿಳಿಯ ಬಣ್ಣ, ಅಗಲವಾದ ದುಂಡುಮುಖ, ಹದವಾದ ಕಣ್ಣು, ಮೂಗು, ವಿಶಾಲವಾದ ಹಣೆ, ತಲೆಯಲ್ಲಿ ತೆಳುವಾಗಿ ಹರಡಿದ ಬಿಳಿ ಮಿಶ್ರಿತ ಕಪ್ಪು ಕೇಶ, ಬುದ್ಧಿವಂತಿಕೆಯ ಲಕ್ಷಣ ಎಂಬಂತಹ ದೊಡ್ಡವಾದ ಕಿವಿಗಳು, ತಲೆಯ ಬಾರಕ್ಕೆ ಸೋತು ಕುಸಿದಿದೆಯೇನೊ ಎಂಬಂತಹ ಕುತ್ತಿಗೆ, ಮನಸ್ಸಿನಂತೆ ವಿಶಾಲವಾದ ಎದೆಯ ಹರವು, ನೀಳವಾಗಿ ತುಂಬಿಕೊಂಡ ಕೈಕಾಲು, ದೇಹಕ್ಕೆ ತುಸು ದೊಡ್ಡ ದೆನಿಸಿದರೂ ಗಾಂಭೀರ್ಯವಾದ ಕಳೆ ತುಂಬಿದ ಹೊಟ್ಟೆ, ಈ ಅಂಗ ಸೌಷ್ಟವಕ್ಕೆ ಒಪ್ಪುವಂತಹ ಶುಭ್ರವಾದ ಬಿಳಿಯ ಖಾದಿ ಜುಬ್ಬ ಅಚ್ಚುಕಟ್ಟಾಗಿ ಉಟ್ಟ ಕಚ್ಚೆ ಪಂಚೆ, ಕಾಲಿಗೆ ಬೂಟು, ನಡೆಯುವ ನಡಿಗೆಯಲ್ಲಿ ಗಾಂಭೀರ್ಯ, ಇದು ಅವರ ಆಕರ್ಷಕ ಬಾಹ್ಯ ನಿಲುವು.

ಅರಸರ ಆಂತರಿಕ ನಿಲುವಿನಲ್ಲೂ ಅವರ ಅನುಭವ ಬುದ್ಧಿ, ಪ್ರತಿಭೆ ಕಳಪೆಯಲ್ಲ. ಸಮಾಜದ ಸುಂದರ, ಭೀಷಣ ಮುಖಗಳೆರಡರ ದಟ್ಟ ಪರಿಚಯ, ಆರ್ಥಿಕ, ಸಾಮಾಜಿಕ, ರಾಜಕೀಯ ವ್ಯವಸ್ಥೆಗಳ ಸಮಗ್ರ ಅರಿವು, ಬೆದರಿಕೆಗೆ ಬಗ್ಗದ ಮನೋಸ್ಥೈರ್ಯ, ನಿರ್ಲಿಪ್ತತೆ ಅವರ ಹುಟ್ಟುಗುಣ. ಕಷ್ಟ ಕಂಡು ಕರಗುವ ಹೆಂಗರುಳು. ಸೇಡಿಗಿಂತ ಸ್ನೇಹದಲ್ಲಿ ಹೆಚ್ಚು ವಿಶ್ವಾಸ, ಎಡತಾಕಿದ್ದನೆಲ್ಲ ಸವರಿ ಮುನ್ನೆಡೆಯುವ ದಿಟ್ಟತನ. ಅವರು ಸಿದ್ಧಾಂತಿಯಲ್ಲ ಸಾಧಕ ವಸ್ತುನಿಷ್ಠ ದಕ್ಷ ಆಡಳಿತಗಾರ, ನಿಷ್ಠುರವಾದಿ, ಮಾಗಿದ ಅನುಭವ, ರಾಜಕೀಯ ಚತುರ, ವ್ಯವಹಾರ, ಆಡಳಿತ, ತಂತ್ರ, ರೀತಿ - ನೀತಿಗಳಿಗೆಲ್ಲ ಮಹಾ ಭಾರತದ ಮೇಲ್ಪಂಕ್ತಿ. ಸಾಮಾನ್ಯ ಅಸಾಮಾನ್ಯರ ಎಲ್ಲ ಸ್ತರಗಳಲ್ಲೂ ಕಾಣಿಸಿಕೊಂಡ ಎತ್ತರ ಈ ಉದಾರ ಚೇತನದ ಸಾಹಸ ನೋವಿನ ಕಥೆಯ ಉಜ್ವಲ ಬದುಕು ಬಹಳ ಕಾಲ ನಿಲ್ಲುವಂತಹ ಶಕ್ತಿಯುಳ್ಳದ್ದು. ಒಟ್ಟಿನಲ್ಲಿ ಭಾರತದ ರಾಜಕೀಯ ಇತಿಹಾಸಕ್ಕೆ ಒಂದು ಹೊಸ ತಿರುವು ತಂದುಕೊಟ್ಟ ಧೀಮಂತಿಕೆ ಅರಸು ಅವರದು.

## 6. ಅರಸು: ಅವರ ಒಡನಾಡಿಗಳು ಕಂಡಂತೆ

**ಶ್ರೀ ಚದುರಂಗ**

ಅಧಿಕಾರದ ದೃಷ್ಟಿಯಿಂದ ದೇವರಾಜ ಅರಸರ ಮೇಲೆ ಗಾಢವಾದ ಪ್ರಭಾವ ಬೀರಿದ್ದೆಂದರೆ ಕೌಟಿಲ್ಯನ ಅರ್ಥಶಾಸ್ತ್ರ, ಅಧಿಕಾರವನ್ನು ಚಲಾಯಿಸಲು, ಅದನ್ನು ಉಳಿಸಿಕೊಳ್ಳಲು ಏನೇನು ಪಟ್ಟು ಹಾಕಬೇಕು ಎಂಬುದನ್ನು ಅದರಿಂದ ವಿಶೇಷವಾಗಿ ಕಲಿತೆ, ಎಂದು ಹೇಳುತ್ತಿದ್ದರು. ಆಗ "ಈ ಕುಟಿಲತೆಯಿಂದ ಅಧಿಕಾರ ಪಡೆಯುವುದರಿಂದ ಯಾವ ಪ್ರಯೋಜನ?" ಎಂದು ನಾನು ಕೇಳಿದ್ದಕ್ಕೆ "ಅಧಿಕಾರವಿದ್ದರೆ ತಾನೆ, ನಾಡಿಗೆ ಏನಾದರೂ ಕೆಲಸ ಮಾಡಲು ಅನುಕೂಲವಾಗುವುದು" ಎಂದರು. ಆದರೆ ಇಷ್ಟೊಂದು ಭ್ರಷ್ಟಾಚಾರ ಅಗತ್ಯವಿತ್ತೆ ಎಂದಿದ್ದಕ್ಕೆ "ಅಯ್ಯೊ ರಾಮ, ಭ್ರಷ್ಟಾಚಾರ ನಾನು ಹುಟ್ಟುಹಾಕಿದ್ದೆ, ಅನಾದಿ ಕಾಲದಿಂದಲೂ ಅದು ನಡೆದು ಬಂದಿದೆ, ನನ್ನ ಕಾಲದಲ್ಲಿ ಸ್ವಲ್ಪ ಹೆಚ್ಚಾಗಿರಬಹುದು ಅಷ್ಟೆ" ಎಂದರು. ಇದು ತಪ್ಪಲ್ಲವೆ ಎಂದು ಕೇಳಿದಕ್ಕೆ", ನಾನೇನು ಮಾಡಲಿ, ನಿನಗೆ ಗೊತ್ತಿರುವ ಹಾಗೆ ನನಗೆ ಸಂಖ್ಯಾಬಲವಿಲ್ಲ, ಇದರಿಂದ ಜನರನ್ನು ಕೈಲಿಟ್ಟುಕೊಳ್ಳಲು ಹಣಬೇಕಾಯ್ತು, ನನ್ನ ಹತ್ತಿರ ಹಣವಿತ್ತೆ? ಅದನ್ನು ಉಳ್ಳವರಿಂದ ಪಡೆಯಬೇಕಾಯ್ತು, ಪ್ರತಿಯಾಗಿ ಅವರಿಗೆ ನಾನು ತೆತ್ತ ಬೆಲೆ. (Pound of Flesh.) ಅಲ್ಲಯ್ಯ ಈ ಸಮಾಜದ ರಚನೆಯೆ ಹಾಗಿದೆ. ನಿನಗೆ ಗೊತ್ತಿರುವ ಹಾಗೆ ಇದು ಬೂರ್ಜ್ವಾ ಸಮಾಜ. ಇಲ್ಲಿ ಅಧಿಕಾರದಲ್ಲಿ ಉಳಿದು ಏನಾದರೂ ಜನಸೇವೆ ಮಾಡಬೇಕಾದರೆ ಎಲ್ಲ ಸಾಧನಗಳನ್ನೂ ಉಪಯೋಗಿಸಿ ಕೊಳ್ಳಲೇಬೇಕು ಎಂದು ಪಾಂಡವರನ್ನು ಉಳಿಸಲು ಶ್ರೀ ಕೃಷ್ಣನು ಪ್ರಯೋಗಿಸಿದ ತಂತ್ರಗಳನ್ನು ನೆನಪು ಮಾಡಿಕೊಟ್ಟರು.

ಅರಸರ ವ್ಯಕ್ತಿತ್ವದಲ್ಲಿ ಎದ್ದುಕಾಣುವ ಪ್ರಧಾನ ಗುಣವೆಂದರೆ ಚಿತ್ತಸ್ಥೈರ್ಯ. ಎಂತಹ ಕಠಿಣ ಪರಿಸ್ಥಿತಿಯಲ್ಲೂ ತಮ್ಮ ಸಮಚಿತ್ತತೆಯನ್ನು ಕಳೆದುಕೊಳ್ಳದ ಅಪೂರ್ವ ಚೇತನ, ಮುಖ್ಯಮಂತ್ರಿ ಪದವಿ ಹೋಯ್ತು, ವಿರೋಧ ಪಕ್ಷದ ನಾಯಕತ್ವವೂ ಹೋಯಿತು, ಅಖಿಲ ಭಾರತ ಅರಸು ಕಾಂಗ್ರೆಸ್ಸಿನ ಅಧ್ಯಕ್ಷ ಪದವಿಯೂ ಹೋಯಿತು, ಪ್ರಾಣಾಂತಿಕವಾಗಿ ಅಲುಗಾಡಿಸಿದ ಭೀಕರ ಸರ್ಪಸುತ್ತಿನಿಂದಲೂ ನರಳಿದರೂ, ಪ್ರೀತಿಯ ಮಗಳು ನಾಗರತ್ನ ಹಾಗೂ ಒಡಹುಟ್ಟಿದ ತಮ್ಮ ಕೆಂಪರಾಜು ಅರಸು ಒಬ್ಬರಾದ ಮೇಲೆ ಒಬ್ಬರು ತೀರಿಕೊಂಡರು, ಆದರೂ ಏನೂ ಆಗದವರಂತೆ ನಿರ್ಲಿಪ್ತರಾಗಿ, ಶಾಂತರಾಗಿ ತಮ್ಮ ಕಾರ್ಯಚಟುವಟಿಕೆಗಳನ್ನು ಮುಂದವರೆಸುತ್ತಲೆ ಇದ್ದರು.

**ಶ್ರೀ ಹೆಚ್. ಡಿ. ದೇವೇಗೌಡ:**

"ಏತಿ ಎಂದರೆ ಪ್ರೇತಿ"ಯಾಗಿ ವ್ಯವಹರಿಸುತ್ತಿದ್ದ ದೇವರಾಜ ಅರಸು ಯಾರೊಬ್ಬರ ನಿಷ್ಠರೂ ಅಲ್ಲ, ಅನಿಷ್ಟರೂ ಆಗಿರಲಿಲ್ಲ, ಎಲ್ಲರಂತೆ ಅವರೂ ಮಹತ್ವಾಕಾಂಕ್ಷಿಯಾಗಿದ್ದರು. ಇತರರಲ್ಲಿ ಕಾಣದಿರುವಂಥ ವಿಶೇಷ ಗುಣಗಳೆಂದರೆ ಕಷ್ಟದ ಸನ್ನಿವೇಶದಲ್ಲೂ ಎದೆಗುಂದದೆ ಹೋರಾಡುವ ಅವರ ಕೆಚ್ಚು, ಸೋಲೊಪ್ಪಿಕೊಂಡು ಕೈಕಟ್ಟಿ ಕೂರದೆ, ಪ್ರಯತ್ನ ಶೀಲರಾಗುತ್ತಿದ್ದ ಅವರ ಕ್ಷಾತ್ರ"

ಶ್ರೀ ಡಿ. ಕರಿಯಪ್ಪಗೌಡರು:

"ಕರ್ನಾಟಕ ರಾಜ್ಯದ ನಭೋಮಂಡಲದಲ್ಲಿ ಡಿ. ದೇವರಾಜ ಅರಸು ಒಂದು ಧ್ರುವತಾರೆ. ಅವರು ನನಗೆ ಮಾತ್ರ ರಾಜಕೀಯ ಗುರುವಲ್ಲ, ಇಂದು ರಾಜಕೀಯ ಮುಂಚೂಣಿಯಲ್ಲಿರುವ ಬಹುತೇಕ ಮುಖಂಡರುಗಳಿಗೆ ಗುರು. ಅವರು ಜನಿಸಿದ್ದೇನೋ ಅರಸು ಮನೆತನದಲ್ಲಿ ಆದರೆ ಅವರು ಮಾತ್ರ ನಿತ್ಯ ಜೀವನದಲ್ಲಿ ಅಪ್ಪಟ ರೈತರು. 'ಕಾಯಕವೇ ಕೈಲಾಸ' ಎಂದರು ಶರಣರು. ಅರಸರಿಗೂ ಆ ಸ್ತೋತ್ರದಲ್ಲಿ ಪೂರ್ಣ ನಿಷ್ಠೆ. ಅವರೆ ಸ್ವತಃ ಕೊಡಲಿ ಹಿಡಿದು ಕಟ್ಟಿಗೆ ಕಡಿದಿದ್ದಾರೆ, ನೇಗಿಲು ಹಿಡಿದು ನೆಲ ಉತ್ತಿದ್ದಾರೆ, ಬಿತ್ತಿದ್ದಾರೆ. ಕಾಡುಕಡಿದು ಗದ್ದೆ ಮಾಡಿದ್ದಾರೆ. ಹಾರೆ ಹಿಡಿದು ಬಾವಿ ತೋಡಿದ್ದಾರೆ, ಭೂ ದೇವಿಗೆ ಬೆವರಿನ ಅಭಿಷೇಕ ಸಲ್ಲಿಸಿದ್ದಾರೆ. ಹಸುಗಳನ್ನು ಸಾಕಿ ಹಾಲನ್ನು ಮಾರಿದ್ದಾರೆ. ಇವೆಲ್ಲವನ್ನು ಕಣ್ಣಾರೆ ಕಂಡಿದ್ದೇನೆ, ಮನಸಾರೆ ಆನಂದ ಪಟ್ಟಿದ್ದೇನೆ. ಆದುದರಿಂದಲೆ ಅವರಿಗೆ ಸೌದೆ ಒಡೆಯುವ ಕೂಲಿಗಳ ಬಗ್ಗೆ, ನೆಲ ಉತ್ತುವ ನೇಗಿಲ ಯೋಗಿಗಳ ಬಗ್ಗೆ, ಶ್ರಮಪಟ್ಟು ದುಡಿಯುವುದರ ಬಗ್ಗೆ ಅವರದು ಎಲ್ಲಿಲ್ಲದ ಅಭಿಮಾನ, ಅನುಕಂಪ ಮತ್ತು ಅಪಾರ ಚಿಂತನೆ, ಅಂಥವರ ಬದುಕನ್ನು ಉತ್ತಮ ಪಡಿಸುವ ಧೃಡ ಸಂಕಲ್ಪ".

"ಅರಸರ ದೊಡ್ಡ ಗುಣವೆಂದರೆ ತಮ್ಮ ವಿರುದ್ಧ ಆರೋಪ ಮಾಡಿ ಅನ್ಯಾಯ ಮಾಡಿದವರನ್ನು ಅವರು ದ್ವೇಷಿಸುತ್ತಿರಲಿಲ್ಲ. ಅಂಥವರು ತಮ್ಮ ತಪ್ಪನ್ನು ತಿಳಿದು ವಿಷಾದ ವ್ಯಕ್ತಪಡಿಸಿದರೆ, ಮತ್ತೆ ಹತ್ತಿರ ಬಂದರೆ, ಮೊದಲಿನ ಸ್ನೇಹ ಮತ್ತು ವಿಶ್ವಾಸವನ್ನು ಧಾರೆಯೆರೆಯುವ ಧಾರಾಳವಾದ ದೊಡ್ಡ ಗುಣ ಅವರ ವಿಶೇಷತೆ. ವೀರನಾದರೆ ವೈರಿಗಳನ್ನು ಮೆಚ್ಚಬೇಕು ಎಂಬ ಎತ್ತರದ ನಿಲುವು, ಆದರ್ಶದ ವ್ಯಕ್ತಿತ್ವ ಅವರದು"

ಶ್ರೀ ಎಂ. ಎಸ್. ರಾಮಯ್ಯ:

"ಕೇವಲ ಪುಸ್ತಕಗಳನ್ನು ಓದಿ ಜನರ ಮತ್ತು ದೇಶದ ಸಮಸ್ಯೆಗಳನ್ನು ಅರಿಯುವುದರ ಬದಲು ಜನರ ಮಧ್ಯೆ ನಿಂತು ಅವರ ಸಮಸ್ಯೆಗಳನ್ನು ಸುಖ ದುಃಖಗಳನ್ನು ಪ್ರತ್ಯಕ್ಷವಾಗಿ ಅರಿತವರು ದೇವರಾಜ ಅರಸ್. ನಮ್ಮ ದೇಶದ ಸಮಸ್ಯೆಗಳಿಗೆ ಅವರು ಸೂಚಿಸುತ್ತಿದ್ದ ಪರಿಹಾರವು ವ್ಯವಹಾರಿಕವಾಗಿಯೂ ಸರಳವಾಗಿಯೂ ಇರುತ್ತಿತ್ತು. ಅವರು ರೂಪಿಸಿದ ಅನೇಕ ಜನಹಿತ ಯೋಜನೆಗಳು ನಿಜವಾಗಿಯೂ ಪರಿಣಾಮಕಾರಿಯಾಗಲು, ಫಲಕಾರಿಯಾಗಲೂ ದೇವರಾಜ ಅರಸು ಅವರು ಜನತೆಯಿಂದ ಪಡೆದ ಸ್ಫೂರ್ತಿಯೇ ಕಾರಣ ಅವರು ಯಾವ ಶಕ್ತಿಗಳನ್ನು ಕಟ್ಟಿ ಬೆಳೆಸಿದರೋ ಅದೇ ಶಕ್ತಿಗಳಿಗೆ ಅವರು ಬಲಿಯಾದದ್ದು ಒಂದು ಐತಿಹಾಸಿಕ ವಿಪರ್ಯಾಸ. ಅಧಿಕಾರದಲ್ಲಿರಲಿ, ಇಲ್ಲದಿರಲಿ ಅವರು ಯಾವಾಗಲೂ ದೇಶದ ಹಿತಚಿಂತನೆಯಲ್ಲಿಯೇ ನಿರತರಾಗಿದ್ದರು, ಅಖಿಲ ಭಾರತ ಮಟ್ಟದಲ್ಲಿ ಮನ್ನಣೆ ದೊರೆತು ಅವರ ಕೀರ್ತಿಪ್ರತಿಷ್ಠೆಗಳು ಹೆಚ್ಚುತ್ತಿದ್ದ ಕಾಲದಲ್ಲಿಯೇ ಅವರು ವಿಧಿವಶರಾದದ್ದು ನಮ್ಮೆಲ್ಲರ ದೌರ್ಭಾಗ್ಯ"

ಶ್ರೀ ಕೆ. ಆರ್. ಎಸ್. ನಾಯ್ಡು:

"ಅರಸು ಒಕ್ಕಲಿಗ-ಲಿಂಗಾಯಿತರ, ಪ್ರಬಲ ವಿರೋಧಿ ಎಂಬ ಭಾವನೆಯಿದೆ, ಆದರೆ ಅವರ ಅಂತರಂಗ ಬಹಿರಂಗವನ್ನು ಕಂಡ ನನಗೆ ಹಾಗೆನ್ನಿಸುವುದಿಲ್ಲ. ನಾನು ಈ ಬಗ್ಗೆ ಕೆಣಕಿದಾಗ

ಅವರು ಕೊಡುತ್ತಿದ್ದ ನೇರ ಉತ್ತರ, ಒಕ್ಕಲಿಗ ಎಂಬುದು ಒಂದು ಜಾತಿಯಲ್ಲ, ಒಕ್ಕಲುತನ ಮಾಡುವವರೆಲ್ಲ ಒಕ್ಕಲಿಗ, ಒಕ್ಕಲುತನದಿಂದಲೆ ಬಂದ ನಾನು ಆ ನನ್ನ ಒಕ್ಕಲು ಕುಲಕ್ಕೆ ಅನ್ಯಾಯ ಬಗೆಯವುದಾದರೂ ಹೇಗೆ? ದ್ವೇಷ ಸಾಧಿಸುವುದಾದರೂ ಯಾವ ಉದ್ದೇಶಕ್ಕೆ. ಆದುದರಿಂದಲೆ ನಾನು ಜಾತಿ ಸಂಘರ್ಷಕ್ಕಿಂತ ವರ್ಗ ಸಂಘರ್ಷಕ್ಕೆ ಒತ್ತು ಕೊಟ್ಟಿದ್ದು. ನನ್ನಿಂದ ನನ್ನ ಕಾರ್ಯಕ್ರಮದಿಂದಾಗಿ ಯಾವ ಬಡ ಒಕ್ಕಲಿಗ, ಲಿಂಗಾಯಿತನಿಗೆ ಅನ್ಯಾಯವಾಗಿಲ್ಲ. ಬಡಗೇಣಿದಾರನಿಗೆ ತೊಂದರೆಯಾಗಿಲ್ಲ, ಪಟ್ಟಭದ್ರಹಿತಾಸಕ್ತಿ ಶ್ರೀಮಂತ ಲಿಂಗಾಯಿತ-ಒಕ್ಕಲಿಗನಿಗೆ ಅನ್ಯಾವಾಗಿರಬಹುದು. ನನ್ನ ಸೋಲರಿಯದ ಚುನಾವಣಾ ಯಶಸ್ಸಿಗೆ, ಇಡಿ ಹುಣಸೂರು ತಾಲ್ಲೂಕಿನ ಒಕ್ಕಲಿಗ, ಲಿಂಗಾಯಿತ, ಕುರುಬ, ಮುಸಲ್ಮಾನ, ಹರಿಜನ ಬಾಂಧವರ ಸಪ್ರೇಮಿಗಳ ಶ್ರೀರಕ್ಷೆಯೆ ನನ್ನ ಉತ್ಥಾನದ ವಜ್ರ ಕವಚ. ನಾನೊಬ್ಬ ಜಾತಿವಾದಿ, ಲಿಂಗಾಯಿತ, ಒಕ್ಕಲಿಗರ ವಿರೋಧಿಯಾಗಿದ್ದರೆ, ನನ್ನ ವ್ಯಕ್ತಿತ್ವದಲ್ಲಿ ಆ ಕಳಂಕದ ಭಾವನೆಯನ್ನು ಆ ಜನ ಕಂಡಿದ್ದರೆ ನಾನು ಎಂದೋ ರಾಜಕೀಯಕ್ಕೆ ಇತಿಶ್ರಿ ಹಾಡಬೇಕಾಗಿತ್ತು. ನನ್ನ ಕೈಲಾದ ಮಟ್ಟಿಗೆ ಈ ನಾಡಿನ ಬಡವರ ಬಾಳನ್ನು ಎತ್ತರಿಸಲು, ಸುಧಾರಿಸಲು ಪ್ರಯತ್ನಪಟ್ಟು ಸಾಫಲ್ಯ ಪಡೆದಿದ್ದೇನೆ. ಆ ಆತ್ಮತೃಪ್ತಿ ನನಗುಂಟು”

ಶ್ರೀ ಕೆ. ಎನ್. ವೀರಪ್ಪಗೌಡ:

“ಅರಸರನ್ನು ನಿಜಲಿಂಗಪ್ಪನವರು ತಮ್ಮ ಸಚಿವ ಸಂಪುಟಕ್ಕೆ ಸೇರಿಸಿಕೊಂಡರು, ಮಂತ್ರಿ ಆದರೂ ಅರಸರ ತಲೆ ತಿರುಗಲಿಲ್ಲ. ಅಹಂಕಾರದಿಂದ ಬೀಗಲಿಲ್ಲ. ಅವರು ಆಗ ಹಣ ಮಾಡುವ ಗೋಜಿಗೆ ಹೋಗಿರಲಿಲ್ಲ. ಆ ಭಾವನೆಯೂ ಬಂದಿರಲಿಲ್ಲ. ಪ್ರತಿಸಾರಿ ಚುನಾವಣೆಗೆ ಒಂದೆರಡು ಎಕರೆ ಜಮೀನು ಮಾರುತ್ತಿದ್ದರು. 1962ರ ಚುನಾವಣೆಗೆ ನಿಜಲಿಂಗಪ್ಪನವರು ಟಿಕೇಟು ಕೊಡಲಿಲ್ಲ. ಆದರೆ ಅರಸು ಪಕ್ಷದ ಒತ್ತಡ ತಂದು ಟಿಕೇಟು ದಕ್ಕಿಸಿಕೊಂಡು ಪುನಃ ಗೆದ್ದು ಬಂದರು. ಜಾತ್ಯಾತೀತ ಮನೋಭಾವನೆ ಹೊಂದಿದ್ದ ಅರಸರಲ್ಲಿ ಈ ಘಟನೆ ಮನಸ್ಸಿನಲ್ಲಿ ಅಸಮಾಧಾನ ಹೊಗೆಯಾಡಲು ಆರಂಭಿಸಿತು. ಅಲ್ಲಿಂದ ಅರಸು ತಮ್ಮ ಮನೋಭಾವನೆಯನ್ನು ಬದಲಾಯಿಸಿಕೊಂಡಿರಬಹುದನ್ನು ಕಾಣಬಹುದಾಗಿತ್ತು. ಕರ್ನಾಟಕದಲ್ಲಿ ಲಿಂಗಾಯಿತರ ಪ್ರಾಬಲ್ಯದ ಮುಂದೆ ಏನೂ ಮಾಡಲೂ ಸಾಧ್ಯವಿಲ್ಲ. ಎಂಬ ಭಾವನೆ ಅವರಲ್ಲಿ ಭೂತಾಕಾರವಾಗಿ ಬೆಳೆದು ನಿಂತಿತು.

“ಅರಸು ಕಾಲದಲ್ಲಿ ಲಂಚ ಹೆಚ್ಚಾಯ್ತು ಎನ್ನುತ್ತಾರೆ, ನಿಜ ಸ್ನೇಹಿತನಾಗಿ ಒಮ್ಮೆ ಅವರನ್ನು ಕೇಳಿದೆ, ಆಗ ಅವರು “ಪಾರ್ಟಿ ಕಟ್ಟುವುದು ಹೇಗೆ? ಹಿಂದೆ ನಿಷ್ಠಾವಂತರಿದ್ದರು, ದೇಶಕ್ಕಾಗಿ, ಪಕ್ಷಕ್ಕಾಗಿ ನಿಸ್ಪೃಹ ಸೇವೆ ಸಲ್ಲಿಸುತ್ತಿದ್ದರು, ಈಗ ಅಂತಹ ಜನರೆಲ್ಲಿ? ಎಲ್ಲರಿಗೂ ಹಣ ಕೊಡಬೇಕು. ಹಣ ಕೊಟ್ಟರೆ ಕೆಲಸ, ಕಾಲಕ್ಕೆ ತಕ್ಕನಾಗಿ ನಾವೂ ಹೊಂದಿಕೊಳ್ಳಬೇಕು ತಾನೆ? ಕೇವಲ ಕಾರ್ಯಕರ್ತರುಗಳಿಗೆ ಮಾತ್ರವಲ್ಲ, ಶಾಸಕರಿಗೂ ಕೊಡಬೇಕಾಗಿ ಬಂದಿದೆ, ಚುನಾವಣೆ ಖರ್ಚಿಗೂ ನೀಡಬೇಕಾಗಿದೆ. ಹಿಂದೆ ಚುನಾವಣೆ ಖರ್ಚಿಗೆಂದು ಪಕ್ಷ ಚುನಾವಣೆಯ ಸಾಹಿತ್ಯವನ್ನು ಮಾತ್ರ ಒದಗಿಸಿದ್ದರೆ ಸಾಕಾಗುತ್ತಿತ್ತು. ಈಗ ಹಾಗಿಲ್ಲವಲ್ಲ? ಅಲ್ಲದೆ 1969ರಿಂದ ಹುಟ್ಟಿಕೊಂಡ ‘ಯುವ ಕಾಂಗ್ರೆಸ್’ ಬೇರೆ, ಅದನ್ನು ಸಾಕಬೇಕು, ಯಜಮಾನರುಗಳಿಲ್ಲದ ಯುವಕರೆ ಬೇರೆ ಎಂದಾಗ ಅವರಿಗೆ ಉತ್ಪತ್ತಿ ಎಲ್ಲಿ? ಎಲ್ಲ ಸರಕಾರದ ಕಡೆಯಿಂದಲೆ ತಾನೆ? ಇಂತಹ ಕಾರಣಗಳೆಲ್ಲ ಸೇರಿ ಹಣ ವಸೂಲಿ ಜಾಸ್ತಿಯಾಗಿ ಹಿಂದಿಗಿಂತ ಇಂದು ಭ್ರಷ್ಟತೆ ಕಣ್ಣು ಕುಕ್ಕುವಂತೆ ಎದ್ದು ಕಾಣುತ್ತದೆ” ಎಂದರು ಅರಸು.

ಶ್ರೀ ಡಿ. ಕೆಂಪರಾಜು ಅರಸು (ಡಿ. ದೇವರಾಜ ಅರಸು ಅವರ ಸಹೋದರ)

"ತಮ್ಮ ತಮ್ಮ ಕೋಮಿಗೆ ಸೇರಿದ ಜನರಿಗೆ ಶಾಸಕರಾಗಲು ಅವಕಾಶವನ್ನು ಕಲ್ಪಿಸಿಕೊಡುವ ಪ್ರಭಾವ, ಆ ಪ್ರಭಾವಕ್ಕೆ ಮೂಲಸ್ಥಾನವಾದ ಕಾಂಗ್ರೆಸ್ ಸಂಸ್ಥೆಯಲ್ಲಿ ಅವರುಗಳ ವ್ಯಾಪ್ತಿ, ಈ ರೀತಿ ಇಪ್ಪತ್ತೈದು ವರ್ಷಗಳ ಕಾಲದ ಶ್ರಮದಿಂದ ಕಟ್ಟಿಕೊಂಡು ಬಂದಿದ್ದ ಸುಭದ್ರ ರಾಜಕೀಯ ಕೋಟೆಯನ್ನು ಭೇದಿಸಿ, ಇಂದಿರಾ ಗಾಂಧಿಯವರು ಸಾರಿದ 'ಗರೀಬಿ ಹಟಾವ್' ನ ಆಧಾರದ ಮೇಲೆ ಹೊರಟ ಪ್ರಣಾಳಿಕೆಗಳನ್ನು ಜನರಲ್ಲಿ ಸಾರಿ, ಸಮಾಜ ವಾದದಲ್ಲಿ ನಂಬಿಕೆಯಿದ್ದ ಪ್ರಗತಿಶೀಲ ಲಿಂಗಾಯಿತ ಮತ್ತು ಒಕ್ಕಲಿಗ ಶಾಸಕರ ಗುಂಪನ್ನು ಕಟ್ಟಿಕೊಂಡು ಸರ್ಕಾರವನ್ನು ಸ್ಥಿತಿಗತಿಗಳನ್ನು ಪರಿಶೀಲಿಸಿ, ಅವರುಗಳಿಗೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸೌಲಭ್ಯಗಳನ್ನು ಒದಗಿಸಿಕೊಡಲು ಸೂಕ್ತವಾದ ಸಲಹೆಗಳನ್ನು ಒಳಗೊಂಡ ಒಂದು ವರದಿಯನ್ನು ಕೊಡಲು ಹಾವನೂರ್ ಕಮಿಷನ್‌ನನ್ನು ಸ್ಥಾಪಿಸಿದರು. ಸರ್ಕಾರ ಒದಗಿಸುವ ಅನೇಕ ಸವಲತ್ತುಗಳನ್ನು ಗ್ರಾಮಗಳಲ್ಲಿರುವ ಹರಿಜನ, ಹಿಂದುಳಿದ ಜನ, ಅಲ್ಪಸಂಖ್ಯಾತರು ಮತ್ತು ಕಾಡು ಪ್ರದೇಶದಲ್ಲಿ ವಾಸಿಸುವ ಗಿರಿಜನರಿಗೆ ಸೇರಬೇಕಾದರೆ, ಆ ಪ್ರಜೆಗಳಲ್ಲಿ ರಾಜಕೀಯ ಜಾಗೃತಿ ಉಂಟಾಗಬೇಕೆಂದು ಆಗಲೆ ವಿಧಾನಸೌಧದಿಂದ ಹಿಡಿದು ಕರ್ನಾಟಕದ 26 ಸಾವಿರ ಗ್ರಾಮಗಳವರೆಗೂ ಹಂತಹಂತದಲ್ಲಿಯೂ ಬೇರೂರಿ ಕುಳಿತಿರುವ ಶೋಷಣೆಕಾರಕ ಹಿಡಿತದಿಂದ ಆ ದೀನದಲಿತರೂ, ಎಲ್ಲ ಕೋಮಿನ ಬಡವರೂ ತಪ್ಪಿಸಿಕೊಳ್ಳಲು ಸಾಧ್ಯವೆಂದು ಅವರುಗಳ ಜೀವನ ಸುಧಾರಣೆಗೆ ಅದೊಂದೆ ಮಾರ್ಗವೆಂದು ನಂಬಿದ್ದ ನನ್ನ ಅಣ್ಣನವರು ಹಿಂದುಳಿದ, ಹರಿಜನ, ಗಿರಿಜನರ ಮತ್ತು ಅಲ್ಪಸಂಖ್ಯಾತರ ಮುಖಂಡರುಗಳನ್ನು ಸೇರಿಸಿಕೊಂಡು ಒಂದು ಸಂಸ್ಥೆಯನ್ನು ಸ್ಥಾಪಿಸುವಂತೆ ನನಗೆ ಆದೇಶ ನೀಡಿದರು" ಹೀಗೆ ದೇವರಾಜ ಅರಸರು ದೀನ ದುರ್ಬಲರ ದಾರಿದೀಪವಾಗಿ ಅವರ ಆಶೋತ್ತರಗಳ ಹೊಂಗಿರಣವಾಗಿ ಕಂಗೊಳಿಸಿದರು..

ಡಾ. ಡಿ. ಎಂ. ನಂಜುಂಡಪ್ಪ

ಯೋಜನಾ ಇಲಾಖೆಯಲ್ಲಿ ಸರಕಾರದ ವಿಶೇಷ ಕಾರ್ಯದರ್ಶಿಯಾಗಿ ಸ್ವಲ್ಪಕಾಲ ಕೆಲಸ ಮಾಡಿ, ಕಾರ್ಯದರ್ಶಿಯಾಗಿ ಜವಾಬ್ದಾರಿ ಹೊತ್ತಮೇಲೆ ಸುಮಾರು 7-8 ವರ್ಷಗಳು ಶ್ರೀ ಅರಸರು ಮುಖ್ಯಮಂತ್ರಿಯಾಗಿದ್ದಾಗ ಅವರೊಂದಿಗೆ ನಿಕಟವಾಗಿ ಕಾರ್ಯಮಾಡುವ ಅವಕಾಶ ದೊರಕಿತು. ಈ ಸಂದರ್ಭದಲ್ಲಿ ಅನೇಕ ಬಾರಿ, ವಿವಿಧ ಆರ್ಥಿಕ- ಸಾಮಾಜಿಕ ಸಮಸ್ಯೆಗಳ ಬಗ್ಗೆ ವಿಚಾರ ಮಂಥನ ಮಾಡಿದ್ದೂ ಉಂಟು. ಆದರೆ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದ ಅಭಿಪ್ರಾಯ, ಶ್ರೀ ಅರಸರು ತಮ್ಮ ವಿಚಾರಧಾರೆಯಲ್ಲಿ ವೈಜ್ಞಾನಿಕ ದೃಷ್ಟಿ ಹೊಂದಿದ್ದಾರೆ. ವೈಜ್ಞಾನಿಕವಾಗಿಲ್ಲದ ಯಾವ ಉತ್ತರವನ್ನು ಯಾರು ಹೇಳಿದರು ಸುಲಭವಾಗಿ ಒಪ್ಪುವ ವ್ಯಕ್ತಿಯಲ್ಲ. ಇದಕ್ಕೇನಾದರೂ ಒಂದು ಮೂಲಕಾರಣವಿದೆಯೆ? ಎಂಬ ಪ್ರಶ್ನೆಗೆ-ನನ್ನಲ್ಲಿ ಮೊದಲು ಸ್ವಲ್ಪಕಾಲ ಉತ್ತರ ಸಿಗದೆ ಇತ್ತು. ಆನಂತರ ನನಗೆ ಅವರು ವಿಜ್ಞಾನದಲ್ಲಿ ಪದವಿ ಪಡೆದವರು ಮತ್ತು ವಿಚಾರಶೀಲರಾಗಿ ಅನೇಕ ಉತ್ತಮ ಗ್ರಂಥಗಳನ್ನು ಓದುವ ಹವ್ಯಾಸ ಇಟ್ಟುಕೊಂಡಿದ್ದಾರೆ ಎಂದು ತಿಳಿಯಿತು. ಬಹುಶಃ ಇದರ ಒಂದು ಪರಿಣಾಮ ಹಾಗೂ ಬದುಕಿನ ಪರಿಪೂರ್ಣ ಪರಿಜ್ಞಾನ ಅವರ ವೈಜ್ಞಾನಿಕ ದೃಷ್ಟಿಗೆ ಎಂಬ ನಿರ್ಣಯಕ್ಕೆ ಬರಲು ಬಹಳ ಕಾಲ ಬೇಕಾಗಲಿಲ್ಲ.

ಶ್ರೀ ಬಸವರಾಜ ಕಟ್ಟಿಮನಿ :

"ನಾನು ಕಂಡಂತೆ-ಅರಸುರವರು (ವಿಧಾನಸಭೆ-ವಿಧಾನಪರಿಷತ್‌ಗಳ ಪ್ರಶ್ನೋತ್ತರ ಕಾಲದಲ್ಲಿ) ಒಂದು ಬಾರಿಯೂ ಅನುಮಾನಿಸಿದವರಲ್ಲ. ಎದುರು ಪಕ್ಷದ ಸದಸ್ಯರ ಬಾಣದಂತಹ ಪ್ರಶ್ನೆಗಳನ್ನು, ಬಾಣಗಳಂತಹ ಉತ್ತರದಿಂದಲೆ ಎದುರಿಸುತ್ತಾರೆ. ಸರಕಾರವನ್ನು ಪೇಚಿಗೆ ಸಿಲುಕಿಸಲು ಪ್ರಯತ್ನಿಸುವವರನ್ನು ಮೆತ್ತಗೆ ಮಾಡುತ್ತಾರೆ. ಎಲ್ಲ ಮಂತ್ರಿಗಳ, ಎಲ್ಲ ಖಾತೆಗಳ ಎಲ್ಲ ವಿಷಯಗಳೂ ಅರಸರಿಗೆ ಗೊತ್ತು. ಪ್ರಶ್ನೆಗಳಿಗೆ ಉತ್ತರಿಸಲಾರದೆ ಕಕಮಕ ಮಾಡುವ ಮಂತ್ರಿಗಳ ಪರವಾಗಿ ಒಮ್ಮೊಮ್ಮೆ ಅವರೇ ಎದ್ದು ಎದುರಿಸುತ್ತಾರೆ. ಒಮ್ಮೆ ಪಡಿತರದಲ್ಲಿ ಸಿಕ್ಕುವ ಜೋಳ ಚೆನ್ನಾಗಿಲ್ಲ. ಎಂದು ಪರಿಷತ್ತಿನಲ್ಲಿ ದಾಳಿ ನಡೆಯಿತು. ಎದುರು ಪಕ್ಷದವರು ಸ್ವಲ್ಪ ಜೋಳವನ್ನು ಪ್ರದರ್ಶಿಸಿದರು. ಸರಿ ನಮ್ಮ ಅರಸುರವರು ಜೋಳ ತರಿಸಿ ನೋಡಿದರೆ ಈ ಜೋಳಕ್ಕೇನಾಗಿದೆ? ಚೆನ್ನಾಗಿಯೇ ಇದೆಯಲ್ಲ? ಇದರಿಂದ ರೊಟ್ಟಿ ಮಾಡಿಸುತ್ತೇನೆ. ನಮ್ಮ ಮನೇಲಿ ಊಟಕ್ಕೆ ಬನ್ನಿ!" ಎಂದು ರಾಮಕೃಷ್ಣ ಹೆಗಡೆಯವರಿಗೆ ಆಮಂತ್ರಣವಿತ್ತರು. ಸರಿ, ದೀರ್ಘವಾಗ್ವಾದ ನಡೆಯದೆ ನಗೆಯಲ್ಲಿ ಮುಗಿಯಿತು, ಇಂಥ ಪ್ರಸಂಗಗಳು ನೂರಾರು".

"ಒಂದೊಂದು ಸಾರಿ ಅರಸರು ಸಿಟ್ಟಿಗೇಳುವುದು ಉಂಟು. ಆದರೆ ಎಂಥ ಸಿಟ್ಟು ಬಂದಾಗಲೂ, ವಿಧಾನ ಪರಿಷತ್ತಿನಲ್ಲಿ ಅಸಭ್ಯ ಅಶ್ಲೀಲ ಪದಗಳನ್ನು ಉಪಯೋಗಿಸುತ್ತಿರಲಿಲ್ಲ. ಸಿಟ್ಟಿನ ಭರದಲ್ಲಿ ಹಳೆಯ ಮೈಸೂರಿನ ಹಲವು ಬಿರುಸು ಮಾತುಗಳನ್ನಾಡಿ, ಅನಂತರ ತಾವಾಗಿಯೇ ತಣ್ಣಗಾಗುತ್ತಾರೆ. ಈ ವಿಚಾರದಲ್ಲಿ ಅವರಿಗೆ ಜವಾಹರಲಾಲರಂತೆ ಕೋಪ ಬರುತ್ತದೆ. ಬಂದಂತೆಯೇ ಬಂದಂತೆಯೇ ಇಳಿದು ಹೋಗುತ್ತದೆ. ಅವರನ್ನು ಯಾರೂ ತಪ್ಪಾಗಿ ಭಾವಿಸುವುದಿಲ್ಲ".

"ವಿಧಾನ ಮಂಡಲದಲ್ಲಿ ಬಗೆ ಬಗೆಯ ಭಾಷಣ ಮಾಡುವುದರಲ್ಲೂ ಅರಸರನ್ನು ಸರಿಗಟ್ಟುವವರು ಬಹಳ ಜನರಿಲ್ಲ. ಲೋಕಾಭಿರಾಮರಾಗಿ ಮಾತನಾಡುತ್ತಾ, ಎಲ್ಲ ಸದಸ್ಯರನ್ನು ಗೆದ್ದುಕೊಳ್ಳುವ ವಿಶಿಷ್ಟ ಕಲೆ ಅರಸರಲ್ಲಿದೆ. ವಿಧಾನ ಪರಿಷತ್ತಿನಲ್ಲಿ ನಾಯಕರಾಗಿರುವ ರಾಮಕೃಷ್ಣ ಹೆಗಡೆಯವರು ತುಂಬ ಅನುಭವಿಕರು, ಬುದ್ಧಿವಂತರು, ಶ್ರೇಷ್ಠ ದರ್ಜೆಯ ಮಾತುಗಾರರು, ಅಂಕಿ ಅಂಶಗಳನ್ನು ದಾಖಲೆಗಳನ್ನು, ಪುಂಖಾನುಪುಂಖವಾಗಿ ಒದಗಿಸುತ್ತಾ ಸರಕಾರದ ಮೇಲೆ ಪ್ರಚಂಡ ದಾಳಿ ನಡೆಸುತ್ತಾರೆ ಹೆಗಡೆಯವರು. ಆ ದಾಳಿಯನ್ನು ಸಮರ್ಥವಾಗಿ ಎದುರಿಸಿ, ವಾದದಲ್ಲಿ ವಿಜೃಂಭಿಸುವ ಏಕಮಾತ್ರ ವ್ಯಕ್ತಿ ಎಂದರೆ ಅರಸುರವರೆ".

ಶ್ರೀ ಬಿ. ಎಂ. ರಂಗಯ್ಯ:

ಅರಸರು ಶಾಸನ ಸಭೆಯಲ್ಲಿ ವಿರೋಧಿಗಳಿಗೆ ಉತ್ತರ ಕೊಡುವಾಗಲೂ ಅಷ್ಟೆ ಖಂಡತುಂಡ. ಒಮ್ಮೆ ಶಾಸನಸಭೆಯಲ್ಲಿ ಜನಸಂಘದ ಮುಳ್ಳೂರು ಆನಂದರಾಯರು ಮತ್ತು ಎ.ಕೆ. ಸುಬ್ಬಯ್ಯನವರು ಅರಸರು ರಾಜಿನಾಮೆ ಕೊಡುವಂತೆ ಕೂಗಾಡಿದರು, ಆನಂದರಾಯರು ಅರಸು ಅಖಿಲ ಭಾರತದ ವ್ಯಕ್ತಿಯಾಗಲು ಮುಖ್ಯಮಂತ್ರಿ ಪದವಿಗೆ ರಾಜಿನಾಮ ಕೇಳಿದಾಗ ಅರಸರು, ನಾನು ರಾಜಿನಾಮೆ ಕೊಡಲು ಸಿದ್ಧ, ಆದರೆ ನೀವು ಆ ಸ್ಥಾನಕ್ಕೆ ಬರುವ ಆಶ್ವಾಸನೆ ಕೊಡಬೇಕು ಎಂದರು. ಸುಬ್ಬಯ್ಯನವರ ವಾದದಲ್ಲಿ ಹುರುಳಿದ್ದರೆ ಮಡಿಕೇರಿಯಲ್ಲಿ ನಡೆದ ಚುನಾವಣೆಗಳಲ್ಲಿ ಸುಬ್ಬಯ್ಯನವರ ಪಕ್ಷ ಏಕೆ ಹೆಚ್ಚು ಸಂಖ್ಯೆಯಲ್ಲಿ ಬರಲಿಲ್ಲ ಎಂದು ಪ್ರಶ್ನಿಸಿದರು, ಅಲ್ಲದೆ ಸುಬ್ಬಯ್ಯನವರು ಅಸೆಂಬ್ಲಿ

ಚುನಾವಣೆಯಲ್ಲಿ ಸೋತಾಗ ವಿಧಾನ ಪರಿಷತ್ತಿಗೆ ರಾಜಿನಾಮೆ ಕೊಟ್ಟರೆ? ಕೊಡದೆ ಮುಂದುವರಿದಾಗ ನನ್ನನ್ನು ರಾಜಿನಾಮೆ ಕೊಡು ಎಂದು ಕೇಳುವ ನೈತಿಕ ಹಕ್ಕಿಲ್ಲ? ಎಂದು ಕೇಳಿದರು. ಅಶಿಸ್ತು ಮತ್ತು ಕಾರ್ಯಭಂಗ ಕಾರ್ಯಗಳಲ್ಲಿ ದಲಿತ ಜನರೆ ತೊಡಗಿದ್ದರೂ ಅವರು ಸಹಿಸುತ್ತಿರಲಿಲ್ಲ. ಒಮ್ಮೆ ಬೀದರ್‌ನಲ್ಲಿ ದಿ|| ಅಂಬೇಡ್ಕರ್ ಹೆಸರಿನಲ್ಲಿ ಶಾಂತಿ, ಶಿಸ್ತುಗಳ ಭಂಗವಾಗಿ ವಿಧಾನಸಭೆಯಲ್ಲಿ ಪ್ರಸ್ತಾಪಕ್ಕೆ ಬಂದಾಗ ಕಾಯಿದೆಯನ್ನು ಉಲ್ಲಂಘಿಸುವ ಜನ ಹರಿಜನರೇ ಆದರೂ ಶಿಕ್ಷೆ ಅನುಭವಿಸಬೇಕಾಗುತ್ತದೆ ಎಂದು ಕಟುವಾಗಿ ಉತ್ತರಿಸಿದರು.

ಶ್ರೀ ಪಾಟೀಲ ಪುಟ್ಟಪ್ಪ:

"ಅರಸರದು ಸರದಾರ ಗುಣ ಅವರು ಯಾವಾಗಲೂ ತಮ್ಮ ಮನಸ್ಸಿನಲ್ಲಿ ಇರುವುದನ್ನೆ ಹೇಳುತ್ತಾರೆ. ತಮ್ಮ ಮನಸ್ಸಿನಲ್ಲಿ ಇರುವುದನ್ನು ಮಾಡುತ್ತಾರೆ. ಅವರು ಆಗಲಿ ಎಂದು ಹೇಳಿದರೆ ಆಯಿತೆಂದೆ ತಿಳಿಯಬೇಕು. ಹಾಗೆ ತಾವು ಮಾಡಿರುವುದರ ಬಗ್ಗೆ ಯಾವಾಗಲೂ ಸಂದೇಹದಲ್ಲಿ ಇರಿಸುವುದಿಲ್ಲ".

ದೇವರಾಜ ಅರಸು ನಂಬುವಂಥ ಸ್ನೇಹಿತ ನಂಬುವಂಥನಾಯಕ. ಅವರು ಬುದ್ಧಿವಾದ ಬಗೆಗೆ, ದೀನ ದಲಿತರ ಬಗೆಗೆ ಅಪಾರವಾದ ಮರುಕ, ಅಂತಃಕರಣ ಹೊಂದಿದವರು. ಕರ್ನಾಟಕ ಅವರ ಕಾಲದಲ್ಲಿ ಸಾಕಷ್ಟು ಜನರ ಆಸೆ ಆಕಾಂಕ್ಷೆಗಳನ್ನು ಸಿದ್ಧಪಡೆದು, ಸುಖ ಸಮೃದ್ಧಿಗಳ ಸಾಫಲ್ಯ ಪಡೆಯಿತು".

ಶ್ರೀ ಕೆ. ಮಲ್ಲಣ್ಣ:

ರಾಜಕಾರಣಕ್ಕೆ ಪ್ರವೇಶಿಸುವರಲ್ಲಿ ಎರಡು ವಿಧ ಪಕ್ಷವನ್ನು ಬೆಂಬಲಿಸಿ ಪಕ್ಷದ ಬೆಂಬಲದಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಾಯಕರ ಬೆಂಗಾವಲಿಗೆ ನಿಲ್ಲುವವರದು ಒಂದುವರ್ಗ. ತಾವೇ ಪಕ್ಷದ ಮುಂಚೂಣಿಯಲ್ಲಿ ನಿಂತು ಪಕ್ಷದ ನೇತಾರರಾಗಿ ಮುನ್ನಡೆಯ ಬಯಸುವವರದು ಇನ್ನೊಂದು ವರ್ಗ. ಈ ಎರಡನೆಯ ವರ್ಗದ ನಾಯಕರ ಗುಂಪಿಗೆ ಶ್ರೀ ಡಿ. ದೇವರಾಜ ಅರಸು ಸೇರಿದ್ದಾರೆ. ಅವರಲ್ಲಿ ಆದರ್ಶ ನಾಯಕನ ಎಲ್ಲ ಲಕ್ಷಣಗಳು ಹದವಾಗಿ ಸಮ್ಮಿಳಿತಗೊಂಡಿವೆ.

ಶ್ರೀ ಚಂದ್ರಪ್ರಭಾ ಅರಸು:

"ನಮ್ಮ ತಂದೆ ನಿಷ್ಠುರವಾದಿಗಳು, ಅವರು ಮುಖ್ಯಮಂತ್ರಿ ಆದಾಗ ನಿವೇಶನ ಕೊಡಿಸಿ ಎಂದು ಮಗಳಾಗಿ ಕೇಳಿಕೊಂಡೆ, ಆಗ ಅವರು ನಾನು ನಿಮಗೆ ಒಳ್ಳೆಯ ವಿದ್ಯಾಭ್ಯಾಸ ಕೊಡಿಸಿದ್ದೇನೆ. ಮದುವೆ ಮಾಡಿ ಒಳ್ಳೆಯ ಮನೆತನಕ್ಕೆ ಸೇರಿಸಿದ್ದೇನೆ. ನನ್ನ ಅಧಿಕಾರವಧಿಯಲ್ಲಿ ಆಸ್ತಿ-ಗೀಸ್ತಿ ಮಕ್ಕಳಿಗಾಗಿ ಮಾಡಿಸಿಕೊಡುವ ವ್ಯಕ್ತಿ ನಾನಲ್ಲ. ನನ್ನಿಂದ ಹೆಚ್ಚಿಗೆ ನಿರೀಕ್ಷಿಸಬಾರದು ಎಂದು ತಾಕೀತು ಮಾಡಿದರು. ಅಷ್ಟೆ ಅಲ್ಲ, ಅವರಿಗಾಗಿಯೆ ಬೆಂಗಳೂರಿನಲ್ಲಿ ಒಂದು ಮನೆ ಮಾಡಬೇಕೆಂದು ಮನೆ ಮಂದಿಯೆಲ್ಲ ದುಂಬಾಲು ಬಿದ್ದೆವು. ಕಲ್ಲಹಳ್ಳಿಯಲ್ಲಿ ಮನೆಯಿರುವಾಗ ಇಲ್ಲೇಕೆ? 500ರೂ. ಕೊಟ್ಟರೆ ಒಳ್ಳೆಯ ಬಾಡಿಗೆ ಮನೆ ಸಿಗುತ್ತೆ ಎಂದು ಹೇಳಿ ನಮ್ಮ ಆಸೆಗೆ ತಣ್ಣೀರೆರೆಚಿದರು. ಕೊನೆಗೆ ಅವರ ಪಾರ್ಥಿವಶರೀರವನ್ನು ಬಾಡಿಗೆ ಮನೆಯಿಂದಲೇ ಕೊಂಡೊಯ್ಯಲಾಯಿತು. ಹೀಗೆ ಅವರು

ಮನೆ, ಆಸ್ತಿ, ಉದ್ಯಮ ನಡೆಸಿ ಸಂಪತ್ತನ್ನು ಸಂಗ್ರಹಿಸುವ ವ್ಯಾಮೋಹ ಹೊಂದಿರಲಿಲ್ಲ. ಅವರು ಮಾನವ ವಾದಿಯಾಗಿ ಜನತೆಯ ಕಲ್ಯಾಣಕ್ಕಾಗಿ ದುಡಿದರು. ಆ ಗಳಿಕೆಯೇ ಅವರ ನಿಜವಾದ ಆಸ್ತಿ. ಆ ಪ್ರೀತಿಯ ಆಸ್ತಿಯ ಮಹತ್ವವನ್ನು ಅವರ ಶವಯಾತ್ರೆಯಲ್ಲಿ ಕಂಡು ಹೆಮ್ಮೆಪಟ್ಟಿದ್ದೇನೆ".

ಶ್ರೀ ಎಂ. ಸಿ. ಪೆರುಮಾಳ್:

"(ಅರಸು) ಅವರ ನನ್ನ ಸ್ನೇಹ ಬಹಳ ದೀರ್ಘ ಕಾಲದ್ದು. ಅವರ ಪರಿಚಯವಾದದ್ದು 1940ರ ಹೊತ್ತಿನಲ್ಲಿ ಆಗ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಚುನಾವಣೆ, ಮೈಸೂರು ಜಿಲ್ಲೆಯಿಂದ ಅರಸರನ್ನು ಕಾಂಗ್ರೆಸ್ಸಿನಿಂದ ನಿಲ್ಲಿಸುವ ತೀರ್ಮಾನ. ಅದಕ್ಕಾಗಿ ಕೆ. ಸಿ. ರೆಡ್ಡಿಯವರು ಟಿ. ಸಿದ್ದಲಿಂಗಯ್ಯನವರು ಮತ್ತು ನಾನು ಅವರನ್ನು ಕಾಣಲು ಕಲ್ಲಹಳ್ಳಿಗೆ ಹೋದೆವು. ಅರಸರು ಹೊಲದಿಂದ ಎತ್ತುಗಳನ್ನು ಹೊಡೆದುಕೊಂಡು ಮನೆಯ ಕಡೆಗೆ ಬರುತ್ತಿದ್ದರು. ದಾರಿಯಲ್ಲಿ ಭೇಟಿಯಾಯಿತು. ಸಮಾನ ಧರ್ಮದ, ಹರೆಯದ ನಾವಿಬ್ಬರೂ ಆಕರ್ಷಿತರಾದೆವು. ಇದು ನಮ್ಮಿಬ್ಬರ ಪ್ರಥಮ ಪರಿಚಯ. ಅರಸು ಅತ್ಯಂತ ಸ್ವಾಭಿಮಾನಿ ಹಾಗೂ ದೇಶಾಭಿಮಾನಿ. ಅವರು ಹರಯದಲ್ಲಿ ಕ್ರಾಂತಿಕಾರಿ ಸುಭಾಷ ಚಂದ್ರಬೋಸರ ನಿಷ್ಠಾವಂತ ಭಕ್ತರು. ಅವರು ಪಾಳೆಗಾರ ವಂಶದಲ್ಲಿ ಹುಟ್ಟಿದರೂ ಪರಿಸ್ಥಿತಿಯಿಂದ ಬಡವರು. ಶ್ರೀಮಂತಿಕೆಯನ್ನು ನೋಡಿದವರು, ಬಡತನವನ್ನು ಅನುಭವಿಸಿದವರು, ಆದುದರಿಂದಲೇ ಅವರು ತಮ್ಮ ಜೀವನದಲ್ಲಿ ಬಡತನ ಇದ್ದಾಗ ಕುಗ್ಗಲಿಲ್ಲ. ಸಿರಿತನ ಬಂದಾಗ ಹಿಗ್ಗಲಿಲ್ಲ. ಒಂದು ರೀತಿಯ ಸ್ಥಿತ ಪ್ರಜ್ಞ".

ಶ್ರೀ ಗರುಡನಗಿರಿ ನಾಗರಾಜ:

"1975ರ ಡಿಸೆಂಬರ್ (ಅರಸುರವರು) ಜನಸಂಪರ್ಕಕ್ಕಾಗಿ ಬಿಜಾಪುರದಲ್ಲಿದ್ದಾಗ ಸಮಾಜ ಸೇವಾ ಕಾರ್ಯಕರ್ತರೊಬ್ಬರು ಅರಸು ಅವರನ್ನು ಭೇಟಿಮಾಡಿ ಇಲ್ಲಿ ಹರಿಜನರಿಗೆ ಕುಷ್ಠರೋಗ ಕಾಡುತ್ತಿದೆ. ನೂರಾರು ಜನ ಈ ರೋಗದಲ್ಲಿ ಬಳಲುತ್ತಿದ್ದಾರೆ. ಈ ರೋಗ ತಗುಲಿದ ನೂರು ಕುಟುಂಬಗಳನ್ನು ಊರಾಚೆ ಕಳುಹಿಸಲಾಗಿದೆ. ಊರೊಳಗೆ ಅವರು ಬಾರದಂತೆ ನಿಷೇಧಿಸಲಾಗಿದೆ, ಬಡತನದ ಜೊತೆಗ ರೋಗ ಅವರನ್ನು ಕಿತ್ತು ತಿನ್ನುತ್ತಿದೆ. ಅದರಿಂದಾಗಿ ಏನಾದರೂ ಮಾಡಿ. ಎಂದು ಅವರನ್ನು ಮನವಿ ಮಾಡಿಕೊಂಡರು. ಅರಸು ಆಪ್ತಕಾರ್ಯದರ್ಶಿಯವರನ್ನು ಕರೆಸಿ "ಇಂದು ಬೆಳಗಿನ ಪೂರ್ವ ನಿಯೋಜಿತ ಕಾರ್ಯಕ್ರಮವನ್ನು ರದ್ದುಮಾಡಿದ್ದೇನೆ. ಈಗಿಂದೀಗಲೇ ಹರಿಜನ ಕುಷ್ಠರೋಗಿಗಳನ್ನು ನೋಡಲು ಹೊರಟ್ಟಿದ್ದೇನೆ, ಜೊತೆಯಲ್ಲಿ ಯಾರೂ ಬರುವುದು ಬೇಡ, ಜಿಲ್ಲಾಧಿಕಾರಿಯೊಬ್ಬರು ಬರಲಿ ಎಂದು ತಾಕೀತು ಮಾಡಿದರು.

ಬೆಳಗಿನ ಜಾವ ಜಿಲ್ಲಾಧಿಕಾರಿಯೊಂದಿಗೆ ರೋಗಿಗಳ ಬಿಡಾರಕ್ಕೆ ತೆರಳಿ ಎಲ್ಲರನ್ನೂ ಕರೆಯುವಂತೆ ತಿಳಿಸಿದರು. ಬಂದವರು ಯಾರು ಎಂಬುದನ್ನು ಜಿಲ್ಲಾಧಿಕಾರಿಗಳು ಹೇಳಿ ಕಷ್ಟ -ಸುಖದ ವಿಚಾರ ನಿವೇದಿಸಿಕೊಳ್ಳಲು ತಿಳಿಸಿದರು. ಇದುವರೆಗೆ ನಾಗರೀಕರ ಮುಖ ಕಾಣದೆ ಸೊರಗಿ, ಜೀವದ ಆಸೆಯನ್ನು ಕಳೆದುಕೊಂಡಿದ್ದ ಕುಷ್ಠರೋಗಿಗಳ ತಂಡ ಬಂದು ಅರಸುರವರ ಸುತ್ತ ನಿಂತು ರೋಧಿಸತೊಡಗಿತು. ದೇವರಾಜ ಅರಸು 15 ನಿಮಿಷ ತಲೆ ತಗ್ಗಿಸಿಕೊಂಡು

ನಿಂತಿದ್ದರು. ಅವರ ಪರಿಸ್ಥಿತಿ ಕೇಳುವ ಅಗತ್ಯ ಉಳಿದಿರಲಿಲ್ಲ. ಈ ನೂರು ಕುಟುಂಬದ ಕುಷ್ಠರೋಗಿಗಳಿಗೆ ತತ್‌ಕ್ಷಣ ಒಳ್ಳೆಗುಡಿಸಲು, ಅಗತ್ಯ ಔಷಧೋಪಚಾರ ಹಾಗೂ ಉಚಿತ ಊಟದ ವ್ಯವಸ್ಥೆ ಮಾಡಲು 75 ಸಾವಿರ ಬಿಡುಗಡೆ ಮಾಡಿದ್ದೇನೆ ಎಂದು ಜಿಲ್ಲಾಧಿಕಾರಿಗಳಿಗೆ ತಿಳಿಸಿದರು. ಇದರಲ್ಲಿ ಕಾನೂನು ತೊಡಕಿದೆ ಸಾರ್, ಹಾಗೆ 75 ಸಾವಿರ ರೂ. ಕೊಡಲು ಸಾಧ್ಯವಿಲ್ಲ ಎಂದು ಜಿಲ್ಲಾಧಿಕಾರಿಗಳು ಹೇಳಿದಾಗ, ಅರಸು ಕೆರಳಿ ಕೆಂಡವಾದರು. ಜನಹಿತಕ್ಕೆ ಇಲ್ಲದ ಕಾನೂನು ಬೆಂಕಿಗೆ ಹಾಕಿ, ನಿಮಗೆ ಬುದ್ಧಿ ಇದೆಯೇ? ಸರಕಾರ ಯಾರು? ಕಾನೂನು ಮಾಡೋರು ಯಾರು? ನಾನೆ? ನಾನು ಹೇಳಿದ್ದನ್ನು ತುಟಿಪಿಟಿಕ್ ಎನ್ನದೆ ಜಾರಿ ಮಾಡೋ ಕೆಲಸ ನಿಮ್ಮದು ಎಂದಾಗ ಜಿಲ್ಲಾಧಿಕಾರಿ ತಲೆ ತಗ್ಗಿಸಿ 'ಎಸ್ ಸಾರ್' ಎಂದರು. ಇಷ್ಟಕ್ಕೆ ಅವರು ಸುಮ್ಮನಾಗಲಿಲ್ಲ. ನೋಡಿ ಈ ಜನರ ಕಾನೂನು ವ್ಯವಸ್ಥೆ ಔಷಧೋಪಚಾರ, ಉಚಿತ ಊಟದ ವ್ಯವಸ್ಥೆ ಇತ್ಯಾದಿಗಳ ಬಗ್ಗೆ ಒಂದು ಯೋಜನೆ ತಯಾರಿಸಿ ನಾನು ಬೆಂಗಳೂರು ತಲುಪುವ ವೇಳೆಗೆ ನನ್ನ ಕೈ ಸೇರಬೇಕು, ಇದನ್ನು ಅತಿ ಜರೂರಿಯೆಂದೇ ಪರಿಗಣಿಸಬೇಕು" ಎಂಬ ಆರ್ಡರ್ ನೀಡಿ ಕಾರು ಹತ್ತಿದ್ದರು.

ಶ್ರೀ ಹಾ. ಮ. ನಾಯಕ್ (ರಾಜ್ಯಕ್ಕೆ ಕರ್ನಾಟಕವೆಂದು ನಾಮಕರಣ ಮಾಡಿದ ಸಂದರ್ಭದಲ್ಲಿ):

ವಿವಿಧ ಆಡಳಿತಗಳಲ್ಲಿ ಚೂರು ಚೂರಾಗಿ ಹೋಗಿದ್ದ ಕನ್ನಡ ನೆಲ ಒಂದಾಗಿ, ಕನ್ನಡಿಗರೆಲ್ಲ ಒಂದು ಆಡಳಿತಕ್ಕೆ ಒಳಗಾಗಿ ಕರ್ನಾಟಕವನ್ನು ಕಟ್ಟಿ, ಆಡಳಿತ, ಶಿಕ್ಷಣ, ಜನಜೀವನಗಳಲ್ಲಿ ಕನ್ನಡವನ್ನು ತುಂಬಿಕೊಂಡು ಬಾಳಬೇಕೆಂಬುದು ಕೋಟ್ಯಾಂತರ ಕನ್ನಡಿಗರ ಮುಕ್ಕಾಲು ಶತಮಾನದ ಕನಸು. ಎಷ್ಟೊಂದು ಪುಣ್ಯ ಚೇತನಗಳು, ಎಷ್ಟೊಂದು ವೇದಿಕೆಗಳಿಂದ ಕನ್ನಡಕ್ಕಾಗಿ ಕೂಗಿದ್ದಾರೆ, ಪ್ರಾರ್ಥಿಸಿದ್ದಾರೆ, ಬೇಡಿದ್ದಾರೆ ಎಂಬುದನ್ನು ನೆನಪಿಸಿಕೊಂಡರೆ ಆಶ್ಚರ್ಯವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು, ಹಲವಾರು ಸಂಘ ಸಂಸ್ಥೆಗಳು ಕನ್ನಡದ ಬಗೆ ಬಗೆಯ ಚಳುವಳಿಗಾರರು, ವಿದ್ವಾಂಸರು, ಶ್ರೀ ಸಾಮಾನ್ಯರು ಕನ್ನಡದ ಉತ್ಕರ್ಷಕ್ಕಾಗಿ ಕೈ ಎತ್ತಿದ್ದಾರೆ, ಕೊರಳೆತ್ತಿದ್ದಾರೆ. ಇದೆಲ್ಲದರ ಪರಿಣಾಮವಾಗಿ ಕನ್ನಡ ಇಂದು ನಿಧಾನವಾಗಿಯಾದರೂ ತನಗೆ ತನ್ನ ಮನೆಯಲ್ಲಿ ದೊರೆಯಬೇಕಾದ ಸ್ಥಾನವನ್ನು ಪಡೆಮಕೊಳ್ಳುತ್ತಿದೆ. ಯಾವ ಕೆಲಸಕ್ಕೆ ಆದರೂ, ಎಷ್ಟೆ ದೊಡ್ಡ ಸಂಖ್ಯೆಯ ಜನರ ಶ್ರಮ, ದುಡಿಮೆ, ತಪಸ್ಸುಗಳಿದ್ದರೂ ಕೆಲಸ ಈಡೇರಲು ನಿಮಿತ್ತ ಮಾತ್ರಕ್ಕಾಗಿಯಾದರೂ ಒಬ್ಬ ವ್ಯಕ್ತಿ ಬೇಕೆಬೇಕು. ದೇವರಾಜ ಅರಸರು ಈ ಹೊತ್ತಿನಲ್ಲಿ ಅಂಥ ಒಬ್ಬ ಕಾರಣ ಪುರುಷ.

ಅವರನ್ನು ಅಭಿನಂದಿಸುವುದರೊಂದಿಗೇ ನಾವು ಒಂದು ದೊಡ್ಡ ಪರಂಪರೆಯ ಎಲ್ಲ ಕಾರಣ ಕರ್ತರನ್ನೆಲ್ಲಾ ಸ್ಮರಿಸುತ್ತಿದ್ದೇವೆ, ಗೌರವಿಸುತ್ತಿದ್ದೇವೆ, ವಂದಿಸುತ್ತಿದ್ದೇವೆ. ವ್ಯಕ್ತಿಗತವಾಗಿ ಆ ಒಬ್ಬೊಬ್ಬರಿಗೂ ಸಲ್ಲಬೇಕಾದ ಋಣದ ಭಾರವನ್ನೆಲ್ಲ ನಾವು ಈಗ ದೇವರಾಜ ಅರಸರ ಹೆಗಲ ಮೇಲೆ ಹೇರುತ್ತಿದ್ದೇವೆ. ಆ ಭಾರವನ್ನು ಹೊರುವ ಭುಜಬಲ ಅವರಿಗಿರುವುದು ಅಭಿಮಾನದ ಸಂಗತಿ.

ಶ್ರೀ ಐ. ಕೆ. ಜಾಗೀರ್‌ದಾರ್:

"ಅರಸು ಮುಖ್ಯಮಂತ್ರಿಯಾಗಿ ಎಂಟು ಬಾರಿ ಜನ್ಮೋತ್ಸವ ಆಚರಿಸಿಕೊಂಡರು. ಶಾಸಕರು, ಸಚಿವರು, ರಾಜಕಾರಣಿಗಳು, ಅಧಿಕಾರದ ಕುರ್ಚಿ ಬಯಸಿದವರು, ಜನ್ಮೋತ್ಸವ ಸಮಾರಂಭಗಳಲ್ಲಿ ಭಾಗವಹಿಸಿದರು, ಹಾರಹಾಕಿ ಅಭಿಮಾನ ಪ್ರದರ್ಶಿಸಿದರು. ಶಾಲು ಹೊದಿಸಿ ಹತ್ತಿರಕ್ಕೆ ಬರಲು ಪ್ರಯತ್ನಿಸಿದರು. ನಿಷ್ಠೆ ವ್ಯಕ್ತಪಡಿಸಲು ಹಲವಾರು ಮಂದಿ ಪಾದಮುಟ್ಟಿ ನಮಸ್ಕರಿಸಿದರು. ದೂರದ ಊರುಗಳಲ್ಲಿ ಇದ್ದವರು ಶುಭ ಸಂದೇಶಕಳಿಸಿ ಮುಖ್ಯಮಂತ್ರಿಗಳ ಕಛೇರಿಯಲ್ಲಿ ಹಾಜರಾತಿ ದಾಖಲು ಮಾಡಿದರು. ಪತ್ರಿಕೆಗಳು ಮುಖ ಪುಟದಲ್ಲಿ ಪ್ರಚಾರ ನೀಡಿದವು.

"ಕಾಲಚಕ್ರ ಉರುಳಿತು, ಅರಸು ಅಧಿಕಾರ ಕಳೆದುಕೊಂಡರು, ಸದ್ದುಗದ್ದಲ ಇಲ್ಲದೆ, ಅರಸು ದೆಹಲಿಯಲ್ಲಿ ಜನ್ಮದಿನೋತ್ಸವ ಆಚರಿಸಿಕೊಂಡರು. ಒಂದು ವರ್ಷ ಕಳೆಯಿತು, ಅರಸರ ತಮ್ಮದಾದ ಕಲ್ಲಹಳ್ಳಿಗೆ ಹೋದರು, ಸ್ನೇಹಿತರು ಯಾರೂ ಬರಲಿಲ್ಲ, ಕುಟುಂಬದ ಸದಸ್ಯರೂ ಹಿಂಬಾಲಿಸಲಿಲ್ಲ, ಹತ್ತಾರು ಹಳ್ಳಿ ಜನರ ಗುಂಪಿನಲ್ಲಿ ಜನ್ಮೋತ್ಸವ ನಡೆಯಿತು, ಹತ್ತು ಹದಿನೈದು ಪತ್ರಿಕೆಗಳು ಸುದ್ದಿ ಪ್ರಕಟಿಸಿದವು".

"ಇನ್ನೊಂದು ವರ್ಷ ಕಳೆದು ಹೋಯಿತು, ಎಂದಿನಂತೆ ಮತ್ತೆ ಆಗಸ್ಟ್ 20 ಬಂತು, ಜನ್ಮೋತ್ಸವ ಆಚರಿಸಿಕೊಳ್ಳಲು ಅರಸು ಇರಲಿಲ್ಲ. ಕೆಲವು ದಿನಗಳ ಹಿಂದೆ ಅರಸರ ಉಸಿರಾಟ ನಿಂತು ಹೋಗಿತ್ತು. ಕೆಲವು ದಿನಗಳ ಹಿಂದೆ ಅರಸರ ಉಸಿರಾಟ? ಹೋಗಿತ್ತು. ಆದರೂ ದಿವಂಗತ ಅರಸು ಹೆಸರಿನಲ್ಲಿ ಉಸಿರಾಡಲು ರಾಜಕಾರಣಿಗಳು ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ಸೇರಿದರು. ಅರಸರರಿಂದಲೆ ಸಂಪುಟದಿಂದ ವಜಾ ಮಾಡಿಸಿಕೊಂಡು ಎಸ್. ಬಂಗಾರಪ್ಪ ನಾಯಕತ್ವವಹಿಸಿದರು. ಅದೊಂದು ಭಾರಿ ಸಭೆ. ಅರಸರ ಚಿತ್ರಕ್ಕೆ ಹಾರ ಹಾಕಿದರು. ದೀಪ ಹಚ್ಚಿ ಕೈಮುಗಿದರು. ಪತ್ರಿಕೆಗಳು ದೊಡ್ಡದಾಗಿ ಸುದ್ದಿ ಮಾಡಿದವು. ಆದರೆ ಅರಸು ನೋಡುವ ಇಲ್ಲವೆ ಕೇಳುವ ಪರಿಸ್ಥಿತಿಯಲ್ಲಿ ಇರಲಿಲ್ಲ".

ಶ್ರೀ ಜೆ ಹೆಚ್. ಪಟೇಲ್:

"ಒಮ್ಮೆ ಅವರು ಮುಖ್ಯಮಂತ್ರಿಯಾಗಿದ್ದಾಗ ನಡೆದ ಪ್ರಸಂಗ ನಾನು ತುರ್ತು ಪರಿಸ್ಥಿತಿಯಲ್ಲಿ ಮೀಸಾ ಬಂದಿಯಾಗಿದ್ದೆ. ನನ್ನ ಆರೋಗ್ಯ ಕೆಟ್ಟ ಕಾರಣ ಚಿಕಿತ್ಸೆಗಾಗಿ ಆಸ್ಪತ್ರೆ ಸೇರಿದ್ದೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಾನು ಇದ್ದ ಕೊಠಡಿಯ ಎದುರು ಕೊಠಡಿಯಲ್ಲಿ ಅರಸುರವರ ತಾಯಿಯವರು ಚಿಕಿತ್ಸೆ ಪಡೆಯುತ್ತಿದ್ದರು. ಒಂದು ದಿನ ಬೆಳಿಗ್ಗೆ ಅವರ ತಾಯಿಯನ್ನು ನೋಡಲು ಬಂದ ಮುಖ್ಯಮಂತ್ರಿ ಅರಸರು ಕೊಠಡಿಯ ಮುಂದೆ ಪೋಲೀಸ್ ಕಾವಲಿದ್ದದನ್ನು ಕಂಡು ಕಾರಣ ಕೇಳಿದರು. ಆಗ ನಾನು ಅಲ್ಲಿ ಇದ್ದುದನ್ನು ತಿಳಿದು ನೇರವಾಗಿ ನನ್ನ ಕಡೆ ಬಂದು ನನ್ನ ಆರೋಗ್ಯವನ್ನು ವಿಚಾರಿಸಿ, ತಕ್ಷಣವೆ ವೈದ್ಯರುಗಳನ್ನು ಕರೆದು ಸೂಕ್ತ ಆದೇಶವನ್ನು ಕೊಟ್ಟು ಹೋದರು. ನಾನು ಅವರಿಗೆ ಅಷ್ಟು ಸಮೀಪದ ಸ್ನೇಹಿತನಲ್ಲದಿದ್ದರೂ ಅವರಿಗೆ ಅವರೇ ಬಂದು ನನ್ನ ಆರೋಗ್ಯ ವಿಚಾರಿಸಿದ್ದು, ಅದೂ ತುರ್ತು ಪರಿಸ್ಥಿತಿ ಕಾಲದಲ್ಲಿ ಮೀಸಾ ಬಂದಿಯಾಗಿದ್ದ ನನ್ನನ್ನು ಕಂಡಿದ್ದು ನನ್ನ ಮನಸ್ಸಿಗೆ ಬಹಳ ಹಿಡಿಸಿತು. ಆಗ ಅವರು ನನ್ನ ಆರೋಗ್ಯವನ್ನು ಕಂಡು ಪೆರೋಲ್ ಮೇಲೆ ಬಿಡುಗಡೆ ಮಾಡಿಸುವುದಾಗಿ ಕೇಳಿದರು. ಅದಕ್ಕೆ ನಾನು ಒಪ್ಪಲಿಲ್ಲ, ಅಂದಿನ ಘಟನೆಯ ಬಗ್ಗೆ ಅವರಿಗಾದ

ಮೆಚ್ಚುಗೆಯನ್ನು ಸುಮಾರು 5 ವರ್ಷಗಳ ನಂತರ ಒಂದು ಸಾರ್ವಜನಿಕ ಸಭೆಯಲ್ಲಿ ಸ್ಮರಿಸಿಕೊಂಡರು. ಅವರದೇ ಆದ ಧಾಟಿಯಲ್ಲಿ ಬಿಟ್ಟು ಹೋಗುವವರೆಲ್ಲ ಹೋಗಲಿ, ಆದರೆ ಪಟೇಲರು ಒಬ್ಬರು ನನ್ನೊಡನೆ ಇದ್ದರೆ ಸಾಕು, ರಾಜ್ಯವನ್ನು ಮತ್ತೆ ಕಟ್ಟುತ್ತೇನೆ ಎಂದು ತುಂಬು ಮನದಿಂದ ಹೇಳುತ್ತಿದ್ದರು".

"ಸೈದ್ಧಾಂತಿಕವಾಗಿ ಅವರ ತಿಳುವಳಿಕೆಯ ಆಳ ಅಷ್ಟೇನು ಹೆಚ್ಚಿನದ್ದಾಗಿರಲಿಲ್ಲ, ಅವರು ತುಂಬಾ ಓದುತ್ತಿದ್ದರು, ಜನಸಂಪರ್ಕದಲ್ಲೂ ಅಸಾಧಾರಣ ತಾಳ್ಮೆ, ಜ್ಯೋತಿಷ್ಯದಲ್ಲಿ ಅಚಲ ವಿಶ್ವಾಸ ಇವರದ್ದಾಗಿತ್ತು, ರಾಜಕಾರಣದಲ್ಲಿ ದುಡ್ಡಿನ ಬಳಕೆಯ ಬಗ್ಗೆ ಇಂದಿರಾ ಗಾಂಧಿಯವರ ನೀತಿಗೂ ಅರಸರ ನೀತಿಗೂ ಹೆಚ್ಚಿನ ವ್ಯತ್ಯಾಸ ಇರಲಿಲ್ಲ. ದುರ್ಬಲ ವರ್ಗಗಳ ಏಳಿಗೆಗಾಗಿ ಅವಶ್ಯಕವಾದ ವೈಜ್ಞಾನಿಕ ಶಕ್ತಿಯನ್ನು ಸಂಘಟಿಸಲು ಇವರು ಎಲ್ಲಾ ಮಾರ್ಗಗಳನ್ನು ಅನುಸರಿಸುತ್ತಿದ್ದರು. ಕೆಲವು ವಿಚಾರಗಳಲ್ಲಿ ಇವರು ಕೈಗೊಂಡ ನಿಲುವು ಕರ್ನಾಟಕದ ರಾಜಕಾರಣಕ್ಕೆ ಹೊಸ ತಿರುವು ತಂದುಕೊಟ್ಟಿದೆ. ಅರಸರ ಪೂರ್ವ ಕರ್ನಾಟಕ, ಅರಸರ ನಂತರ ತನ್ನದೇ ಆದ ರಾಜಕೀಯ ಗುಣಗಳನ್ನು ಮೈದೋರಿದೆ. ಅಲ್ಪಸಂಖ್ಯಾತರು, ದುರ್ಬಲ ವರ್ಗದವರು, ಪರಿಶಿಷ್ಟ ಜಾತಿ, ಜನಾಂಗದವರು ತಮ್ಮ ಶಕ್ತಿಯನ್ನು ಕಂಡುಕೊಳ್ಳುವ ನಿರ್ಮಾಣ ಮಾಡಿದ ಯಶಸ್ಸು ದೇವರಾಜ ಅರಸರದು. ಶ್ರೀಮತಿ ಇಂದಿರಾಗಾಂಧಿಯವರು ಈ ವಿಷಯವಾಗಿ ಮಾತನಾಡಿದರೆ ವಿನಹ ಆಚರಣೆಯಾಗಲಿಲ್ಲ. ಇಂದಿರಾಗಾಂಧಿಯವರ ಕಳಕಳಿ ಬಡವರ ಓಟಿನ ಬಗ್ಗೆ ಇದ್ದಷ್ಟು ಅವರ ಹಸಿವಿನ ಬಗ್ಗೆ ಇರಲಿಲ್ಲ. ಆದರೆ ಅರಸರ ಕಳಕಳಿ ಬಡವರ ಬಡತನದ ಬಗ್ಗೆಯೂ ಇತ್ತು. ಅವರ ಓಟಿನ ಬಗ್ಗೆಯೂ ಇತ್ತು. ಆದರೂ ಈ ಹಿಂದುಳಿದ ಜಾತಿ ಜನಾಂಗಗಳು ಇಂದಿರಾ ಭ್ರಮೆಯಲ್ಲಿ ಅರಸರಿಗೆ ದ್ರೋಹ ಬಗೆದವು".

## ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರ್:

"1947ನೇ ಇಸವಿ, ನವೆಂಬರ್ ಅಥವಾ ಡಿಸೆಂಬರ್ ತಿಂಗಳು ಇರಬಹುದು. (ಮುಖ್ಯಮಂತ್ರಿಯಾಗಿ) ಅಧಿಕಾರ ವಹಿಸಿಕೊಂಡ ತರುಣದಲ್ಲಿಯೇ ಶ್ರೀ ಕೆ. ಸಿ. ರೆಡ್ಡಿಯವರು ಒಂದು ಕಾರ್ಯಕ್ರಮಕ್ಕೆ ಬೆಟ್ಟದಪುರಕ್ಕೆ ಬಂದರು. ಬೆಟ್ಟದಪುರದಲ್ಲಿ ನಡೆದ ಸಾರ್ವಜನಿಕ ಸಭೆಗೆ ದೇವರಾಜ ಅರಸರೂ ಬಂದಿದ್ದರು. ಆಗ ಅವರಿಗೆ ಮೂವತ್ತು ವರ್ಷವಿದ್ದಿರಬಹುದು. ಆದರೂ ಆ ವಯಸ್ಸಿಗಾಗಲೇ ಅವರು ಉತ್ತಮ ಕಾಂಗ್ರೆಸ್ ಕಾರ್ಯಕರ್ತನೆಂದೂ, ರೈತ ಸಂಘಟಕರೆಂದೂ ಜನತೆಯ ಸಮಸ್ಯೆಗಳನ್ನು ಆಳವಾಗಿ ಅಭ್ಯಾಸ ಮಾಡಿರುವವರೆಂದೂ ಹೆಸರು ಪಡೆದಿದ್ದರು. ಅರಸರು ಎದ್ದು ನಿಂತು ಮಾತನಾಡಲು ಪ್ರಾರಂಭಿಸಿದರು ಜನಸಮೂಹ ನಿಶ್ಯಬ್ದವಾಗಿ ಆಸೆಯಿಂದ ಅವರ ಮಾತುಗಳನ್ನು ಕೇಳತೊಡಗಿತ್ತು. ಮೈಕ್ ಸಾಧನವಿಲ್ಲದಿದ್ದರೂ ಜನರನ್ನು ಮುಟ್ಟುವುದು ಆ ಧ್ವನಿಗೆ ಸಾಧ್ಯವಾಗಿತ್ತು. ಗಂಭೀರವಾಗಿ ಆಡುವ ಮಾತು ಕೇಳುಗರ ಮನಸ್ಸಿನಲ್ಲಿ ಬೇರೂರುವಂತೆ ಮಾತನಾಡಿದರು. ಭಾರತದ ಭವ್ಯತೆ, ಸ್ವಾತಂತ್ರ್ಯ ಹೋರಾಟದ ಇತಿಹಾಸ, ಮಹಾತ್ಮ ಗಾಂಧೀಜಿಯ ಭವ್ಯತೆ, ಸ್ವಾತಂತ್ರ್ಯ ಹೋರಾಟದ ಇತಿಹಾಸ, ಮಹಾತ್ಮ ಗಾಂಧೀಜಿಯ ಪ್ರಭಾವ ಹಾಗೂ ಕಾರ್ಯ, ಅಹಿಂಸಾ ಚಳುವಳಿಯ ಪ್ರಭಾವದಿಂದ ನಮಗೆ ಸ್ವಾತಂತ್ರ್ಯ ಬಂದದ್ದು ಈ ಸ್ವಾತಂತ್ರ್ಯವನ್ನು ನಾವು ರಕ್ಷಿಸಿಕೊಳ್ಳುವುದು ಹೇಗೆ, ನಮ್ಮ ಸರ್ಕಾರಗಳು, ನಮ್ಮ ಜನರ ಸುಖ, ಸೌಖ್ಯಗಳನ್ನು

ಹೇಗೆ ಸಾಧಿಸಬೇಕು, ಹಳ್ಳಿಗರ ಸಮಸ್ಯೆಯೇನು, ಸ್ವತಂತ್ರ ಭಾರತದ ಪ್ರಜೆಯಾಗಿ ನಮಗೆ ಬೇಕಾದ ಶಿಕ್ಷಣ ಯಾವುದು, ಸ್ವಾವಲಂಬನೆ, ಗೃಹ ಕೈಗಾರಿಕೆ, ನಮ್ಮ ಜನಗಳ ಮತ್ತು ಹಾಲಿನ ಪ್ರಶ್ನೆ ಸರ್ಕಾರಕ್ಕೆ ಪ್ರಜೆಗಳಿಗೂ ಇರಬೇಕಾದ ನಿಕಟ ಬಾಂಧವ್ಯ, ನಿರುದ್ಯೋಗ ನಿವಾರಣೆ ಇವುಗಳನ್ನೆಲ್ಲ ಕುರಿತು ತುಂಬ ಪರಿಣಾಮಕಾರಿ ಹಾಗೂ ಮನೋಜ್ಞವಾಗಿ, ನೆಲ, ಜಲ, ದನ, ವ್ಯವಸಾಯ ಮಣ್ಣು, ಪಯಿರು ಇವುಗಳ ನಿಕಟ ಸಂಪರ್ಕದಿಂದ ದೊರೆತ ನೈಜ ಅನುಭವದಿಂದ ಸುಲಭವಾದ ಶೈಲಿಯಲ್ಲಿ ಸುಮಾರು ಒಂದು ಗಂಟೆ ಮಾತನಾಡಿದರು. ಅದು ಜನತೆಯ ನಡುವೆ ವಾಸಿಸಿ, ಅವರ ಸಮಸ್ಯೆಗಳನ್ನೆಲ್ಲ ಅರಿತ ಮನುಷ್ಯ, ಅವರ ಸಮಸ್ಯೆಗಳನ್ನು ಅವರ ಮಾರ್ಗದಲ್ಲಿಯೇ ಪರಿಹರಿಸುವ ದಾರಿಯನ್ನು ಭಾರತದ ಸಮಸ್ಯೆಗಳ ಪರಿಹಾರಕ್ಕೆ ಭಾರತೀಯವಾದ ಮಾರ್ಗ ಸ್ವಾನುಭವದಿಂದ ಅರಿತು ಬೋಧಿಸುವ ಹಿತನುಡಿಯಾಗಿತ್ತು. ಆ ಭಾಷಣ ನನ್ನ ಮೇಲೆ ಎಷ್ಟು ಪರಿಣಾಮಕಾರಿಯಾಗಿತ್ತೆಂದರೆ ಆ ಭಾಷಣದ ಸೊಗಸನ್ನು ಇನ್ನೂ ಮರೆತಿಲ್ಲ.

ಅವರು ಅನೇಕ ಮೆಟ್ಟಲುಗಳನ್ನೇರಿ ಶಾಸಕ, ಮಂತ್ರಿ, ಮುಖ್ಯಮಂತ್ರಿ, ಕಾಂಗ್ರೆಸ್ ಅಧ್ಯಕ್ಷರಾಗಿ ಅಸಂಖ್ಯಾತ ಭಾಷಣಗಳನ್ನು ಮಾಡಿದ್ದಾರೆ. ಆದರೆ ಅವುಗಳಲ್ಲೆಲ್ಲ ಅವರ ಮೂವತ್ತು ವರ್ಷದ ಹಿಂದೆಲ್ಲ ಭಾಷಣದಧ್ಯೇಯ ಧೋರಣೆಗಳ ಭಾರತೀಯತ್ವ ಗ್ರಾಮಾಂತರ ಪ್ರದೇಶಗಳ ಸಮಸ್ಯೆಗಳ ಅರಿವು, ಬಡತನ ನಿವಾರಣೋಪಾಯ, ದುರ್ಬಲ ವರ್ಗಗಳ ಏಳಿಗೆಗಾಗಿ ಪರಿಶ್ರಮ, ಸರ್ಕಾರದ ಕಾರ್ಯಗಳಲ್ಲಿ ಸರ್ವರನ್ನು ಭಾಗಿಗಳಾಗಿ ಮಾಡುವ ಪ್ರಯತ್ನ ತನಗೆ ಸರಿಯೆಂದು ತೋರಿದ ಮಾರ್ಗಕ್ಕೆ ತನ್ನನ್ನು ಪೂರ್ಣವಾಗಿ ಅರ್ಪಿಸಿಕೊಳ್ಳಲು ಸ್ಪಷ್ಟವಾಗುತ್ತಿತ್ತು. ಗುರಿಯ ಸ್ಪಷ್ಟತೆ, ಅದರ ಸಿದ್ಧಿಗಾಗಿ ಮಾರ್ಗ ಇವೆರಡರನ್ನು ಅವರು ಸ್ಪಷ್ಟವಾಗಿ ರೂಪಿಸಿಕೊಂಡಿದ್ದರು. ಆದುದರಿಂದಲೇ ಅವರು ನಾಡಿನ ಪ್ರಗತಿ ಪಥದಲ್ಲಿ ಒಂದು ನೂತನ ಅಧ್ಯಾಯವನ್ನು ಸೃಷ್ಟಿಸಿ, ಕೀರ್ತಿಕಾಯರಾಗಿದ್ದಾರೆ.

# 7. ಮೈಸೂರು ಹಿಂದುಳಿದ ವರ್ಗಗಳ ಆಯೋಗದ ರಚನೆ

**ಶ್ರೀ ದೇವರಾಜ ಅರಸ್ (ಮುಖ್ಯಮಂತ್ರಿಗಳು)**

ಹಿಂದುಳಿದ ವರ್ಗಗಳ ಆಯೋಗದ ರಚನೆ ಕುರಿತು ತಿಳಿಸಲು ನಾನು ಬಯಸುತ್ತೇನೆ. ನೀವು ತಿಳಿದ ಹಾಗೆ, (ಆಯವ್ಯಯ ಪಟ್ಟಿ) ಮುಂಗಡ ಪತ್ರದ ಬಗ್ಗೆ ಚರ್ಚೆ ನಡೆಯುತ್ತಿದ್ದ ವೇಳೆಯಲ್ಲಿ, ಹಿಂದುಳಿದ ವರ್ಗಗಳ ಆಯೋಗ ರಚನೆಗೆ ಸಂಬಂಧಪಟ್ಟ ಸರ್ಕಾರದ ಬಿಗಿ ಕ್ರಮದ ಬಗ್ಗೆ ನಾನು ತಿಳಿಸಿದ್ದೆ. ಹಾಗೆಯೇ ಇತ್ತೀಚಿಗಷ್ಟೇ ಕೊನೆಗೊಂಡ ಮಂತ್ರಿ ಮಂಡಲ ಸಭೆಯಲ್ಲಿ ಆಯೋಗ ರಚನೆಯ ತೀರ್ಮಾನವನ್ನು ಕೈಗೊಂಡಿದ್ದೆವು. ಅದರಂತೆ 7 ಸದಸ್ಯರನ್ನೊಳಗೊಂಡ ಒಂದು ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಲು ಮತ್ತು ಅದರಲ್ಲೇ ಒಬ್ಬರನ್ನು ಛೇರ್ಮನ್ ಎಂಬುದಾಗಿ ನೇಮಿಸಿ, ಹಿಂದುಳಿದ ವರ್ಗಗಳ ಸಮಸ್ಯೆಯನ್ನು ನೋಡಿಕೊಳ್ಳುವಂತೆ ತೀರ್ಮಾನ ಕೈಗೊಳ್ಳಲಾಯಿತು. ನಾನು ಒಂದು ಹೇಳಿಕೆಯನ್ನು ಓದುತ್ತಿದ್ದೇನೆ.

1. ಸಾಮಾನ್ಯ ಆಡಳಿತ ವಿಭಾಗ ಮತ್ತು ಇತರೆ ಅನೇಕ ವಿಭಾಗಗಳಿಗೆ ನೀಡಬಹುದಾದ ಧನಸಹಾಯ ಕುರಿತಂತೆ ನಡೆದ ಚರ್ಚೆಗೆ ಪ್ರತ್ಯುತ್ತರವಾಗಿ, ಸರ್ಕಾರ ಹಿಂದುಳಿದ ವರ್ಗಗಳ ಆಯೋಗ ರಚನೆಯ ಅಂಶವನ್ನು ಆಸಕ್ತಿಯಿಂದ ಪರಿಶೀಲಿಸುತ್ತಿದೆಯೆಂದು ಸೂಚಿಸಿದ್ದೆ.

2. ರಾಷ್ಟ್ರದ ಉನ್ನತ ನ್ಯಾಯಾಲಯ ಹಾಗೂ ಹಲವು ರಾಜ್ಯದ ಉನ್ನತ ನ್ಯಾಯಾಲಯಗಳು, ಸಂವಿಧಾನದ ಆರ್ಟಿಕಲ್ 15(4) ಹಾಗೂ 16(4) ಉದ್ದೇಶದಿಂದ ಹಿಂದುಳಿದ ವರ್ಗಗಳನ್ನು ನಿರ್ಧರಿಸಲು ನಿರ್ದಿಷ್ಟವಾದ ಆಧಾರವನ್ನು (ಅಳತೆಗೋಲನ್ನು) ಅನ್ವಯಿಸಬೇಕೆಂದು ಅಂಶವನ್ನು ಗಮನಿಸಿದೆ. ನಿರ್ಧರಿಸಲ್ಪಟ್ಟ ಯಾವುದೇ ಆಧಾರವಾಗಲೀ ಹಿಂದುಳಿದ ವರ್ಗಗಳ ಯಾದಿಯಾಗಲೀ, ಕಾಲಕಾಲಕ್ಕೆ ಪುನರ್ ಪರಿಶೀಲಿಸಲಾಗಿಲ್ಲ.

3. ಸೂಕ್ತ ಆಧಾರವನ್ನು (ಅಳತೆಗೋಲನ್ನು) ನಿರ್ಣಯಿಸಲು ಮತ್ತು ಹಿಂದುಳಿದ ವರ್ಗಗಳ ಯಾದಿ ತಯಾರಿಸಲು ಸವಿವರವಾದ ಅಧ್ಯಯನ ಅವಶ್ಯಕವಾಗಿದೆ. ಆದ್ದರಿಂದ ಕೆಳಕಂಡವರನ್ನೊಳಗೊಂಡ ಒಂದು ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಲು ತೀರ್ಮಾನಿಸಿದೆ.

| | |
|---|---|
| ಶ್ರೀ ಎಲ್. ಜಿ. ಹಾವನೂರು | ಛೇರ್ಮನ್ |
| ಶ್ರೀ ವೈ. ರಾಮಚಂದ್ರ | ಸದಸ್ಯರು |
| ಶ್ರೀ ಕೆ. ಆರ್. ಎಸ್. ನಾಯ್ಡು | ಸದಸ್ಯರು |
| ಶ್ರೀ ಕೆ. ಎಂ. ನಾಗಣ್ಣ | ಸದಸ್ಯರು |
| ಶ್ರೀ ಎಸ್. ಆರ್. ಮಾಸನ ಶೆಟ್ಟಿ | ಸದಸ್ಯರು |
| ಶ್ರೀ ಧರ್ಮಸಿಂಗ್ | ಸದಸ್ಯರು |
| ಶ್ರೀ ಪಿ. ಟಿ ಹಬೀಬ್ | ಸದಸ್ಯರು |

**ಆಯೋಗದ ಪರೀಶಿಲನೆಗೆ ಒಳಪಡುವ ಅಂಶಗಳು (Terms of reference):**

1. ಹಿಂದುಳಿದ ಜಾತಿ ಮತ್ತು ಪಂಗಡವನ್ನು ಹೊರತುಪಡಿಸಿ, ರಾಜ್ಯದಲ್ಲಿನ ಯಾವುದೇ ವರ್ಗದ ಜನರನ್ನು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳೆಂದು ತೀರ್ಮಾನಿಸಲು ಅಳವಡಿಸಬಹುದಾದ ಆಧಾರ ಅಂಶಗಳನ್ನು ಸೂಚಿಸುವುದು.

2. ಅಂತಹ ವರ್ಗದ ಎಲ್ಲಾ ಜನರ ಜೀವನದ ಸ್ಥಿತಿ ಮತ್ತು ಕೆಲಸ ಮಾಡುವ ಪರಿಸ್ಥಿತಿಯನ್ನು ಪರಿಶೀಲಿಸುವುದು, ಪ್ರಮುಖವಾಗಿ ಅವರು ಎದುರಿಸುತ್ತಿರುವ ಕಷ್ಟಗಳು ಹಾಗೂ ಅವರ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಅವಶ್ಯಕತೆಗಳನ್ನು ಪೂರೈಸಲು ಹಾಗೂ ಅವರ ಅಭಿವೃದ್ಧಿಗಾಗಿ ಸರ್ಕಾರ ಅವಶ್ಯವಾಗಿ ಮಾಡಬೇಕಾದ ಏರ್ಪಾಡುಗಳನ್ನು ಶಿಫಾರಸು ಮಾಡುವುದು.

3. ರಾಜ್ಯದಲ್ಲಿ ಹಿಂದುಳಿದ ವರ್ಗಗಳೆಂದು ಪರಿಗಣಿಸಬಹುದಾದ ಎಲ್ಲಾ ವರ್ಗಗಳ ಯಾದಿಯನ್ನು (ಪಟ್ಟಿ) ತಯಾರಿಸುವುದು.

4. ರಾಜ್ಯ ಸರ್ಕಾರಗಳು ನಡೆಸುತ್ತಿರುವ ಶೈಕ್ಷಣಿಕ ಸಂಸ್ಥೆಗಳು ಅಥವಾ ಸರ್ಕಾರದಿಂದ ಹಣಕಾಸಿನ ನೆರವು ಪಡೆಯುತ್ತಿರುವ ಸಂಸ್ಥೆಗಳಲ್ಲಿ ಅಂತಹ ವರ್ಗಗಳಿಗೆ ಮೀಸಲಾತಿ ನೀಡಬೇಕೆಂದು ಸಲಹೆ ಮಾಡುವುದು.

5. ನೆರವಿನ ರೂಪದಲ್ಲಿ ಅಂತಹ ವರ್ಗಗಳಿಗೆ ನೀಡಬಹುದಾದ ಇನ್ನಾವುದೇ ರೀತಿಯ ರಿಯಾಯಿತಿ ಅಂದರೆ ವಿದ್ಯಾರ್ಥಿ ವೇತನ ಇತ್ಯಾದಿಗಳನ್ನು ಶಿಫಾರಸ್ಸು ಮಾಡುವುದು.

6. ಅಂತಹ ವರ್ಗಗಳು ಎಷ್ಟರ ಮಟ್ಟಿಗೆ ಸರ್ಕಾರಿ ಸೇವೆಗಳಲ್ಲಿ ಪ್ರತಿನಿಧಿಸಲ್ಪಟ್ಟಿವೆ ಎಂಬುದನ್ನು ನಿರ್ಧರಿಸುವುದು ಮತ್ತು ಎಷ್ಟು ಸ್ಥಾನಗಳನ್ನು ಅಂತಹ ಸೇವೆಗಳಲ್ಲಿ ಮೀಸಲಾತಿ ನೀಡಬಹುದೆಂದು ಶಿಫಾರಸ್ಸು ಮಾಡುವುದು.

7. ರಾಜ್ಯದಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಪ್ರಜೆಗಳಿಗೆ ನೀಡಬಹುದಾದ ಭದ್ರತೆಯ ಬಗ್ಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳುವಲ್ಲಿ ಸರ್ಕಾರಕ್ಕೆ ಸಲಹೆ ನೀಡುವುದು.

(ವಿಧಾನಸಭೆ ಕಲಾಪ, ದಿನಾಂಕ: 14-7-1972)

## 8. ಕರ್ನಾಟಕ ನಾಮಕರಣ

ಮಾನ್ಯ ಅಧ್ಯಕ್ಷರೇ: ವಿಶಾಲ ಮೈಸೂರಿನ ಮುಖ್ಯಮಂತ್ರಿಯಾದ ನಾನು, ರಾಜ್ಯದ ಹೆಸರನ್ನು "ಕರ್ನಾಟಕ" ಎಂದು ಮಾರ್ಪಡಿಸುವ ಸರ್ಕಾರದ ನಿರ್ಣಯವನ್ನು ಸಭೆಯ ಮುಂದೆ ಮಂಡಿಸುತ್ತೇನೆ. ಈ ದಿವಸ ನಮ್ಮ ದೇಶದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯದ ದಿವಸ. ವಿಶಾಲ ಮೈಸೂರು ಆದ ಮೇಲೆ, ಈ ರಾಜ್ಯದ ಹೆಸರು ಬದಲಾವಣೆ ಆಗಬೇಕೆಂಬ ವಿಚಾರ ನಮ್ಮ ಇಡೀ ರಾಜ್ಯದ ಜನತೆಯ ಮನಸ್ಸನ್ನು ಸೆಳೆದು, ಆ ಒಂದು ಮಹತ್ವದ ವಿಷಯ ಇದುವರೆಗೂ ಇತ್ಯರ್ಥವಾಗದೆ ಹಾಗೆಯೇ ವಿಚಾರದಲ್ಲಿಯೇ ಉಳಿದು ಬಂದಿದೆ. ಬಹು ಜನರ ಅಪೇಕ್ಷೆ ಬದಲಾವಣೆ ಆಗಬೇಕೆಂಬುದಾಗಿದ್ದರೂ ಅದಕ್ಕೆ ಒಂದು ಪ್ರಬಲ ವಿರೋಧವಿತ್ತು ಎಂದು ನನಗೆ ಗೊತ್ತು. ಆ ಕಾಲದಲ್ಲಿ ರಾಜ್ಯ ಎರಡು ಆಗಬೇಕು ಒಂದು ಆಡಳಿತ ದೃಷ್ಟಿಯಿಂದ, ಇನ್ನೊಂದು ಶಾಸ್ತ್ರೀಯ ದೃಷ್ಟಿಯಿಂದ, ಎಂದು ಹೇಳುವುದರಲ್ಲಿ ನಾನೂ ಒಬ್ಬನಾಗಿದ್ದೆ.

ಮೊದಲು ಕನ್ನಡ ಜನ ಎಲ್ಲಾ ಒಂದು ಕಡೆ ಸೇರೋಣ. ಅದು ಆಗಲಿ ಆನಂತರ ಹೆಸರಿನ ಬದಲಾವಣೆಯ ಬಗ್ಗೆ ನಿಧಾನವಾಗಿ ಯೋಚನೆ ಮಾಡಿ, ಇತರರು ಇದನ್ನು ಮನ ಒಲಿದು ಒಪ್ಪುವ ರೀತಿ ಮಾಡಿ ಬದಲಾಯಿಸೋಣ ಎಂದು ಅದನ್ನು ಹಾಗೇ ಇಟ್ಟುಕೊಂಡರು. ಜನತೆ ಒಂದು ಕಡೆ ಹೆಸರು ಬದಲಾವಣೆ ಆಗಬೇಕು ಎಂದು ಇಚ್ಛಿಪಡುತ್ತಾ ಬಂದಿದ್ದರೆ, ಶಾಸನ ಸಭೆಯ ಆಡಳಿತ ಪಕ್ಷದವರು ಇದನ್ನು ಮುಂದೂಡಿಕೊಂಡು ಬಂದಿದ್ದಾರೆ.

1969ನೇ ಜುಲೈ ಕಾಂಗ್ರೆಸ್ ಪಕ್ಷದ ಚರಿತ್ರೆ ಬದಲಾವಣೆ ಆಯಿತು. ಆ ಬದಲಾವಣೆಯ ಪರಿಣಾಮವಾಗಿ ನಾವು ಇಲ್ಲಿ ಈ ಸಭೆಯಲ್ಲಿದ್ದೇವೆ. 1970-71ರಲ್ಲಿ ನಡೆದಂಥ ಮಧ್ಯಂತರ ಚುನಾವಣೆ ಕಾಲದಲ್ಲಿ ಅಲ್ಲಲ್ಲಿ ಈ ಹೆಸರು ಬದಲಾವಣೆ ಬಗ್ಗೆ ಬಹಿರಂಗವಾಗಿ, ಅಂತರಂಗವಾಗಿ ವಾದ-ವಿವಾದಗಳು ನಡೆಯುತ್ತಿದ್ದವು. ಮಧ್ಯಂತರ ಚುನಾವಣೆ ಆದ ಮೇಲೆ 1972ರ ಚುನಾವಣೆಯ ಕಾಲಕ್ಕೆ ಈ ಹೆಸರಿನ ವಿಚಾರ ಬಹಳ ಪ್ರಬಲವಾಗಿ ಜನಸಾಮಾನ್ಯರ ಮನಸ್ಸನ್ನು ಸೆಳೆಯುವುದಕ್ಕೆ ಒಂದು ಕಾರಣವಾಯಿತು. ಈ ರಾಜಕೀಯ ತಿಕ್ಕಾಟದಲ್ಲಿ ನಾನು ಒಂದು ಕಡೆ ಮಾಡಿದಂಥ ಭಾಷಣದಿಂದ ಸ್ವಲ್ಪ ಕಿಡಿ ಹಾರಿತು. ಅದು ದೇಶದಾದ್ಯಂತ ವ್ಯಾಪ್ತಿಗೊಂಡಿತು.

ನನ್ನ ಅಭಿಪ್ರಾಯ ಏನೇ ಇರಲಿ. ಶ್ರೀ ಸಾಮಾನ್ಯರ ಅಭಿಪ್ರಾಯದಲ್ಲಿ ಅವರಿಗೆ ಈ ಬದಲಾವಣೆಯಿಂದ ಒಂದು ಆನಂದ, ಒಂದು ತೃಪ್ತಿ, ಒಂದು ಸಮಾಧಾನ, ಒಂದು ಭಾವೈಕ್ಯತೆ ಬರುವುದಾದರೆ ನಮಗೆ ಅದರಿಂದ ತೊಂದರೆ ಆಗುವುದು ಏನೂ ಇಲ್ಲ ಸಂತೋಷ ಎಂದು ಹೇಳುವುದರ ಜೊತೆಗೆ ನಾಳೆ ಚುನಾವಣೆ ಆದ ಮೇಲೆ ನಮ್ಮ ಪಕ್ಷ ಬಹುಮತ ಪಡೆದು ಬಂದು ಅಧಿಕಾರವನ್ನು ಪಡೆಯುವುದಾದರೆ ಸಭೆಯಲ್ಲಿ ಚರ್ಚೆ ಮಾಡಿ, ಶಾಸನ ಸಭೆಯಲ್ಲಿ ಚರ್ಚೆ ಮಾಡಿ, ಶಾಸನ ಸಭೆಯಲ್ಲಿ ನಿಮ್ಮ ಪ್ರತಿನಿಧಿಗಳು ಯಾರು ಇರುತ್ತಾರೆ ಅವರ ಅಭಿಪ್ರಾಯದಂತೆ ಹೋಗುವುದಕ್ಕೆ ನನ್ನ ಅಡ್ಡಿ ಇಲ್ಲ. ಹೆಸರು ಬದಲಾವಣೆ ಮಾಡೋಣ, ಬಹುಮತ ಅಭಿಪ್ರಾಯದಂತೆ ಹೋಗೋಣ ಎನ್ನುವ ಮಾತನ್ನು ಜನತೆಯ ಮುಂದೆ ನನ್ನ ಪಕ್ಷದ ಪರವಾಗಿ ಹೇಳಿದ್ದುಂಟು. ನಾನು, ನೀವು ಜನತೆಗೆ ಕೊಟ್ಟಂಥ ಮಾತನ್ನು ಉಳಿಸಿಕೊಳ್ಳುವುದಕೋಸ್ಕರ ಇವೊತ್ತು ತಮ್ಮ ಎಲ್ಲರ ಅಪ್ಪಣೆ ಪಡೆದು ಈ ಒಂದು 'ಠರಾವನ್ನು' ನಾನು ಈ ಸಭೆಯ ಮುಂದೆ ಮಂಡಿಸುತ್ತಿದ್ದೇನೆ.

ಮತ್ತೆ ಈ ಹೆಸರು ಯಾವುದು ಇರಬೇಕು ಎನ್ನುವ ಬಗ್ಗೆ ಕೂಡ ನಮ್ಮ ನಾಡಿನಲ್ಲಿ ಬಹಳ ಕಾಲ ಚರ್ಚೆ ನಡೆದಿದೆ. ಇಂತಹ ಬದಲಾವಣೆಯನ್ನು ಮಾಡುವುದು ಎಂದರೆ "ಕರ್ನಾಟಕ" ಎಂದು ಮಾಡಬಹುದು ಎನ್ನುವ ಒಂದು ನಿರ್ಣಯವನ್ನು ಇಲ್ಲಿ ಮಂಡಿಸಿದ್ದೇನೆ. ಕರ್ನಾಟಕ ಎನ್ನುವ ಹೆಸರನ್ನು ಹಿಂದೆ ರಾಜ್ಯಗುರುಗಳು ಉಪಯೋಗಿಸುತ್ತಿದ್ದರು. ಕರ್ನಾಟಕ ಸಿಂಹಾಸನಾಧೀಶ್ವರ ಎಂದು ಒಂದು ಕಾಲದಲ್ಲಿ ಮೈಸೂರು ರಾಜರು ಇಟ್ಟುಕೊಂಡಿದ್ದರು. ಹೊಯ್ಸಳರು ಕದಂಬರರೂ ಇಟ್ಟುಕೊಂಡಿದ್ದರು. ಹೀಗೆ ಒಂದಲ್ಲ ಒಂದು ರೀತಿಯಲ್ಲಿ ಈ ಹೆಸರು ಬರುತ್ತಲೇ ಇತ್ತು. ಸಾಹಿತಿಗಳು ಸಾಹಿತ್ಯದಲ್ಲಿ "ಕರ್ನಾಟಕ" ಎಂಬ ಹೆಸರನ್ನು ಇಡಬಹುದೆಂದು ಹೇಳಿದ್ದಾರೆ. ಆದರಂತೆ ಇಲ್ಲಿ ನಿರ್ಣಯವನ್ನು ಮಂಡಿಸಿದ್ದೇನೆ.

ಒಂದೂವರೆ ತಿಂಗಳ ಹಿಂದೆ ಈ ಠರಾವನ್ನು ಕ್ಯಾಬಿನೆಟ್ ಮುಂದೆ ಬಂದಾಗ ಬಹು ಜನತೆ ಹಾಗೂ ಶಾಸಕರು ಅಭಿಪ್ರಾಯಪಡುವಂತೆ ನಮ್ಮ ರಾಜ್ಯಕ್ಕೆ ಒಂದು ಶಾಶ್ವತವಾದ ಹೆಸರನ್ನು ಇಟ್ಟು ಈಗಿನ ಹೆಸರನ್ನು ಬದಲಾವಣೆ ಮಾಡಬಹುದು ಎಂಬ ತೀರ್ಮಾನಕ್ಕೆ ಬಂದೆವು. ನಾನು ತಮ್ಮ ಮುಂದೆ ಠರಾವಿನಲ್ಲಿ "ಕರ್ನಾಟಕ" ಎಂದು ಏನು ಹೆಸರನ್ನು ಇಟ್ಟಿದ್ದೇನೋ, ಅದೇ ಬಹುಮತ ಅಭಿಪ್ರಾಯ ಎಂದು ನನ್ನ ನಂಬಿಕೆ. ನಮ್ಮ ಪಕ್ಷದಲ್ಲಿ ಕೂಡ ಇದನ್ನು ಚರ್ಚೆಮಾಡಿ ಎಲ್ಲರೂ ಒಪ್ಪುವಂತೆ ಠರಾವನ್ನು ಇಲ್ಲಿ ತಂದಿದ್ದೇನೆ. ಒಂದು ಸಂತೋಷದ ವಿಚಾರ ಎಂದರೆ ನಮ್ಮ ಪಕ್ಷದಲ್ಲಿ ಕೆಲವು ವಿಚಾರದಲ್ಲಿ ಅಭಿಪ್ರಾಯ ಭೇದಗಳು ಇದ್ದರೂ ಇದರಲ್ಲಿಲ್ಲ. ಎಲ್ಲರೂ ಇಂತಹ ಒಂದು ಬದಲಾವಣೆಯನ್ನು ಮಾಡಲು ಹೃದಯ ತುಂಬಿ ಒಪ್ಪಿದ್ದಾರೆ.

ಆದರೆ ಪ್ರಜಾಪ್ರಭುತ್ವದ ತತ್ವದ ನೀತಿಗೆ ಕಟ್ಟುಬಿದ್ದು ಬಹುಮತದ ಅಭಿಪ್ರಾಯದಂತೆ ಯಾವ ರೀತಿಯಲ್ಲಿ ಇರಬೇಕೆಂದು ತೀರ್ಮಾನ ಮಾಡುತ್ತಾರೋ ಆ ತೀರ್ಮಾನವನ್ನು ತೆಗೆದುಕೊಂಡು ಅದಕ್ಕೆ ನಾವೆಲ್ಲರೂ ಸಂತೋಷದಿಂದ ಒಪ್ಪಿಕೊಂಡು ಹೋಗೋಣ ಎಂದು ಎಲ್ಲರೂ ಒಂದು ದೊಡ್ಡ ಮನೋಭಾವವನ್ನು ಪ್ರದರ್ಶನ ಮಾಡಿದ್ದಾರೆ. ಇದು ಒಂದು ಹರ್ಷದ ಸಂಗತಿ. ನಾವೆಲ್ಲ ಮೈಸೂರು ಇಲ್ಲವೇ ಕರ್ನಾಟಕ ದೇಶದಲ್ಲಿರಲಿ, ಇಡೀ ಭಾರತ ದೇಶದಲ್ಲಿ ಸೇವೆ ಮಾಡುತ್ತಿದ್ದರೂ ಕಾಲ ಸನ್ನಿವೇಶಕ್ಕೆ ತಕ್ಕ ಹಾಗೆ ಆರ್ಥಿಕವಾಗಿ, ಐಹಿಕ ವಿಚಾರಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದೇವೆ. ಇದು ಮನುಷ್ಯನಿಗೆ ತೃಪ್ತಿ ತರುವ ವಿಚಾರವಾಗಿದ್ದರೂ ಒಂದು ರೀತಿಯಲ್ಲಿ ಇದರಲ್ಲಿ ಹೊಂದಿಕೊಂಡು ಹೋಗುವ ಒಂದು ಭಾವನೆ ಬೆಳೆಯಬೇಕು.

ಇದು ಮನುಷ್ಯನಿಗೆ ಆನಂದವನ್ನು ತರುವ ಒಂದು ಸಂಗತಿಯಾಗಿದೆ. ಇಂತಹ ಒಂದು ಆನಂದವನ್ನು ಅನುಭವಿಸುತ್ತಿರುವ ಸದಸ್ಯರುಗಳನ್ನು ನೋಡಿ ನಾವೂ ಆ ಆನಂದದಲ್ಲಿ ಭಾಗಿಯಾಗಬೇಕು. ನಮ್ಮ ರಾಜ್ಯದ ಹೆಸರಿನ ಬದಲಾವಣೆಯಿಂದಾಗಿ ಅವರಿಗೆ ಆನಂದ ಹಾಗೂ ಸಂತೋಷ ಉಂಟಾಗುತ್ತದೆ. ಬಹುಜನರು ಎಂದರೆ ಈ ದೇಶದಲ್ಲಿರುವ ಬೇರೆ ಬೇರೆ ವರ್ಗದವರೂ ಸೇರುತ್ತಾರೆ. ಅನೇಕ ಸಾಹಿತಿಗಳು ಕರ್ನಾಟಕದಲ್ಲಿ ಇದ್ದಾರೆ. ಇಂತಹ ಸಾಹಿತಿಗಳಲ್ಲಿ ಹಿರಿಯರಿಂದ ಕಿರಿಯರವರೆಗೂ ಎಂದರೆ ಶ್ರೀಮಾನ್ ಬೇಂದ್ರೆಯವರು, ಹಾಗೂ ರಾಷ್ಟ್ರದ ದೊಡ್ಡ ಕವಿಗಳಾದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ಮತ್ತೆ ಇನ್ನಿತರ ಎಲ್ಲ ಸಾಹಿತಿಗಳೂ ಈಗಿರುವ ಹೆಸರನ್ನು ಬದಲಾವಣೆ ಮಾಡಿ ಕರ್ನಾಟಕ ಎಂದು ಮಾಡಬೇಕೆಂದು ಸತತವಾಗಿ ಒತ್ತಾಯ ಮಾಡುತ್ತಾ

ಬಂದಿದ್ದಾರೆ. ಬುದ್ಧಿ ಜೀವಿಗಳೂ ಕೂಡ ಹೆಸರು ಬದಲಾವಣೆಯಾಗಬೇಕೆಂದು ಹೇಳಿದ್ದಾರೆ. ವಿದ್ಯಾರ್ಥಿಗಳು, ಮಧ್ಯಮ ವರ್ಗದ ಜನರೂ, ಬದಲಾವಣೆ ಯಾಗಬೇಕೆಂದು ಹೇಳಿಕೊಂಡು ಬರುತ್ತಿದ್ದಾರೆ. ಅದೇ ರೀತಿ ಆಡಳಿತ ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿರತಕ್ಕ ಜನ ಅಭಿಪ್ರಾಯಪಟ್ಟಿದ್ದಾರೆ.

ಇದು ಅವರೆಲ್ಲರ ಹಿರಿದಾದ ಆಸೆ, ನಾವು ಜನತಾ ಪ್ರತಿನಿಧಿಗಳಾಗಿರುವುದರಿಂದ ಅವರ ಆಸೆಗೆ ಅಡ್ಡಿ ತರತಕ್ಕದ್ದು ಸೂಕ್ತವಲ್ಲ. ಇಷ್ಟೊಂದು ಜನಕ್ಕೆ ಸಂತೋಷವಾಗಬೇಕಾದರೆ ಅಂತಹ ಸಂತೋಷವಾಗಿರುವ ಜನತೆಯಲ್ಲಿ ನಾವೂ ಸಹ ಭಾಗಿಯಾಗೋಣ. ನಮ್ಮ ಕೈಲಾದ ಅಲ್ಪ ಸೇವೆಯನ್ನು ಸಲ್ಲಿಸೋಣ ಎನ್ನುವ ಒಂದು ಸಂತೋಷದಿಂದ ನಾನು ಇಲ್ಲಿ ಇಂತಹ ಒಂದು ನಿರ್ಣಯವನ್ನು ತರುವ ಕಾಲ ಬಂತಲ್ಲ ಎಂದು ಸಂತೋಷಿಸುತ್ತೇನೆ ಮತ್ತು ಇದರಲ್ಲಿ ನಮ್ಮ ಜವಾಬ್ದಾರಿಯೂ ಇದೆ ಎನ್ನುವ ಮಾತನ್ನು ಹೇಳಿ ಇಂತಹ ಒಂದು ನಿರ್ಣಯ ಇಲ್ಲಿ ಬಂದಿದೆ. ಇದನ್ನು ತಮ್ಮ ಅಪ್ಪಣೆ ಪಡೆದು ನಮ್ಮ ಈ ಸಭೆಯ ಮುಂದೆ ಇಟ್ಟಿದ್ದೇನೆ.

ಹಳೆಯ ಮೈಸೂರಿನ ಭಾಗದಿಂದ ಬಂದ ಜನರಿಗೆ ಮೈಸೂರು ರಾಜ್ಯದ ಹೆಸರಿನ ಬಗ್ಗೆ ಹಿಂದಿನಿಂದಲೂ ಚಾರಿತ್ರಿಕವಾಗಿ ಒಂದು ಅಭಿಮಾನ ಬೆಳೆದು ಬಂದಿದೆ. ಮೈಸೂರು ರಾಜ್ಯ ಎಂಬುದು ಇಡೀ ಇಂಡಿಯಾ ದೇಶದಲ್ಲಿ ಕೀರ್ತಿ ಪಡೆದಿರುವುದಲ್ಲದೆ, ಹೊರ ದೇಶಗಳಲ್ಲಿಯೂ ಸಹ ಕೀರ್ತಿಪಡೆದಿದೆ. ಮೈಸೂರು ಜನತೆಯ ವಿಚಾರದಲ್ಲಿ, ಮೈಸೂರು ಸಾಮಾನುಗಳ ವಿಚಾರದಲ್ಲಿ ತಿಳಿದಂತಹ ಜನರು ಹೊರ ದೇಶಗಳಲ್ಲಿ ಇದ್ದಾರೆ. ಅದಕೋಸ್ಕರ ಮೈಸೂರು ರಾಜ್ಯ ಹೆಚ್ಚಿನ ಗೌರವ ಹಾಗೂ ಕೀರ್ತಿ ಪಡೆದುಕೊಂಡಿದೆ. ಮೈಸೂರು ಎಂಬ ಹೆಸರಿಗೆ ಶಕ್ತಿ ಇದೆ.

ಈ ಹೆಸರು ಅಸ್ತಂಗತವಾದರೂ ಸಹ ಇನ್ನೊಂದು ಹೆಸರು ಉದಯವಾಗುತ್ತಿದೆ. ಹೊಸ ಹೆಸರಿನಲ್ಲಿ ಭಾವೈಕ್ಯತೆ ಇದೆ. ವಿಶ್ವಾಸವಿದೆ. ಹೆಚ್ಚಿನ ಜನರಿಗೆ ಸಂತೋಷ, ಆನಂದ ಉಂಟಾಗುತ್ತದೆ ಬದಲಾವಣೆಯಲ್ಲಿ ಹಳೆಯದು ಹೋಗಿ, ಹೊಸದು ಬರುವಾಗ ತೊಂದರೆ ಇಲ್ಲ. ಆನಂದ ಬರುತ್ತದೆ. ಆದ್ದರಿಂದ ಈ ಬಗ್ಗೆ ಹೆಚ್ಚು ಚಿಂತನೆ ಮಾಡಬೇಕಿಲ್ಲ.

ಹೊಸದನ್ನು ನೋಡಿ, ನಲಿದು ಸಂತೋಷ ಪಡುವ ಕಾಲ ಇದು. ಆದ್ದರಿಂದ ಈ ನಿರ್ಣಯಕ್ಕೆ ಮಾನ್ಯ ಸಭೆ ಒಪ್ಪಿಗೆ ಕೊಡುತ್ತದೆಂಬ ಪೂರ್ಣ ವಿಶ್ವಾಸ ನನಗೆ ಇದೆ. ಬಹುಮತದ ವಿಶ್ವಾಸವಲ್ಲ, ನಾವೆಲ್ಲರೂ ಸೇರಿ ಒಮ್ಮತದಿಂದ ಈ ಹೆಸರನ್ನು ಕರೆಯೋಣ. ಆ ರೀತಿ ನಾವು ಆನಂದದಿಂದ, ಸಂತೋಷದಿಂದ ಕರೆಯುವಾಗ ಕನ್ನಡ ಜನತೆಯ ಏಳಿಗೆಯಾಗಲಿ ಮತ್ತು ಈ ಶುಭ ಮುಹೂರ್ತದಲ್ಲಿ ಈ ಹೆಸರನ್ನು ಕರೆದು ರಾಜ್ಯ ಉನ್ನತವಾಗಿ ಬೆಳೆದು, ಹಿಂದಿನಿಂದ ಈ ರಾಜ್ಯ ಚರಿತ್ರೆಯಲ್ಲಿ ಏನು ಒಂದು ಒಳ್ಳೆಯ ಕೀರ್ತಿ, ಹೆಸರನ್ನು ಪಡೆದಿತ್ತೋ ಅದಕ್ಕಿಂತ ಹೆಚ್ಚಿನ ಕೀರ್ತಿಯನ್ನು ಪಡೆದು ಕನ್ನಡ ಜನಕೋಟಿ ಏನಿದ್ದಾರೆ ಅವರ ಬಾಳ್ವೆ ಹಸನಾಗಬೇಕು. ನಮ್ಮ ಸಂಸ್ಕೃತಿ, ಸಾಹಿತ್ಯ, ಕಲೆ, ಇವೆಲ್ಲವೂ ಬೆಳೆದು ಇಡೀ ಭಾರತದಲ್ಲಿಯೇ ಅಲ್ಲ ಇಡೀ ಪ್ರಪಂಚದಲ್ಲಿಯೇ ಹೆಚ್ಚಿನ ಕೀರ್ತಿ ಪಡೆಯುವಂತಾಗಬೇಕು. ಅಂತಹ ಕಾರ್ಯಕ್ಕೆ ಇವೊತ್ತು ನಾವು ಅಂಕುರಾರ್ಪಣ ಮಾಡೋಣ ಎನ್ನುವ ಮಾತನ್ನು ತಿಳಿಸಿ ಈ ಠರಾವನ್ನು ತಮ್ಮ ಒಪ್ಪಿಗೆಗಾಗಿ ಮಂಡಿಸುತ್ತಿದ್ದೇವೆ.

ನಾನು ಸರಕಾರದ ವತಿಯಿಂದ ಮಂಡಿಸಿದಂಥ ನಿರ್ಣಯಕ್ಕೆ ಎಲ್ಲ ಕಡೆಯಿಂದಲೂ, ಎಲ್ಲಾ ಪಕ್ಷಗಳಿಂದಲೂ ಸರ್ವತೋಮುಖವಾದ ಬೆಂಬಲ ಬಂದಿರತಕ್ಕದ್ದು ನನಗಂತೂ, ಬಹಳ

ಸಂತೋಷ ಉಂಟುಮಾಡಿದೆ. ನಾನು ಮೊದಲೇ ಈ ಸಭೆಯಲ್ಲಿ ಅರಿಕೆ ಮಾಡಿಕೊಂಡ ಹಾಗೆ ಏನಾದರೂ ಇಲ್ಲಿ ಸ್ವಲ್ಪ ಭಿನ್ನಾಭಿಪ್ರಾಯ ಇದ್ದರೂ, ಹೆಸರು ಬದಲಾವಣೆ ಆಗತಕ್ಕ ಕಾಲದಲ್ಲಿ ಮನಸ್ಸಿಗೆ ಸ್ವಲ್ಪ ನೋವು ಆದಂಥವರು ಕೂಡ ಅಂತಿಮವಾಗಿ ನಿರ್ಣಯಕ್ಕೆ ಬೆಂಬಲ ಕೊಟ್ಟಿದ್ದಾರೆ ಮತ್ತು ಬದಲಾವಣೆಯನ್ನು ಸ್ವಾಗತಿಸಿದ್ದಾರೆ, ನಾವು ಕರ್ನಾಟಕ ಎಂಬ ಹೆಸರು ಇಡಬೇಕು ಎಂಬುದನ್ನು ಕೂಡ ಒಪ್ಪಿದ್ದಾರೆ. ಆದಕಾರಣ ಮೂರು ದಿವಸಗಳಿಂದ ಮಾತನಾಡಿ ತಮ್ಮ ಹೃದಯದಿಂದ ಬಂದ ಬೆಂಬಲವನ್ನು ಕೊಟ್ಟಂಥ ಮಾನ್ಯ ಸದಸ್ಯರಿಗೂ, ಈ ಚರ್ಚೆಯಲ್ಲಿ ಭಾಗವಹಿಸದೆ ಮೌನದಿಂದ ಕುಳಿತು ಮಾತುಗಳನ್ನು ಕೇಳಿದವರಿಗೂ ಮತ್ತು ಮೌನದಿಂದಲೇ ಬೆಂಬಲಕೊಟ್ಟಂಥ ಎಲ್ಲಾ ಸದಸ್ಯರಿಗೂ ನನ್ನ ಧನ್ಯವಾದಗಳನ್ನು ಅರ್ಪಿಸುವುದಕ್ಕೆ ನಾನು ಅಪ್ಪಣೆ ಬೇಡುತ್ತೇನೆ. ಈ ಸಂದರ್ಭದಲ್ಲಿ ನಾನು ಈ ನಿರ್ಣಯವನ್ನು ಮಂಡಿಸುವುದಕ್ಕೆ ಮನಸ್ಸು ಮಾಡಿದ್ದಕ್ಕಾಗಿ ಅಥವಾ ತಂದಿದ್ದಕ್ಕಾಗಿ ನನ್ನ ಬಗ್ಗೆ ಕೆಲವರು ಒಳ್ಳೆಯ ಭಾಷಣವನ್ನು ಮಾಡಿದ್ದಾರೆ, ಮೆಚ್ಚಿಗೆಯನ್ನು ನನ್ನ ಮಿತ್ರರು, ಎದುರು ಪಕ್ಷದಲ್ಲಿರತಕ್ಕ ನಾಯಕರು ವ್ಯಕ್ತಪಡಿಸಿದ್ದಾರೆ.

ಇಂತಹ ಮಹತ್ವದ ಕಾರ್ಯಗಳು ಆಗುವಾಗ, ನಾವು ಒಂದೊಂದು ಕಾಲಕ್ಕೆ ನಿಮಿತ್ತ ಮಾತ್ರರಾಗುತ್ತೇವೆ ಅಷ್ಟೇ ಎಂದು ನಾನು ತಿಳಿದುಕೊಂಡಿದ್ದೇನೆ. ಇದು ನನಗೆ ವೈಯಕ್ತಿಕವಾಗಿ ಹೆಮ್ಮೆ ಎಂದಲ್ಲ, ನಾನು ಒಂದು ನಿಮಿತ್ತವಾಗಿದ್ದೇನೆ, ಅದಕ್ಕೆ ಸಂದರ್ಭ ಕಾರಣ. ಇದರಿಂದ ಬರತಕ್ಕ ಕೀರ್ತಿ ಮೆಚ್ಚಿಗೆ ಇಡೀ ಸದನಕ್ಕೆ ಸೇರಿದ್ದು. ಅದರಲ್ಲಿ ನಾನೂ ಒಬ್ಬ ಇದ್ದೇನೆ ಅಷ್ಟೇ. ವೈಯಕ್ತಿಕವಾಗಿ ಇದರಲ್ಲಿ ನನ್ನ ಪ್ರತಿಷ್ಠೆ ಇಲ್ಲ, ಜನಮನಕ್ಕೆ ಸ್ಪಂದಿಸಿದ್ದೇನೆ ನುಡಿದಂತೆ ನಡೆದಿದ್ದೇನೆ ಎಂಬ ನಂಬಿಕೆ. ತಿಳಿವಳಿಕೆ ಇಲ್ಲದೆ ಧೈರ್ಯ ಬರುವುದಿಲ್ಲ. ನಡೆದ ವಿಚಾರವನ್ನು ಸರಿಯಾಗಿ ತಿಳಿಯಬೇಕಾದರೆ ನಿರ್ವಿಕಾರ ಮನಸ್ಸು ಬೇಕು. ಈ ದೃಷ್ಟಿಯಿಂದ ನಡೆಯುವುದಕ್ಕೆ ಧೈರ್ಯ ಮಾಡಿದೆ ಅಷ್ಟೇ.

ಯುಗಯುಗಾಂತರಗಳಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ನೊಂದು, ಬೆಂದು ಹಿಂದುಳಿದಿರತಕ್ಕ, ಜನ-ಜನಾಂಗಗಳ ಉದ್ಧಾರ ಆಗಬೇಕು. ಆ ದಿಕ್ಕಿನಲ್ಲಿ ದಿಟ್ಟ ಹೆಜ್ಜೆ ಇಟ್ಟಿದ್ದೇವೆ. ಅದಕ್ಕೆ ಎಲ್ಲರ ತೆರೆದ ಹೃದಯದ ಸಹಕಾರಬೇಕು. ಈ ದಿಕ್ಕಿನಲ್ಲಿ ಅಂಜದೆ ನಾವು ನುಡಿದಂತೆ ನಡೆಯಬೇಕಾದುದ್ದು ನಮ್ಮ ಕರ್ತವ್ಯ. ಅದನ್ನು ಮಾಡುತ್ತೇವೆಂದು ಹೇಳಿ ತಮಗೆ ಆಶ್ವಾಸನೆ ಕೊಡಬಲ್ಲೆ. ಕೆಲವು ಭಾಗಗಳಲ್ಲಿ ಕೆಲವು ತೊಂದರೆಗಳಿವೆ. ನೀರಿನ ಅಭಾವ, ಮಳೆ ಇಲ್ಲದೆ ತೊಂದರೆ, ಯಾವ ಭಾಗದಲ್ಲಿ ತೊಂದರೆಯಾದರೂ ಅದನ್ನು ಪರಿಹರಿಸುವುದು ಸರ್ಕಾರದ ಕರ್ತವ್ಯ. ಎಲ್ಲಿಯವರೆಗೆ ನಮಗೆ ಸರ್ಕಾರ ನಡೆಸುವ ಜವಾಬ್ದಾರಿ ಇರುತ್ತದೆಯೋ ಅಲ್ಲಿಯವರೆಗೆ ಆ ಭಾಗ, ಈ ಭಾಗ, ನಮ್ಮವರು, ನಿಮ್ಮವರು ಎಂಬ ಪಕ್ಷಪಾತಕ್ಕೆ ಎಡೆಯಿಲ್ಲ. ಎಲ್ಲ ಭಾಗಗಳೂ ನಮ್ಮ ರಾಜ್ಯ, ನಮ್ಮ ಜನ ಎಂಬ ಒಂದೇ ಗುರಿ ಎನ್ನುವ ಆಶ್ವಾಸನೆಯನ್ನು ಕೂಡಾ ನಾನು ಕೊಡುತ್ತೇನೆ.

ಕೊನೆಯದಾಗಿ ಒಂದು ಮಾತು. ಈ ನಿರ್ಣಯವನ್ನು ನನ್ನ ಒಂದು ಸ್ಥಾನದಿಂದ ತಂದಿರತಕ್ಕದ್ದು ಸಂತೋಷ ಎಂಬ ಅಭಿಪ್ರಾಯ, ಇವರು ಅರಸು ಮನೆತನದವರು ಆಗಿದ್ದರೂ ಇದನ್ನು ತಂದಿದ್ದಾರೆಂದು ಹೇಳಿದ್ದಾರೆ. ಇದರ ಬಗ್ಗೆ ನಾನು ಏನೂ ಹೇಳಬೇಕಾದ ಅಗತ್ಯವಿಲ್ಲ. ನಾನು ಯಾವಾಗ ರಾಜಕೀಯದಲ್ಲಿ ಕಾಲಿಟ್ಟನೋ ಆವಾಗಿನಿಂದ ನಾನು ಅರಸು ಮನೆತನಕ್ಕೆ ಸೇರಿದವನು ಜನತೆಯೇ ಬೇರೆ ನಾನು ಬೇರೆ ಎಂದು ತಿಳಿದವನಲ್ಲ. ನಾನು ಹುಟ್ಟಿದ್ದು ಹಳ್ಳಿಯಲ್ಲಿ,

ಬೆಳೆದಿದ್ದು ಹಳ್ಳಿಯಲ್ಲಿ, ಇದ್ದದ್ದೂ ಹಳ್ಳಿಯಲ್ಲಿ, ದೇಶದ ವಿಚಾರ ಬಂದಾಗ ದೇಶಾಭಿಮಾನ ಇರುವಂಥವನು, ಯಾವ ಜಾತಿ, ಮತ ಭೇದವಿಲ್ಲದೆ, ಯಾರ್ಯಾರಿಗೆ ಸ್ವಾತಂತ್ರಾಭಿಮಾನ ಇದೆಯೋ, ಅವರೆಲ್ಲರೂ ದೇಶಕ್ಕಾಗಿ ಹೋರಾಟವನ್ನು ಮಾಡಿದ್ದಾರೆ. ಅಂತಹ ಹೋರಾಟ ಮಾಡಿದ ಲಕ್ಷೋಪಲಕ್ಷ ಜನರಲ್ಲಿ ನಾನೂ ಒಬ್ಬ. ನನಗೆ ತನ್ನ ಜಾತಿಯೆಂದು ಏನೂ ಹೆಚ್ಚಿನ ಪ್ರೀತಿಯೂ ಇಲ್ಲ ಅಥವಾ ಬೇರೆ ಜಾತಿಯವರಲ್ಲಿ ಕಡಿಮೆ ರೀತಿಯ ಪ್ರೀತಿಯೂ ಇಲ್ಲ. ನಾವೆಲ್ಲರೂ ಒಂದೇ ಜಾತಿಯವರು ಎಂಬ ಭಾವನೆ. ಈ ರಾಜತತ್ವಕ್ಕೆ ನಾನು ಎಂದೋ ವಿರೋಧಿ ಗಾಂಧೀಜಿಯವರು ಈ ರಾಜರುಗಳ ಬಗ್ಗೆ ಹೇಳಿದಾಗ ಅದು ಸರಿ ಎಂದು ನನಗೆ ತೋರಿ ಆಗಿನಿಂದಲೇ ವಿರೋಧವಾದ ಮನೋಭಾವ ಬೆಳೆದು ಬಂದಿತ್ತು. ಅವರ ವಿರುದ್ಧವಾಗಿ ಎದ್ದು ನಿಂತಿದ್ದೇನೆ.

ತಾವೆಲ್ಲರೂ ಈ ನಿರ್ಣಯವನ್ನು ವಿರೋಧ ಮಾಡದೆ ಸರ್ವಾನುಮತದ ಸ್ವಾಗತ ಮಾಡಿದ್ದಕ್ಕಾಗಿ ತಮಗೆಲ್ಲರಿಗೂ ನಾನು ಅಭಿನಂದಿಸುತ್ತೇನೆ. ಈ ಮಹತ್ತರವಾದ ನಿರ್ಣಯವನ್ನು ತಮ್ಮ ಅಧ್ಯಕ್ಷತೆಯಲ್ಲಿ ಚರ್ಚೆ ಮಾಡಿ ಅಂಗೀಕರಿಸುತ್ತಿದ್ದೇವೆ. ಇದು ಹೆಮ್ಮೆ ಮತ್ತು ಸಂತೋಷ ಪಡುವ ವಿಚಾರ. ತಮ್ಮ ಘನ ಅಧ್ಯಕ್ಷತೆಯಲ್ಲಿ ಈ ಒಂದು ಚರಿತ್ರಾರ್ಹವಾದ ಘಟನೆ ನಡೆದಿರುವುದು ನಮ್ಮ ಪುಣ್ಯ ಹಾಗೂ ಶುಭ ಸಂಕೇತವೆಂದು ತಿಳಿದು ನಾನು ತಮ್ಮನ್ನು ಮತ್ತೊಮ್ಮೆ ಅಭಿನಂದಿಸಿ ಈ ನಿರ್ಣಯಕ್ಕೆ ತಮ್ಮೆಲ್ಲರ ಬೆಂಬಲವನ್ನು ಕೊಡಬೇಕೆಂದು ಪ್ರಾರ್ಥನೆ ಮಾಡಿಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

(ಎಲ್ಲರೂ ಕರತಾಡನ ಮಾಡಿ ಸಂತೋಷ ವ್ಯಕ್ತಪಡಿಸಿದರು)

ಅಧ್ಯಕ್ಷರು: ನಾನು ಈ ನಿರ್ಣಯವನ್ನು ಸಭೆಯ ಒಪ್ಪಿಗೆಗೆ ಹಾಕುತ್ತೇನೆ, ಅದು ಹೀಗೆ:

ಭಾರತದ ಸಂವಿಧಾನದಲ್ಲಿ ನಮೂದಿಸಿದ ಈ ರಾಜ್ಯದ ಹೆಸರನ್ನು ಕರ್ನಾಟಕ ಎಂಬುದಾಗಿ ಬದಲಾಯಿಸಬೇಕೆಂದೂ ಈ ಸಭೆಯವರು ತಮ್ಮ ಖಚಿತ ಅಭಿಪ್ರಾಯವನ್ನು ಘೋಷಿಸಿ ಈ ಬಗ್ಗೆ ಅಗತ್ಯವಾದ ಸಂವಿಧಾನದ ತಿದ್ದುಪಡಿಗಳನ್ನು ರಾಜ್ಯ ಸರ್ಕಾರದವರು ಪಡೆದುಕೊಳ್ಳಲು ಕ್ರಮ ಕೈಗೊಳ್ಳಬೇಕೆಂದು ಈ ಸಭೆಯವರು ಶಿಫಾರಸ್ಸು ಮಾಡುತ್ತಾರೆ (ಎಲ್ಲಾ ಸದಸ್ಯರು ಜಯಕಾರ ಮಾಡಿದರು.)

ಅಧ್ಯಕ್ಷರು - ನಿರ್ಣಯದ ವಿರೋಧ ಯಾರು ಇಲ್ಲವಾದ್ದರಿಂದ ಈ ನಿರ್ಣಯವನ್ನು (ಸರ್ವಾನು ಮತದಿಂದ) ಅಂಗೀಕರಿಸಲ್ಪಟ್ಟಿತ್ತು. The Resolution was adopted.

ಶ್ರೀ ವಾಟಾಳ್ ನಾಗರಾಜ್ - ಈ ಶುಭ ಸಂತೋಷದ ಸಮಯದಲ್ಲಿ ಸಂತೋಷ ಸೂಚಕವಾಗಿ ನಾನು ಈ ಮಲ್ಲಿಗೆ ಹೂಗಳನ್ನು ಎಲ್ಲರ ಮೇಲೆಯೂ ಚೆಲ್ಲುತ್ತೇನೆ. (ವಾಟಾಳ್ ನಾಗರಾಜರು ಮತ್ತು ಎಸ್. ಬಂಗಾರಪ್ಪನವರು ಮಲ್ಲಿಗೆ ಹೂಗಳನ್ನು ಚೆಲ್ಲಿದರು)

ಶ್ರೀ ಡಿ. ದೇವರಾಜ್ ಅರಸ್ - ನಾನು ಈಗ ಕರ್ನಾಟಕಕ್ಕೆ ಎಂದು ಹೇಳುತ್ತೇನೆ. ತಾವೆಲ್ಲರೂ ಒಕ್ಕಂಠದಿಂದ ಜಯವಾಗಲಿ ಎಂದು ಹೇಳಬೇಕು.

ಶ್ರೀ ಡಿ. ದೇವರಾಜ್ ಅರಸ್ - ಕರ್ನಾಟಕಕ್ಕೆ.

ಎಲ್ಲ ಸದಸ್ಯರು - ಜಯವಾಗಲಿ.

(ಎಲ್ಲಾ ಸದ್ಸ್ಯರು ಕರ್ನಾಟಕಕ್ಕೆ ಜಯವಾಗಲಿ ಎಂದು ಘೋಷಣೆಯನ್ನು ಮತ್ತು ಕರತಾಡನವನ್ನು ಮಾಡಿದರು).

# 9. ಹೊಸ ಹೆಸರು ಹೊಸ ಹುಟ್ಟಿಗೆ ಕಾರಣವಾಗಲಿ

(ಮುಖ್ಯಮಂತ್ರಿ ಭಾಷಣ)

ನಮ್ಮ ಚೆಲುವ ನಾಡಿಗೆ ಕರ್ನಾಟಕ ಎಂದು ಹೆಸರಿಟ್ಟಿರುವ ಶುಭ ದಿನವಿದು. ಕಲೆ, ಸಂಸ್ಕೃತಿ, ಧರ್ಮಗಳ ಸಮನ್ವಯ ಸಾಮರಸ್ಯದ ಉಜ್ವಲ ಪರಂಪರೆಯ ಜೀವಂತ ಪ್ರತೀಕದಂತಿರುವ ಕರ್ನಾಟಕ ನಾಮಕರಣೋತ್ಸವದ ಹರ್ಷದ ದಿನ ನಾಡ ಬಾಂಧವರಿಗೆಲ್ಲ ನಮ್ಮ ಹಾರ್ದಿಕ ಶುಭಾಶಯಗಳು.

ಒಂದು ರಾಜ್ಯಕ್ಕೆ ಪ್ರಜೆಗಳೆಲ್ಲರೂ ಒಲುಮೆಯಿಂದ, ಒತ್ತಾಸೆಯಿಂದ, ಸರ್ವ ಸಮ್ಮತವಾದ ನಾಮಕರಣ ಮಾಡುವುದು ಇತಿಹಾಸದಲ್ಲಿ ಅಪರೂಪ. ಹೆಸರಲ್ಲೇನಿದೆ ಎನ್ನುವುದು ಜಾಣ್ಮೆಯ ಪ್ರಶ್ನೆ. ಒಂದು ರಾಜ್ಯದ ಹೆಸರು, ಧ್ವಜ, ಗೀತೆ ಇಡೀ ಜನಾಂಗದ ಪರಂಪರಾನುಗತ ಚೇತನದ ಸ್ವರೂಪಗಳು. ಜನರ ಆಶೋತ್ತರಗಳ ಪ್ರತೀಕವಾಗಿ ಮಹತ್ಸಾಧನೆಗಳನ್ನು ಸ್ಫುರಿಸಬಲ್ಲ ಪ್ರೇರಕ ಶಕ್ತಿಗಳು. ಆದ್ದರಿಂದಲೇ ಈ ದಿನಕ್ಕೆ ಮಹತ್ವ.

ಕರ್ನಾಟಕ ಏಕೀಕರಣದ ಹಂಬಲಕ್ಕೆ ಸ್ಫುಟವಾದ ರೂಪು ದೊರಕಿದ್ದು 1916ರಂದು ಧಾರವಾಡದಲ್ಲಿ ಕರ್ನಾಟಕ ಸಭೆ ಸ್ಥಾಪನೆಯಾದಾಗ, ಏಕೀಕರಣ ಸಮ್ಮೇಳನವೂ ಧಾರವಾಡದಲ್ಲಿ ಮೊಟ್ಟ ಮೊದಲಿಗೆ ನಡೆಯಿತು. 1920ರಲ್ಲಿ ನಾಗಪುರ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಭಾಷಾವಾರು ಪ್ರಾಂತ್ಯರಚನೆ ಸ್ಪಷ್ಟವಾದ ರೂಪುರೇಷೆ ಪಡೆಯಿತು. ಆದರೆ ಕನ್ನಡಿಗರ ಕನಸು ನನಸಾಗಲು ಮುವತ್ತಾರು ವರ್ಷಗಳೇ ಬೇಕಾಯಿತು. 1956ರ ನವೆಂಬರ್ ಒಂದು ಕನ್ನಡ ನಾಡು ಒಂದಾಯಿತು. ಆದರೆ ಈ ನಾಡಿನ ಹಿರಿಮೆ, ಸಂಸ್ಕೃತಿ ಮತ್ತು ಒಗ್ಗಟ್ಟಿನ ಸಂಕೇತವಾದ ಹೆಸರು ಇರದೇ ಇದ್ದುದು ಜನಮನದ ಅಂತರಾಳವನ್ನು ಕಲಕಿತು. ಮತ್ತೆ 17 ವರ್ಷಗಳ ನಂತರ ಕಾಲಮಾನ ಪರಿಸ್ಥಿತಿಗೆ ಅನುಗುಣವಾಗಿ ನಡೆದ ಪ್ರಾಮಾಣಿಕ ಪ್ರಯತ್ನದ ಫಲವಾಗಿ ಈಗ ಜನತೆಯ ಮಹತ್ವಾಕಾಂಕ್ಷೆ ಈಡೇರಿದೆ. ಹಲವಾರು ದಶಕಗಳ ಕಾಲ ನಾಡು-ನುಡಿಯ ಉತ್ಕಟ ಪ್ರೇಮಿಗಳ ತ್ಯಾಗ ಶ್ರಮದ ಸಾಕ್ಷಾತ್ಕಾರ ಈ ನಾಮಕರಣ. ಈ ಪ್ರಾತಃಸ್ಮರಣೀಯರಿಗೆಲ್ಲ ರಾಜ್ಯದ ಜನತೆಯ ಪರವಾಗಿ ಕೃತಜ್ಞತೆಗಳು. (ಮುಖ್ಯ ಮಂತ್ರಿಯಾಗಿ) ಕರ್ನಾಟಕ ಅಭ್ಯುದಯಕ್ಕಾಗಿ ಸೇವೆ ಸಲ್ಲಿಸಲು ಅವಕಾಶ ಮಾಡಿ ಕೊಟ್ಟಿರುವ ರಾಜ್ಯದ ಜನತೆಗೆ ನನ್ನ ಅಭಿನಂದನೆಗಳು.

ಕರ್ನಾಟಕ ನಾಮಕರಣೋತ್ಸವದ ಸಂಭ್ರಮ, ಸಡಗರಗಳ ಸಮಯದಲ್ಲಿ ಈ ನಾಡಿನಲ್ಲಿ ಆಳಿ ಅಳಿದ ಸಾಮ್ರಾಜ್ಯಗಳ ವೈಭವವನ್ನೂ ನಾಡಿನ ಸಂಸ್ಕೃತಿ, ಸಾಹಿತ್ಯ, ಕಲಾ ಸಂಪತ್ತುಗಳ ಪರಂಪರೆಯನ್ನೂ ನೆನೆಸಿ ಹಿಗ್ಗುವುದು ಸಹಜ. ರಾಮಾಯಣ, ಮಹಾಭಾರತಗಳ ಮಹಾನ್ ವ್ಯಕ್ತಿಗಳಿಂದ ಪುನೀತವಾದ ಈ ನಾಡಿನಲ್ಲಿ ಕದಂಬ, ಗಂಗ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ ಹಾಗೂ ವಿಜಯನಗರದ ಮಹಾ ಸಾಮ್ರಾಜ್ಯಗಳು ವಿರಾಜಿಸಿ ದೇಶದ ಇತಿಹಾಸದ ಪುಟಗಳನ್ನು ಜ್ವಲಂತಗೊಳಿಸಿವೆ. 5ನೇ ಶತಮಾನದಿಂದ 16ನೇ ಶತಮಾನದವರೆಗೆ ಈ ಚಕ್ರಾಧಿಪತ್ಯಗಳು ಬಿಟ್ಟು ಹೋಗಿರುವ ವಾಸ್ತುಶಿಲ್ಪ, ಭಿತ್ತಿಪತ್ರ ಹಾಗೂ ಸಾಹಿತ್ಯ ಸಂಪತ್ತಿನ ವೈಭವವನ್ನು ನೆನೆದು ಇಂದಿಗೂ ಪುಳಕಿತರಾಗುತ್ತೇವೆ. ಕರ್ನಾಟಕದ ಇತಿಹಾಸ ಮಹಾ ಸಾಮ್ರಾಟರ ವೈಭವದ ಕಥೆ ಮಾತ್ರವಲ್ಲ; ವಿವಿಧ ಸಂಸ್ಕೃತಿ, ಸಾಹಿತ್ಯ ಹಾಗೂ ಕಲಾ ಪರಂಪರೆಗಳ ಸಂಗಮ ಕ್ಷೇತ್ರ ಈ

ನಾಡು, ಹಿಂದೂ, ಜೈನ, ಬೌದ್ಧ, ಮುಸ್ಲಿಂ ಹಾಗೂ ಕ್ರೈಸ್ತಪಂಥಗಳು ಮಹಾಜ್ಞಾನಿಗಳು, ಸಂತ ಕವಿಗಳು, ಸುಧಾರಕರು, ಮಹೋನ್ನತ ಜೀವನದ ಆದರ್ಶಗಳು ಪ್ರತಿಪಾದಿಸಿ ಆಧ್ಯಾತ್ಮ ತತ್ವ ಹಾಗೂ ತರ್ಕ ಶಾಸ್ತ್ರಗಳ ಮೇರು ಕೃತಿಗಳನ್ನು ಇಲ್ಲಿ ರಚಿಸಿದರು. ಈ ಎಲ್ಲ ಪಂಥಗಳಿಗೂ ಆದರ ಆಶ್ರಯ ನೀಡಿದ ನಾಡು ನಮ್ಮದು.

ದೇಶದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಬಿರುಗಾಳಿ ಏಳುವ ಮೂರು ದಶಕಗಳ ಮೊದಲು ಆಂಗ್ಲರ ಆಳ್ವಿಕೆಯ ವಿರುದ್ಧ ಕ್ರಾಂತಿಯ ಕಿಡಿ ಸಿಡಿದೆದ್ದ ನಾಡು - ಕರ್ನಾಟಕ ಅಲ್ಲದೆ ರಾಷ್ಟ್ರವಿಮೋಚನಾ ಸಮರದಲ್ಲಿ ಮುಂದಾಳುಗಳಾಗಿ ಹೋರಾಡಿದ ವೀರಾಗ್ರಣಿಗಳಿಗೆ ಜನ್ಮ ನೀಡಿದ ನಾಡು ಕರ್ನಾಟಕ. ಆದರೆ ಇಂದು ಗತವೈಭವ ನೆನೆಸಿ ಕೈಕಟ್ಟಿ ಕೂಡುವ ಕಾಲವಿದಲ್ಲ. ನಮ್ಮ ಪೂರ್ವಿಕರ ಸಾಧನೆಗಳು ಇನ್ನೂ ಹೆಚ್ಚಿನ ಸಾಧನೆಗೆ ಸ್ಫೂರ್ತಿ, ಮಾರ್ಗದರ್ಶಕವಾಗಬೇಕು, ನಮ್ಮ ರಾಜ್ಯದ ಹೊಸ ಹೆಸರು, ಹೊಸ ಹುಟ್ಟಿಗೆ ಕಾರಣವಾಗಬೇಕು.

ಕರ್ನಾಟಕ ಪುಣ್ಯಭೂಮಿ ಭಾರತದ ಒಂದು ಅವಿಭಾಜ್ಯ ಅಂಗ. ನಮ್ಮ ರಾಜ್ಯದ ಏಳಿಗೆ ಇಡೀ ರಾಷ್ಟ್ರದ ಅಭ್ಯುದಯವನ್ನು ಅವಲಂಬಿಸಿದೆ ಎಂಬ ಭಾವನೆ ನಮ್ಮಲ್ಲಿ ಮಿಡಿಯಬೇಕು. ಪ್ರಾದೇಶಿಕ ಹಾಗೂ ಭಾಷಾವಾರು ಸಂಕುಚಿತ ಭಾವನೆ ಅಥವಾ ಅತಿಮೋಹ, ನಮ್ಮ ನಮ್ಮಲ್ಲೇ ಭೇದಭಾವಗಳನ್ನುಂಟು ಮಾಡಿ ಇಡೀ ದೇಶವನ್ನೇ ಹಿಂದಿನಂತೆ ದುರ್ಬಲಗೊಳಿಸಿತು.

ನಮ್ಮ ಒಂದೊಂದು ಹಿರಿಯಾಸೆ ಈಡೇರಿದಂತೆ, ನಮ್ಮ ಮನೋಭೂಮಿಕೆಯೂ ವಿಸ್ತಾರವಾಗಬೇಕು. ಐತಿಹಾಸಿಕ ಕಾರಣಗಳಿಂದ ನಮ್ಮ ರಾಜ್ಯ, ನಮ್ಮ ಭಾಷೆ ಅವನತಿಗೀಡಾಗಿದ್ದ ಕಾಲ ಬದಲಾಗಿ ಅವುಗಳ ಅಭಿವೃದ್ಧಿ ಹೊಣೆಯನ್ನು ನಾವೇ ವಹಿಸಿಕೊಂಡಿದ್ದೇವೆ. ಕನ್ನಡ ನುಡಿಯ ಬೆಳವಣಿಗೆಗಾಗಿ ನಾವು ಕೈಗೊಂಡಿರುವ ಕ್ರಮ ಹಲವಾರು. ಜನರಾಡುವ ಭಾಷೆ, ಆಡಳಿತ ಭಾಷೆಯಾದರೆ ಮಾತ್ರ ಸರಕಾರ ಮತ್ತು ಜನ ಸಂಪರ್ಕ ನೇರ, ನಿಕಟವಾಗಿ ಬೆಳೆಯಬಲ್ಲದು. ಸರಕಾರದ ಚಟುವಟಿಕೆಗಳಲ್ಲಿ ಜನರು ಅರ್ಥಪೂರ್ಣವಾಗಿ ಭಾಗಿಯಾಗಲು ಸಾಧ್ಯ. ಆ ಮೂಲಕವೇ ಪ್ರಜಾಪ್ರಭುತ್ವ ಬಲವಾಗಿ ಬೇರೂರಬಲ್ಲದು ಎಂಬ ಅರಿವಿನಿಂದ ಕನ್ನಡ ಜಿಲ್ಲಾ ಮಟ್ಟದಲ್ಲಿ ಆಡಳಿತ ಭಾಷೆಯಾಗಬೇಕೆಂದು ಸ್ವಾತಂತ್ರ್ಯೋತ್ಸವ ದಿನದಂದು ನಿರ್ಧರಿಸಿದ್ದೇವೆ. ಆಡಳಿತ ಮಟ್ಟದಲ್ಲಿ ಮಾತ್ರವಲ್ಲದೆ ಶಾಲೆ, ವಿಶ್ವವಿದ್ಯಾನಿಲಯ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಇತರ ಸಂಘ-ಸಂಸ್ಥೆಗಳ ಕನ್ನಡ ಪ್ರಸಾರ ಯೋಜನೆಗಳಿಗೆ ಧಾರಾಳವಾಗಿ ನೆರವು ನೀಡುತ್ತಿದ್ದೇವೆ. ಇಲ್ಲಿ ಅತಿ ಮುಖ್ಯವಾದ ಒಂದಂಶವನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ. ಈ ನಾಡಿನಲ್ಲಿ ಕನ್ನಡವನ್ನಾಡುವ ಬಾಂಧವರಿದ್ದಾರೆ, ಇದೇ ನೆಲದಲ್ಲಿ ಹುಟ್ಟಿ ಬೆಳೆದು ತಮ್ಮ ತಮ್ಮ ಮಾತೃ ಭಾಷೆಯ ಬೆಳವಣಿಗೆಗೆ ಶ್ರಮಿಸಿ ಸಾಹಿತ್ಯ, ಸಂಪತ್ತಿಗೆ ಕಾಣಿಕೆ ಸಲ್ಲಿಸುತ್ತಿದ್ದಾರೆ. ಕನ್ನಡಿಗರ ವೈಶಾಲ್ಯತೆಗೆ, ನಾಡಿನ ವೈವಿಧ್ಯತೆಗೆ, ಪೂರ್ಣ ಪರಂಪರೆಯ ಬಹುಮುಖ ಅಭಿವ್ಯಕ್ತಿಗೆ ಸಾಕ್ಷಿಯಾಗಿದ್ದಾರೆ. ಕರ್ನಾಟಕ ಭೂಮಿಯಲ್ಲಿ ಬೇರೂರಿರುವ ಅಲ್ಪ ಸಂಖ್ಯಾತರ ಭಾಷೆಗಳು ವಿಕಾಸವಾಗಿರುವಂತಹ ಈ ವಾತಾವರಣವನ್ನು ಉಳಿಸುವುದಷ್ಟೇ ಅಲ್ಲ, ಬೆಳೆಸುವುದೂ ಕರ್ತವ್ಯ.

ನಾನಿಂದು ಮಹತ್ವಪೂರ್ಣ ಪರ್ವಕಾಲದಲ್ಲಿದ್ದೇವೆ. ಕಳೆದ ಮೂರು ವರ್ಷಗಳಲ್ಲಿ ಕಂಡು ಬಂದ ಜನ ಜಾಗೃತಿ ಪ್ರಚಂಡ ಶಕ್ತಿಯನ್ನು ಕ್ರಿಯಾತ್ಮಕ ಕಾರ್ಯಕ್ರಮಗಳ ಚೌಕಟ್ಟಿನಲ್ಲಿ ಬಳಸಿಕೊಳ್ಳಲು ಶ್ರಮಿಸುತ್ತಿದ್ದೇವೆ. ಸಮಾಜದಲ್ಲಿ ಬಹು ಸಂಖ್ಯಾತರಾದ ದುರ್ಬಲ ವರ್ಗದವರಿಗೆ ಆರ್ಥಿಕ,

ಸಾಮಾಜಿಕ ನ್ಯಾಯ ಒದಗಿಸುವ ಬೃಹತ್ ಪ್ರಯತ್ನ ಕೈಗೊಂಡಿದ್ದೇವೆ. ಆದರೆ ಆ ವರ್ಗದ ರಕ್ಷಣೆ, ಏಳಿಗೆ ಸಾಧನೆಯ ದಾರಿಯಲ್ಲಿ ನಾವಿನ್ನೂ ಬಹುದೂರ ಹೋಗಬೇಕಾಗಿದೆ. ಸಾಮಾಜಿಕ ಕ್ಷೇತ್ರದಲ್ಲಿನ ಆಳವಾಗಿ ಬೆಳೆದುನಿಂತು ಅರ್ಥಹೀನ, ಸಂಪ್ರದಾಯಗಳ ಅಂಧಾನುಕರಣೆ, ಹೊಸ ವಿಚಾರಧಾರೆಗಳ ಬಗ್ಗೆ ಅಜ್ಞಾನ, ಆರ್ಥಿಕ ಕ್ಷೇತ್ರದಲ್ಲಿ ಪಟ್ಟಭದ್ರ ಹಿತಾಸಕ್ತಿಗಳ ಬಿಗಿ ಮುಷ್ಟಿ ಲಾಭ ಬಡುಕರ ದುರಾಸೆಗಳು ಸಮತಾ ಸಮಾಜ ಸ್ಥಾಪನೆಗೆ ಅಡ್ಡಿ ಆತಂಕಗಳ ಸವಾಲನ್ನೆಸೆದಿವೆ.

1972ರ ಮಾರ್ಚ್ 30ರಂದು ಪ್ರಮಾಣವಚನ ಸ್ವೀಕರಿಸಿದಾಗ ನಾನು "ಲಕ್ಷಾಂತರ ಜನ ಹಲವಾರು ವರ್ಷಗಳಿಂದ ದಾರುಣ ಸ್ಥಿತಿಯಲ್ಲೇ ಮುಂದುವರಿಯುತ್ತಿದ್ದಾರೆ; ಅವರೀಗ ಉತ್ತಮ ಭವಿಷ್ಯ ನಿರೀಕ್ಷಿಸುತ್ತಿದ್ದಾರೆ" ಎಂದಿದ್ದೆ. ಆ ನಿರೀಕ್ಷೆಯೇ ನಮ್ಮೆಲ್ಲ ಕಾರ್ಯಕ್ರಮಗಳ ಚೇತನಶಕ್ತಿ ಭೂಸುಧಾರಣೆ, ನಿವೇಶನಗಳ ಹಂಚಿಕೆ, ಮನೆ ಕಟ್ಟಿ ಕೊಡುವುದು, ಶೋಷಿತ ವರ್ಗದವರ ಏಳಿಗೆಗಾಗಿ ಹಿಂದುಳಿದ ವರ್ಗಗಳ ಮಂಡಲಿ ರಚನೆ. ಮಾನವೀಯತೆಯನ್ನೇ ಮಲೀನಗೊಳಿಸುವ ಮಲ ಹೊರುವ ಪದ್ಧತಿಯ ರದ್ದು ಮುಂತಾದ ಕ್ರಮ ಕೈಗೊಂಡಿದ್ದೇವೆ. ನನ್ನ ದೃಷ್ಟಿಯಲ್ಲಿ ಎಲ್ಲ ರೀತಿಯ ಆರ್ಥಿಕ ಏಳಿಗೆಗೂ ಅಡಿಗಲ್ಲಾದ ವಿಷಯಗಳೆಂದರೆ ವ್ಯವಸಾಯ ಮತ್ತು ವಿದ್ಯುತ್‌ಚ್ಛಕ್ತಿ. ಕರ್ನಾಟಕ ನೆಲವನ್ನು ತಣಿಸುವ ಎಲ್ಲ ನದಿಗಳ ಪ್ರತಿಯೊಂದು ಹನಿ ನೀರನ್ನೂ ಬಳಸಿಕೊಳ್ಳುವ ಯೋಜನೆಗಳನ್ನು ಕಟ್ಟಬೇಕೆಂದು ನನ್ನ ಉತ್ಕಟ ಆಕಾಂಕ್ಷೆ. ಈಗ ಕಟ್ಟುತ್ತಿರುವ ಕಾವೇರಿ ನದೀ ಪಾತ್ರದ ಜಲಾಶಯಗಳನ್ನು ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಲು ಕೇಂದ್ರ ಸರಕಾರ ಹಾಗೂ ಯೋಜನಾ ಆಯೋಗ ಒಪ್ಪಿರುವುದು ಅತಿ ಸಂತೋಷದ ಸಂಗತಿ. ನಮ್ಮ ಸರಕಾರ ಅಧಿಕಾರಕ್ಕೆ ಬಂದ ಅಲ್ಪಾವಧಿಯಲ್ಲಿ ಇದು ಒಂದು ಮಹತ್ ಸಾಧನೆ. ಕರ್ನಾಟಕ ನಾಮಕರಣೋತ್ಸವದ ಮಂಗಳ ಸಮಯದಲ್ಲಿ ಮಹತ್ವದ ಕೊಡುಗೆ - ಕಾಳಿನದಿ ಯೋಜನೆ.

ಸಮೃದ್ಧ ಕರ್ನಾಟಕ ಸಾಧನೆಯಲ್ಲಿ ಮೊದಲ ಹೆಜ್ಜೆಗಳಿವು. ಅನಾವೃಷ್ಟಿ, ಬರಗಾಲ, ಆಹಾರ, ಅಭಾವ, ಬೆಲೆ ಏರಿಕೆ ಹೀಗೆ ಕಷ್ಟಗಳ ಪರಂಪರೆಯನ್ನು ಕಂಡಕಾಲ ಮುಗಿದು, ನಮ್ಮ ಪ್ರಯತ್ನಕ್ಕೆ ಪ್ರಕೃತಿಯೇ ಒಲಿದಂತೆ ಧಾರಾಳ ಮಳೆಯಾಗಿ, ಸಮೃದ್ಧ ಬೆಳೆ ಬರಲಿದ್ದು ಬೆಲೆ ಕಡಿಮೆಯಾಗುತ್ತಿರುವ ಒಳ್ಳೆಯ ಕಾಲ ಬಂದಿದೆ. ಇಂತಹ ಶುಭ ಸಂದರ್ಭದಲ್ಲಿ ರಾಜ್ಯದ ಹೆಸರು ಕರ್ನಾಟಕ ವೆಂದು ಬದಲಾಗುತ್ತಿರುವುದು ಒಂದು ಅಪೂರ್ವ ಸುಯೋಗ ನಾನಾದರೂ ಇದು ಕರ್ನಾಟಕದ ಉಜ್ವಲ ಭವಿಷ್ಯದ ಶುಭ ಲಕ್ಷಣವೆಂದು ನಂಬಿದ್ದೇನೆ.

ಕರ್ನಾಟಕ ಏಕೀಕರಣ ಹಾಗೂ ನಾಮಕರಣ ಸಾಧನೆಯ ದೀರ್ಘ ಯತ್ನದಲ್ಲಿ ಕಂಡು ಬಂದ ಐಕ್ಯ, ಹುರುಪು, ದುಡಿಮೆ ಹಾಗೂ ತ್ಯಾಗ ಮನೋಭಾವ ಮತ್ತೆ ಜನಪದದಲ್ಲಿ ಚಿಮ್ಮಲಿ; ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳನ್ನು ತೊಡೆದುಹಾಕುವ ಮಹಾಕಾರ್ಯದಲ್ಲಿ ಜನರೆಲ್ಲ ಕೈಗೂಡಿಸಲಿ. ಜನ್ಮಭೂಮಿ ಭಾರತದ ಎಲ್ಲ ರಾಜ್ಯಗಳ ಶ್ರೇಣಿಯಲ್ಲಿ ಕರ್ನಾಟಕ ಎಲ್ಲರ ಕಣ್ಮಣಿಯಾಗಿ ರಾರಾಜಿಸಲಿ.

# 10. ಆತ್ಮಗೌರವ ಉಕ್ಕಿಸುವ ಸಾಹಿತ್ಯ ನಿರ್ಮಾಣವಾಗಲಿ

ಮುಖ್ಯ ಮಂತ್ರಿಗಳು :- ಅಪೂರ್ವ ಉತ್ಸಾಹ, ಸಂಭ್ರಮ, ಸಡಗರಗಳಿಂದ ನಡೆಯಲಿರುವ ಈ ನಲವತ್ತೆಂಟನೇ ಕನ್ನಡ ಸಾಹಿತ್ಯ, ಸಮ್ಮೇಳವನ್ನು ಉದ್ಘಾಟಿಸಲು ರಾಜಕಾರಣಿಯಾದ ನನ್ನನ್ನು ಕರೆದುದು ನಿಮ್ಮೆಲ್ಲರ ಅಭಿಮಾನವೆಂದು ಭಾವಿಸಿದ್ದೇನೆ. ಕನ್ನಡ ನಾಡಿನ ಮಹಾಜನತೆಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಬಹು ದಿನಗಳ ಆಕಾಂಕ್ಷೆಯಾಗಿದ್ದ ಕರ್ನಾಟಕ ನಾಮಕರಣ ನನ್ನ ಕಾಲದಲ್ಲೇ ಆದುದೂ ಈ ಆಹ್ವಾನಕ್ಕೆ ಒಂದು ಕಾರಣವಿರಬಹುದು. ರಾಜಕೀಯ ಹಾಗೂ ಆಡಳಿತದ ನಿತ್ಯ ವ್ಯವಹಾರದಲ್ಲಿರುವ ನನ್ನನ್ನು ಕೆಲವು ಸಮಯವಾದರೂ ಸಾಹಿತಿಗಳ ಸಾಮೀಪ್ಯದಲ್ಲಿ, ಸಾಹಿತ್ಯದ ವಾತಾವರಣದಲ್ಲಿ ಇರುವಂತೆ ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ವಂದಿಸುತ್ತೇನೆ.

'ಕರ್ನಾಟಕ' ನಾಮಕರಣ ಕೋಟಿ ಕೋಟಿ ಕನ್ನಡಿಗರ ಹೆಬ್ಬಯಕೆಯ ಈಡೇರಿಕೆ. ಅದಕ್ಕೆ ನಾನು ನಿಮಿತ್ತ ಮಾತ್ರ. ಕನ್ನಡ ಜನತೆ ನನ್ನ ಬಗೆಗೆ ತೋರಿರುವ ಅಭಿಮಾನಕ್ಕೆ ಕೃತಜ್ಞ. ಈ ಕೃತಜ್ಞತೆಯನ್ನು ವ್ಯಕ್ತಪಡಿಸಲು ಕರ್ನಾಟಕದ ಶಿಲ್ಪಿಗಳೆನಿಸಿರುವ ಸಾಹಿತಿಗಳ ಈ ಸಮ್ಮೇಳನ ಸೂಕ್ತ ಸಂದರ್ಭವೆಂದು ಭಾವಿಸಿದ್ದೇನೆ.

ಈ ಸಾಹಿತ್ಯ ಸಮ್ಮೇಳನದ ವಿಶೇಷ ಎಂದರೆ ಮಂಡ್ಯದಲ್ಲಿ ಮೊಟ್ಟಮೊದಲ ಬಾರಿಗೆ ನಡೆಯುತ್ತಿರುವುದು. ಮಂಡ್ಯ ಜಿಲ್ಲೆ ಕರ್ನಾಟಕದ ಕಾಳಿನ ಕಣಜ. ಒಂದು ಕಾಲಕ್ಕೆ ಬರಡಾಗಿದ್ದ ಕ್ಷೇತ್ರ ಕಾವೇರಿಯ ಕರುಣೆಯಿಂದ ಸಂಪತ್ಸಮೃದ್ಧ. ಅಂತೆಯೇ ಇಂದು ಸಾಹಿತ್ಯ ಕಾವೇರಿ ಹರಿದು ಮಂಡ್ಯ ಜಿಲ್ಲೆ ಸಾಹಿತ್ಯದ ಕಣಜವೂ ಆಗಲೆಂದು ಆಶಿಸುತ್ತೇನೆ.

ಈ ಸಾಹಿತ್ಯ ಸಮ್ಮೇಳನ ಇನ್ನೊಂದು ರೀತಿಯಲ್ಲಿ ಚಿರಸ್ಮರಣೀಯ. ಕನ್ನಡ ಸಾಹಿತ್ಯ ಸಮ್ಮೇಳನಗಳ ಇತಿಹಾಸದಲ್ಲೇ ಮೊದಲ ಬಾರಿಗೆ ಮಹಿಳೆಯೊಬ್ಬರು ಅಧ್ಯಕ್ಷರಾಗಿದ್ದಾರೆ. ಈ ಆಯ್ಕೆ ಕನ್ನಡ ತಾಯಿಗೆ ಸಂದ ಗೌರವ. ಕನ್ನಡ ಸಾಹಿತ್ಯದ ಸಾಹಿತ್ಯದ ಶ್ರೇಯಸ್ಸಿಗೆ ಮಂಗಳ ಸೂಚನೆ. ಈ ಗೌರವ ಪಡೆದಿರುವ ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರು ಕನ್ನಡಿಗರೆಲ್ಲರಿಗೂ ಚಿರಪರಿಚಯ. ಕನ್ನಡ ನುಡಿಗೆ, ನಾಡಿಗೆ, ಸಂಸ್ಕೃತಿಗೆ ಅವರು ಸಲ್ಲಿಸಿರುವ ಸೇವೆ ಅಪಾರ. ಕರ್ನಾಟಕ ಏಕೀಕರಣಕ್ಕಾಗಿ ಅವರು ನಡೆಸಿರುವ ಹೋರಾಟ, ತ್ಯಾಗಗಳು ಸ್ಮರಣೀಯ. ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಮತ್ತು ರಾಜಕೀಯ ಕ್ಷೇತ್ರಗಳಲ್ಲೂ ಅವರು ಶ್ರಮಿಸಿದ್ದಾರೆ. ಕನ್ನಡ ನಾಡಿನ ಮಹಿಳೆಯರ ಹಿರಿಮೆಯ ಪ್ರತೀಕವಾಗಿರುವ ಅವರು ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿರುವುದು ಹರ್ಷದ ಸಂಗತಿ. ಅವರು ಕರ್ನಾಟಕದ ಹೊರಗಿದ್ದರೂ ಅವರ ಹೃದಯ ಕರ್ನಾಟಕದಲ್ಲಿದೆ. ಕನ್ನಡವೇ ಅವರ ನಿತ್ಯಮಂತ್ರ. ನೆರೆ ನಾಡಿನಲ್ಲಿ ನೆಲೆಸಿ, ಮರಾಠಿಯಲ್ಲೂ ಸಾಹಿತಿಗಳಾಗಿ, ಸ್ವಂತ ನಾಡು, ನುಡಿಯ ಅಭಿಮಾನ, ರಾಷ್ಟ್ರೀಯ ಮನೋಭಾವಕ್ಕೆ ಅಡ್ಡಿಯಲ್ಲ ಎಂಬ ಮನೋವೈಶಾಲ್ಯವನ್ನು ಪ್ರದರ್ಶಿಸಿದ್ದಾರೆ. ಅಂತಹ ಹಿರಿಯ ಸಾಧನೆಗೆ ಇದು ಯೋಗ್ಯ ಮನ್ನಣೆ. 'ಸಿದ್ಧರಾಮ ಪುರಾಣ' ದಂತಹ ಮೇರುಕೃತಿಯನ್ನು ಕನ್ನಡ ಸಾರಸ್ವತ ಲೋಕಕ್ಕೆ ಕಾಣಿಕೆಯಾಗಿ ನೀಡಿರುವ ಶ್ರೀಮತಿ ಲಿಗಾಡೆಯವರ ಹಿರಿತನದಲ್ಲಿ ನಡೆಯುತ್ತಿರುವ ಈ ಸಮ್ಮೇಳನ ಸಾರ್ಥಕ.

ಸಾಹಿತ್ಯದ ನೆಲೆಬೆಲೆಗಳನ್ನು ಅರಿತಿರುವ ಸಾಧಕರೇ ತುಂಬಿರುವ ಈ ಮಹಾಸಭೆಯಲ್ಲಿ ಸಾಹಿತ್ಯವನ್ನು ಕುರಿತು ಹೆಚ್ಚು ಹೇಳಬೇಕಾದುದ್ದಿಲ್ಲ. ಸಾಹಿತ್ಯ ಸಹೃದಯನಾದ ನಾನು ನಾಲ್ಕು ಮಾತುಗಳನ್ನಾಡುವುದು ಕರ್ತವ್ಯ. ಆದರೆ ನಾನು ಕನ್ನಡ ಸಾಹಿತ್ಯದ ಪರಂಪರೆ, ಭವ್ಯತೆ ಬಗ್ಗೆ ಹೇಳಬಯಸುವುದಿಲ್ಲ. ಆದರೆ ಅದು ನಮ್ಮ ಬದುಕಿನಲ್ಲಿ ವಹಿಸಿರುವ ಮತ್ತು ವಹಿಸಬೇಕಾದ ಪಾತ್ರವನ್ನು ಕುರಿತು ಪ್ರಸ್ತಾಪಿಸುತ್ತೇನೆ.

ಎಲ್ಲರಿಗೂ ತಿಳಿದಂತೆ ಕನ್ನಡ ಸಾಹಿತ್ಯ ಸೃಷ್ಟಿ ಆದುದು ಧಾರ್ಮಿಕ ಪ್ರೇರಣೆಯಿಂದ. ಮಾನವನಲ್ಲಿ ದೈವಭಕ್ತಿ, ಧರ್ಮಶ್ರದ್ಧೆಯನ್ನು ಬೆಳೆಸುವುದು ಸಾಹಿತ್ಯದ ಗುರಿಯಾಗಿತ್ತು. ಅಂದಿನ ಸಾಹಿತ್ಯ ಬಹುಮಟ್ಟಿಗೆ ರಾಜಮನ್ನಣೆ, ಪಂಡಿತ ಮನ್ನಣೆಗಳನ್ನೇ ಆಶ್ರಯವಾಗಿಟ್ಟುಕೊಂಡಿತ್ತು. ಆದರೆ ಕಾಲ ಬದಲಾಯಿಸುವಂತೆ ಸಾಹಿತ್ಯದ ಸ್ವರೂಪವೂ ಬದಲಾಯಿಸುತ್ತಾ ಬಂದಿದೆ.

12ನೇ ಶತಮಾನದಲ್ಲಿ ಮಹತ್ತರ ಬದಲಾವಣೆ ಕಾಣುತ್ತೇವೆ. ಆಗ ಸೃಷ್ಟಿಯಾದ ಸಾಹಿತ್ಯ ಅಭೂತಪೂರ್ವವಾದುದು. ಸಾಹಿತ್ಯವನ್ನು ಸಂಪ್ರದಾಯದ ಶೃಂಖಲೆಗಳಿಂದ ಬಿಡಿಸಿ ಜನಸಾಮಾನ್ಯರ ಸೊತ್ತನ್ನಾಗಿ ಮಾಡಿದ ಕೀರ್ತಿ ವಚನಕಾರರದು. ಸಾಹಿತ್ಯ ರಾಜಾಶ್ರಯ, ಪಾಂಡಿತ್ಯ ಪ್ರದರ್ಶನ ಹಾದಿಬಿಟ್ಟು ವಿಚಾರ ಮಂಥನದ ಆಗರವಾಯಿತು. ಧಾರ್ಮಿಕ ಕ್ರಾಂತಿ ಸಾಹಿತ್ಯದಲ್ಲೂ ಕ್ರಾಂತಿ ಉಂಟುಮಾಡಿತು. ದಾಸ ಶ್ರೇಷ್ಠರು ಸಾಹಿತ್ಯವನ್ನು ಸರಳಗೊಳಿಸಿ ಜನರ ಬಳಿಗೆ ಒಯ್ದರು. ಅಂದರೆ ಸಾಹಿತ್ಯ ಜನಜೀವನದೊಂದಿಗೆ ಹಾಸು ಹೊಕ್ಕಾದ ಚೇತನವಾಯಿತು.

ಹೀಗೆ ಸಾಹಿತ್ಯ ಕಾಲಧರ್ಮಕ್ಕೆ ಅನುಗುಣವಾಗಿ ಬೆಳೆಯುತ್ತದೆಂಬುದು ಅನುಭವಿಸಿದ್ದ. ಆಯಾ ಕಾಲದ ಅಗತ್ಯ, ಅಭಿರುಚಿ, ಸನ್ನಿವೇಶಗಳಿಗೆ ಹೊಂದಿಕೊಂಡು ಸಾಹಿತ್ಯ ಸೃಷ್ಟಿ ಮುಂದೆ ನಡೆದಿದೆ. ಕನ್ನಡ ಸಾಹಿತ್ಯ ಈ ಶತಮಾನದಿಂದ ಸಮೃದ್ಧವಾಗಿ ಬೆಳೆಯತೊಡಗಿದೆ. ಕಾವ್ಯ ಪುರಾಣ, ವಚನ, ಗೀತೆಗಳ ವ್ಯಾಪ್ತಿಯನ್ನು ದಾಟಿ ಕಾದಂಬರಿಯ ಮಾರ್ಗ ಬೆಳಕಿಗೆ ಬಂದುದು ಒಂದು ಹೊಸ ತಿರುವು.

ಈ ಶತಮಾನದ 3-4 ದಶಕಗಳು ಸಾಹಿತ್ಯಕ್ಕೆ ಮತ್ತೊಂದು ಪರ್ವಕಾಲ. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಒಡಮೂಡಿದ ಕನ್ನಡ ಸಾಹಿತ್ಯ ಕಾಲ್ಪನಿಕ ಆದರ್ಶದಿಂದ ವಾಸ್ತವಿಕತೆಯ ಹತ್ತಿರ ಬರತೊಡಗಿತು. ಆದರೂ ಹೃದಯ ಮಿಡಿಯುವ ಭಾವನೆಗಳೇ ಪ್ರಾಧಾನ್ಯತೆ. ಅನಂತರದಲ್ಲಿ ಪ್ರಗತಿಶೀಲ ಸಾಹಿತ್ಯದ ಅಂಕುರಾರ್ಪಣ. ನಮ್ಮ ಸಾಹಿತ್ಯ ಸ್ವಾತಂತ್ರ್ಯ ಹೋರಾಟದಲ್ಲಿ ವಹಿಸಿದ ಪಾತ್ರ ಅಸದೃಶ. ಪರಾಡಳಿತದಿಂದ ಜಡವಾಗಿದ್ದ ಚೇತನವನ್ನು ಜಾಗೃತಗೊಳಿಸಿದ ಮಹಾ ಮಂತ್ರವಾಗಿ ಸಾಹಿತ್ಯ ಕೆಲಸ ಮಾಡಿತು. ಜಾತಿ, ಮತ, ವರ್ಗ, ಅಂತಸ್ತು, ಅಧಿಕಾರ ಎಲ್ಲವುಗಳ ಎಲ್ಲೆ ಮೀರಿ ಪ್ರತಿಯೊಬ್ಬ ಭಾರತೀಯನಲ್ಲೂ ಸ್ವಾತಂತ್ರ್ಯ ಹೋರಾಟದ ಕಿಡಿಯನ್ನು ಹಾರಿಸಿದ ಅದ್ಭುತ ಶಕ್ತಿಯಾಗಿ ಅಂದಿನ ಕಾಲದ ಅಗತ್ಯವನ್ನು ಪೂರೈಸಿತು.

ಎರಡನೆಯ ಮಹಾಯುದ್ಧ ಮುಗಿದಂತೆ, ನಾಡು ಸ್ವತಂತ್ರ್ಯಗಳಿಸಿದಂತೆ, ರಾಜಕೀಯ, ಆರ್ಥಿಕ, ವೈಜ್ಞಾನಿಕ ಹಾಗೂ ಸಾಮಾಜಿಕ ವ್ಯವಸ್ಥೆಗಳಲ್ಲಿ ತೀವ್ರತರ ಬದಲಾವಣೆಗಳುಂಟಾದವು. ಬದುಕಿನ ವೈವಿಧ್ಯತೆ ಹೆಚ್ಚಾದಂತೆ ಸಾಹಿತ್ಯದ ವ್ಯಾಪ್ತಿಯೂ ವಿಸ್ತಾರಗೊಳ್ಳಬೇಕಾಗುತ್ತದೆ. ಅಂತೆಯೇ

ಸಾಹಿತ್ಯ ಕನ್ನಡದಲ್ಲೂ ಹೊಸ ಪ್ರಯೋಗಗಳು ನಡೆದು ನವ್ಯಕಾವ್ಯ - ಸಾಹಿತ್ಯ ಆರಂಭವಾಯಿತು. ಈ ನವ್ಯ ಸಾಹಿತ್ಯದ ವೈಶಿಷ್ಟ್ಯ ಎಂದರೆ ಬದುಕಿನ ನಿಕಟ ಸಂಪರ್ಕ, ಹೊಸ ಚಿಂತನೆ, ಹೊಸ ದೃಷ್ಟಿಗೆ ಅವು ನೀಡುವ ಪ್ರಚೋದನೆ. ಇದರಿಂದಾಗಿ ಸಾಹಿತ್ಯ ಆದರ್ಶ ಜಗತ್ತನ್ನು ಬಿಟ್ಟು ವಾಸ್ತವಿಕ ಜಗತ್ತಿಗೆ ಬಂದಿತು. ಜನರ ಪ್ರತಿಕ್ರಿಯೆ, ಅಂತರಂಗದ ಅನಿಸಿಕೆಗಳ ಪ್ರತಿಬಿಂಬವಾಗಿ ಸಾಹಿತ್ಯ ಮೂಡತೊಡಗಿತು.

ಈಗ ಕಾಲ ತ್ವರಿತ ಗತಿಯಲ್ಲಿ ಬದಲಾಗುತ್ತಿದೆ. ಅಣುಸ್ಫೋಟನೆಯ ಯುಗದಲ್ಲಿದ್ದೇವೆ. ನಮ್ಮ ಆರ್ಥಿಕ ವ್ಯವಸ್ಥೆ, ರಾಜಕೀಯ, ಸಾಮಾಜಿಕ ಸಿದ್ಧಾಂತಿಕಗಳಲ್ಲಿ ಅವುಗಳ ಅನುಷ್ಠಾನದಲ್ಲಿ ಮೂಲಭೂತ ಬದಲಾವಣೆಗಳನ್ನು ಮಾಡುತ್ತಿದ್ದೇವೆ. ಇಂತಹ ಸನ್ನಿವೇಶದಲ್ಲಿ ಸಾಹಿತ್ಯದ ಪಾತ್ರ ಏನು ಎಂಬ ಬಗ್ಗೆ ಚಿಂತನೆ ಅಗತ್ಯ. ಆದರೆ ಇಂದಿನ ಸಾಹಿತ್ಯ ಇನ್ನೂ ಬಹುಮುಖವಾಗಿ ಬೆಳೆಯಬೇಕಾಗಿದೆ. ಅದು ತನ್ನ ವಿಶಾಲ ಬಾಹುಗಳನ್ನು ಚಾಚಿ ಮಾನವ ಜೀವಿತದ ಸಮಸ್ತವನ್ನೂ ಆವರಿಸಬೇಕಾಗಿದೆ.

ಸಾಹಿತ್ಯ ಕೇವಲ ವೈಯಕ್ತಿಕ ಭಾವನೆ, ಅನುಭವಗಳ ಅಭಿವ್ಯಕ್ತಿಯಾಗಬಾರದು. ಅಂದರೆ ತನಗೆ ತಾನೇ ಮಿತಿಗಳನ್ನು ಹಾಕಿಕೊಂಡಂತೆ. ಸಾಹಿತ್ಯ ನವ್ಯ ಪಂಥದ ಹಾದಿಯಲ್ಲಿ ಹೋಗಿ ಜಾರುವ ಅಪಾಯವಿದೆ. ಅದು ಸಮಸ್ತ ಮಾನವ ಜನಾಂಗಕ್ಕೆ ನೆರಳಾಗಬೇಕು. ಅದು ಮಾನವನ ಅಂತರಂಗದ ಅಳಲನ್ನು ಪ್ರತಿಧ್ವನಿಸಿ, ಪರಿಹಾರದ ಮಾರ್ಗದರ್ಶನ ಮಾಡಬೇಕು. ಈ ಮಹಾಸಭೆಯಲ್ಲಿ ಕನ್ನಡ ನುಡಿಯ ಕಲ್ಪತರುಗಳೆಲ್ಲ ಸೇರಿದ್ದೀರಿ. ಈ ಸಂದರ್ಭದಲ್ಲಿ ನಾನು ಒಂದು ವಿಷಯವನ್ನು ಸ್ಪಷ್ಟವಾಗಿ ಸೂಚಿಸಬಯಸುತ್ತೇನೆ. ಈಗ ಬದಲಾವಣೆಯು ಮಹಾಪೂರಕವಾಗಿದೆ. ಇದನ್ನು ಯಾವ ಶಕ್ತಿಯೂ ತಡೆಹಿಡಿಯಲು ಸಾಧ್ಯವಿಲ್ಲ. ಬಹು ಜನರಿಗೆ ಇದರ ಅರಿವಿಲ್ಲ ಮತ್ತೆ ಕೆಲವರಿಗೆ ಅರಿವಿದ್ದರೂ ಬದಲಾವಣೆಯ ನಾಗಾಲೋಟದೊಡದೆ ಹೆಚ್ಚಿಗೆ ಓಡಲಾರದ ಕಾರಣ ಸಂಕಟವಾಗಿದೆ ಹಾಗೂ ಬದಲಾವಣೆಯನ್ನು ದೂಷಿಸುತ್ತಾರೆ. ಸ್ವಲ್ಪ ಜನರಿಗೆ ಮಾತ್ರ ಈ ಬದಲಾವಣೆಯ ಓಟ ಮತ್ತು ಸ್ವರೂಪ ಅರ್ಥವಾದೀತು. ಈ ವಾಸ್ತವ ಸತ್ಯದ ಅರಿವು ಎಲ್ಲ ಸಾಹಿತ್ಯಗಳಲ್ಲೂ ಮೂಡಬೇಕಾಗಿದೆ. ಆದ್ದರಿಂದಲೇ ಸಾಹಿತಿಗೆ ಪರಿಸರದ ಪ್ರಜ್ಞೆ ಅಗತ್ಯ.

ಇಂದಿನ ವಿಚಾರದಲ್ಲಿ ವ್ಯಷ್ಟಿ ಸುಖಕ್ಕಿಂತ ಸಮಷ್ಟಿಯ ಮುಕ್ತಿಗೆ ಹೆಚ್ಚು ಮಹತ್ವ. ಸಾಹಿತ್ಯ ಆಂದೋಲನ ಎಷ್ಟರ ಮಟ್ಟಿಗೆ ಈ ದೃಷ್ಟಿಯನ್ನು ಪ್ರತಿಪಾದಿಸುವುದೋ ಅದು ಪ್ರಗತಿಶೀಲ. ಇದೇ ನಮ್ಮ ಅಳತೆಕೋಲಾಗಬೇಕು. ವ್ಯಷ್ಟಿಸುಖಕ್ಕಿಂತ ಸಮಷ್ಟಿ ಸುಖ ಮುಖ್ಯ. ಪಟ್ಟಭದ್ರ ಹಿತಗಳಿಗೆ ಈಗ ಮುಟ್ಟುಗೋಲು ಬೀಳುತ್ತದೆ. ಇತರರ ಬೆವರಿನಿಂದ ವೈಭವದ ಜೀವನ ನಡೆಸಲು ಸಮಾಜ ಈಗ ಬಿಡುವುದಿಲ್ಲ ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು ಎನ್ನುವುದು ಇಂದಿನ ಜೀವನಸೂತ್ರ. ವರ್ಗಭೇದ, ವರ್ಣಭೇದಗಳನ್ನು ತೊಡೆದು ಹಾಕುವ ಮಹಾಸಾಹಸ ಈಗ ನಡೆಯುತ್ತಿದೆ. ಧರ್ಮದ ಹೆಸರಿನಲ್ಲಿ ಬೆಳೆದ ವರ್ಣಭೇಧ ಹಿಂದಿನ ಅರ್ಥ ವ್ಯವಸ್ಥೆಯಲ್ಲಿ ಮಾಡಿದ ವರ್ಗಭೇದ. ಈ ಅನಿಷ್ಟಗಳು ಇನ್ನೂ ನಮ್ಮ ಸಮಾಜದಿಂದಾಗಿ ನಮ್ಮ ಜನಜೀವನದ

ಬದುಕು ದುರ್ಭರವಾಗಿದೆ. ಸಾಹಿತಿಗಳು ಇತ್ತ ದೃಷ್ಟಿ ಹರಿಸಬೇಕು. ಜನರ ಬದುಕಿಗೆ ನೆರವಾಗುವಂತಹ ಅವರ ಮಾನಸಿಕ ದಾಸ್ಯವನ್ನು ಹೋಗಲಾಡಿಸಿ, ಅವರಲ್ಲಿ ಆತ್ಮಗೌರವ ಮೂಡಿಸುವಂತಹ ಚೇತನಪೂರ್ಣ ಸಾಹಿತ್ಯ ಹೆಚ್ಚು ಸೃಷ್ಟಿಯಾಗಬೇಕು. ನಮಗೆ ಬೇಕಾಗಿರುವುದು ಪ್ರಚಾರ ಸಾಹಿತ್ಯವಲ್ಲ, ವಿಚಾರ ಸಾಹಿತ್ಯ, ರಾಷ್ಟ್ರದ ಪುನರ್ನಿರ್ಮಾಣಕ್ಕೆ ಜನತೆಯನ್ನು ಸನ್ನದ್ಧಗೊಳಿಸುವ ಪ್ರಚೋದಕ ಸಾಹಿತ್ಯ.

ಇನ್ನು ಭಾವನಾ ಪ್ರಪಂಚದ ಭ್ರಮೆ ಬಿಡುವುದು ಒಳಿತು. ಪಾಂಡಿತ್ಯದ ಅರಮನೆಯಲ್ಲಿ ನೆಮ್ಮದಿಯಾಗಿರಬೇಕೆಂಬುದು ಬಿಟ್ಟು ಸಾಹಿತಿಗಳು ಜನಜೀವನದಲ್ಲಿ ನಿಕಟವಾಗಿ ಸಂಪರ್ಕ ಬೆಳೆಸಬೇಕಾಗಿದೆ. ಯಾವುದೇ ರೀತಿಯ ಮಡಿವಂತಿಕೆ ಬಿಟ್ಟು ಬಯಲಿಗೆ ಬರಬೇಕು. ಜನಸಾಮಾನ್ಯರ ಸುಖ-ದುಃಖಗಳಲ್ಲಿ ಬೆರೆಯಬೇಕು, ಅಂದಾಗ ಮಾತ್ರ ಅವರ ಸಾಹಿತ್ಯಕ್ಕೊಂದು ನೆಲೆ ಬೆಲೆ.

ನಮಗೆ ಇಂದು ಬೇಕಾಗಿರುವುದು ರಾಷ್ಟ್ರೀಯ ಮನೋಭಾವನೆ; ಶ್ರಮಪೂರ್ಣ ದುಡಿಮೆ ಅಂತಹ ಮನೋಭಾವನೆಯನ್ನು ಮೈಗೂಡಿಸಿಕೊಂಡು ಸ್ಫೂರ್ತಿ ನೀಡುವುದು ಸಾಹಿತಿಗಳಾದ ತಮ್ಮ ಕರ್ತವ್ಯ. ಅಂತಹ ಸೃಜನಶೀಲ ಸಾಹಿತ್ಯ ತಮ್ಮಿಂದ ಸೃಷ್ಟಿಯಾಗಬೇಕು. ತಾವು ಸಮಾಜದ ಮುನ್ನಡೆಗೆ ಆತಂಕವಾಗಿರುವ ಎಲ್ಲ ಬಗೆಯ ವರ್ಣ ಹಾಗೂ ವರ್ಗ ಭೇದಗಳನ್ನು ಮೆಟ್ಟಿ ನಿಲ್ಲುವ ಧೀಮಂತರಾಗಬೇಕು. ತಮ್ಮ ಲೇಖನಿ ಕೇವಲ ಶೃಂಗಾರದ ಪುಷ್ಪವಾಗದೆ ಕ್ರಾಂತಿಯ ಖಡ್ಗವಾಗಬೇಕು.

ತಮಗೆಲ್ಲ ತಿಳಿದಿದೆ. ನಮ್ಮ ಕೋಟಿ ಕೋಟಿ ಬಂಧುಗಳು ಅಜ್ಞಾನದ ಕತ್ತಲೆಯಲ್ಲೇ ಇದ್ದಾರೆ. ಅವರಿಗೆ ಕಾಲ್ಪನಿಕ ಆದರ್ಶಗಳಿಗಿಂತ ಜೀವನದ ವಾಸ್ತವಿಕ ಮೌಲ್ಯಗಳನ್ನು ಅರ್ಥಮಾಡಿಕೊಡಬೇಕು. ಆಧುನಿಕ ವೈಜ್ಞಾನಿಕ ಸಂಶೋಧನೆಗಳ ಫಲ ಜನಸಾಮಾನ್ಯರಿಗೆ ಅರ್ಥವಾಗುವಂತಹ ಸಾಹಿತ್ಯ ಸೃಷ್ಟಿಯಾಗಬೇಕು. ರಾಷ್ಟ್ರದ ಸಮಸ್ತ ಆಗು-ಹೋಗುಗಳಲ್ಲೂ ಹೃತ್ಪೂರ್ವಕವಾಗಿ ಸಾಮಾನ್ಯ ಜನತೆ ಪಾಲುಗೊಳ್ಳುವಂತೆ ಪ್ರೇರಣೆ ನೀಡುವಂತಹ ಸಾಹಿತ್ಯ ನಿರ್ಮಾಣ ಹೆಚ್ಚಾಗಬೇಕು. ವಿಜ್ಞಾನ, ಅರ್ಥಶಾಸ್ತ್ರ ತಾಂತ್ರಿಕ ಕುಶಲತೆ ಹೀಗೆ ಆಧುನಿಕ ಜ್ಞಾನದ ಜೀವನದ ಅನಂತಮುಖಗಳನ್ನೂ ಒಳಗೊಂಡ ಕೃತಿಗಳ ರಚನೆ ಅಗತ್ಯ ಒಟ್ಟಿನಲ್ಲಿ ವ್ಯಕ್ತಿಯ ವೈಚಾರಿಕ ಪ್ರಜ್ಞೆಯ ವಿಕಾಸಕ್ಕೆ ಸಾಹಿತ್ಯ ಚೇತನ ಶಕ್ತಿಯಾಗಬೇಕು.

ಕೊನೆಯದಾಗಿ ನಮ್ಮ ರಾಜ್ಯದಲ್ಲಿ ಕನ್ನಡ ನುಡಿಯ ಏಳಿಗೆಯ ಬಗ್ಗೆ ನಡೆದಿರುವ ಪ್ರಯತ್ನಗಳನ್ನು ಕುರಿತು ಒಂದು ಮಾತು. ಇತ್ತೀಚೆಗೆ ನಮ್ಮ ವಿಶ್ವವಿದ್ಯಾಲಯಗಳಲ್ಲಂತೂ ಅತ್ಯಂತ ಶ್ರೇಷ್ಠ ಕೆಲಸ ನಡೆದಿದೆ. ಕನ್ನಡ ಸಾಹಿತ್ಯ ಪರಿಷತ್ತು ಕಳೆದ ಮೂರು ನಾಲ್ಕು ವರ್ಷಗಳಿಂದ ವಹಿಸಿರುವ ಪಾತ್ರವಂತೂ ಅಭಿಮಾನ ಪೂರ್ಣವಾದುದು. ಕನ್ನಡ ನುಡಿಯ ಸೇವೆಗಾಗಿ ರಾಜ್ಯ ಸರಕಾರವು ಅತ್ಯಂತ ಆಸಕ್ತಿ ತಾಳಿದೆ. ಕನ್ನಡ- ಕನ್ನಡನಿಘಂಟು, ವಿಶ್ವಕೋಶ, ಕಿರಿಯರ ವಿಶ್ವಕೋಶ, ಮೊದಲಾದ ಬೃಹತ್ ಸಾಹಿತ್ಯ ಕೃತಿಗಳ ಪ್ರಕಟಣೆಗೆ ಸರಕಾರ ನೆರವಾಗಿದೆ. ಆಡಳಿತದ ಭಾಷೆಯಾಗಿ ಕನ್ನಡವನ್ನು ಎಲ್ಲ ಹಂತಗಳಲ್ಲೂ ಜಾರಿಗೆ ತರಲು ಕ್ರಮ ಕೈಗೊಳ್ಳಲಾಗಿದೆ. ಆದಷ್ಟು ಬೇಗ ಅದು ಪೂರ್ಣವಾಗಿ ಕಾರ್ಯಗತಗೊಳ್ಳುವ ವಿಶ್ವಾಸ ನನಗಿದೆ. ಬಾಳುವ ಕರ್ನಾಟಕ ಆಗಿದೆ, ಇನ್ನು ಆಳುವ ಕನ್ನಡ ಆಗಬೇಕಾಗಿದೆ, ಆಗುತ್ತದೆ.

## 11. ನಮ್ಮ ಮಹಾಕವಿ ಕುವೆಂಪು ಕುರಿತು.

ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ 'ಮಹಾಕವಿ ಕುವೆಂಪು' ಅವರಿಗೆ ಸನ್ಮಾನ. ಅದೊಂದು ಮಹತ್ತರ ಹಾಗೂ ಅಪೂರ್ವ ಸಂಜೆ. ನಾಡಿನ ಪ್ರತಿಷ್ಠಿತ ಗಣ್ಯ ಹಾಗೂ ಬುದ್ಧಿಜೀವಿ ವರ್ಗದಿಂದ ಕಂಗೊಳಿಸುತ್ತಿದ್ದ ವೇದಿಕೆ. ಕಿಕ್ಕಿರಿದ ಸಭಾಭವನ. ಮುಖ್ಯಮಂತ್ರಿ ಸ್ಥಾನದಿಂದ ನಿರ್ಗಮಿಸಿದ್ದರೂ, ನಿಶ್ಚಿತ ಕಾರ್ಯಕ್ರಮದಂತೆ ದೇವರಾಜ ಅರಸರಿಂದಲೇ ಮಹಾಕವಿಗೆ ಸನ್ಮಾನ. ಆ ಸಂದರ್ಭದಲ್ಲಿ ಕವಿವರೇಣ್ಯರನ್ನು ಕುರಿತು, ಅವರು ಆಡಿದ ಮಾತುಗಳು ಅರ್ಥಪೂರ್ಣ, ಅನನ್ಯ. ಶ್ರೀ ಕುವೆಂಪು ಯುಗಪುರುಷರು, ಅವನ ಜನನ ನಾಡಿಗೊಂದು ಪುಣ್ಯ. ಇಂಥ ಸುಸಂಧಿ ನಮ್ಮ ಜೀವಿತದ ಅವಧಿಯಲ್ಲಿ ಒದಗಿರುವುದು ಒಂದು ಹೆಮ್ಮೆ. ಈ ಮಹಾಕವಿಯನ್ನು ಸನ್ಮಾನಿಸುವ ಭಾಗ್ಯದಿಂದ ನಾವು ನಿಜಕ್ಕೂ ಧನ್ಯರು ಇದು. ಅರಸರ ದೃಷ್ಟಿ ಇಲ್ಲಿ. ಅರಸರಿಗಿದ್ದ ಕವಿ- ಕಾವ್ಯ ಪರಂಪರೆಯ ಬಗೆಗಿನ ಗಾಢ ಅಭಿಮಾನ ಹಾಗೂ ಅವರ ಸಹೃದಯ ವೈಶಾಲ್ಯತೆಯ ದ್ಯೋತಕ. ಅವರ ಮುಂದಿನ ಭಾಷಣವನ್ನು ರಾಷ್ಟ್ರಕವಿ ಗ್ರಂಥದಿಂದ ಆಯ್ದುಕೊಂಡಿದೆ.

ಪೂಜ್ಯ ಕವಿ ಕುವೆಂಪುರವರೆ, ಉಪಸ್ಥಿತರಾಗಿರುವ ಸಾಹಿತಿಗಳೆ, ಸಾಹಿತ್ಯ ಪ್ರೇಮಿಗಳೆ ಅಕ್ಕ ತಂಗಿಯರೆ, ಅಣ್ಣ ತಮ್ಮಂದಿರೆ, ಈ ದಿವಸ ನನ್ನ ಪಾಲಿಗೆ ಬಂದಿರುವ ಪವಿತ್ರ ಕರ್ತವ್ಯ, ನನ್ನ ಜೀವಿತ ಘಟ್ಟದಲ್ಲಿ ಅತ್ಯಂತ ಚಿರಸ್ಮರಣೀಯವಾದುದು.

ಮಹಾಕವಿ ಕುವೆಂಪು ಕಂಡಂಥ ದರ್ಶನ, ಕರ್ನಾಟಕ, ಕನ್ನಡ ಭಾಷಾ ಸಾಹಿತ್ಯ, ಕನ್ನಡ ಭಾಷೆಯ ಬಗ್ಗೆ ಅವರ ಒಲವು-ನಿಲುವುಗಳನ್ನು ಇದುವರೆವಿಗೂ ಕೇಳಿರುವಿರಿ. ಕರ್ನಾಟಕ ಒಂದಾದದ್ದು ನನ್ನಿಂದಲ್ಲ ಕರ್ನಾಟಕವಾಗಿದ್ದು ಮಾತ್ರ ನನ್ನಿಂದ ಅಂತ ಹೇಳಬಹುದು. ನಮ್ಮ ಕವಿಯನ್ನು ಮಹಾಕವಿ ಎಂದು ಕರೆದಿದ್ದೇವೆ. ಆದರೆ ಎಲ್ಲರನ್ನೂ ಮಹಾಕವಿಗಳು ಅಂತ ಹೇಳೋದಿಲ್ಲ. ಇದರಲ್ಲೂ ಮತ್ತೊಂದು ಪಂಗಡವಿದೆ. ಕವಿ ಹಾಗೂ ಹೊಟ್ಟೆಪಾಡಿಗಾಗಿ ಹಾಡುವ ಕವಿ.

ನಮ್ಮ ಮಹಾಕವಿಗಳು ದುಷ್ಟರರೂ ಹೌದು. ದಾರ್ಶನಿಕರೂ ಹೌದು. ಮಹಾಜ್ಞಾನಿ, ವಿಜ್ಞಾನಿ ಈ ಗುಣಗಳಿಲ್ಲದೆ ಮಹಾಕವಿ ಎಂದು ಹೇಳಲಾಗುವುದಿಲ್ಲ. ಈ ಗುಣಗಳೆಲ್ಲ ಇದೆಯೇ, ಇಲ್ಲವೇ ಅನ್ನುವುದು ನೋಡಬೇಕು. ವೈಯಕ್ತಿಕವಾಗಿ ಮಾನವನಲ್ಲಿ ಇರಬೇಕಾದದ್ದು ದಯಾಗುಣ. ನಮ್ಮ ಕವಿಗಳು ದಯಾ ಮೂರ್ತಿಗಳು, ಇದು ಇಲ್ಲದಿದ್ದರೆ ಹೃದಯ ಸ್ವಚ್ಛವಿರುವುದಿಲ್ಲ. ಆದರ್ಶ, ನ್ಯಾಯ ಇವೆಲ್ಲವೂ ನಮ್ಮ ಮಹಾಕವಿ ಪುಟ್ಟಪ್ಪನವರಿಗೆ ನಿಶ್ಚಯ.

ನಾನು ಇಂಟರ್ ಮಿಡಿಯೇಟ್ ಕಾಲೇಜಿನಲ್ಲಿ ಓದುತ್ತಿದ್ದೆ. ಆಗಲೇ ನಮ್ಮ ಮಹಾಕವಿಯ ದರ್ಶನ. ಅವರನ್ನು ನೋಡಿದಾಗಲೆಲ್ಲಾ ಒಬ್ಬ ಮಹಾತೇಜಸ್ವಿಯನ್ನು ನೋಡಿದಂತೆ ಆಗುತ್ತಿತ್ತು. ಹೃದಯದ ಅಂತರಾಳದಿಂದ ಅಪಾರ ಗೌರವ ಭಾವ ಮೂಡಿಬರುತ್ತಿತ್ತು. ಅವರ ಶರೀರ, ಆತ್ಮ ಹಾಗೂ ಮನಸ್ಸು ಸುಂದರ, ಅವರಂತಹ ಸುಂದರವಾದ ವ್ಯಕ್ತಿಯನ್ನು ನಾನು ನೋಡೇ ಇಲ್ಲ ನನ್ನ ಮನಸ್ಸೇ ಇಷ್ಟೊಂದು ಹಷ್ ತಳೆಯುವಾಗ, ಯೌವನಸ್ಥ ಹುಡುಗಿಯರ ಮನಸ್ಸನ್ನು ಎಷ್ಟರ ಮಟ್ಟಿಗೆ ಕಲಕಲಿಕ್ಕಿಲ್ಲ ಈ ಚೆಲುವು ಎಂದೆನಿಸುತ್ತಿತ್ತು.

ಪೂಜ್ಯ ಕವಿಗಳು ಬರೆದು ಸಣ್ಣ ಸಣ್ಣ ಕವನಗಳನ್ನು ಹೇಳಿ, ಅದರ ಭಾವನೆ ಏನಿದೆ ಎಂಬುದನ್ನು ತಿಳಿಸಲು ಇಚ್ಛಿಸುತ್ತೇನೆ. ಸಮಾಜದ ಆಧಾರದ ಮೇಲೆ ದೇಶ ಕಟ್ಟಬೇಕು. ನಾವುಗಳು ಸೋಷಿಯಲಿಸಮ್ ಅಂತ ಏನನ್ನು ಹೇಳುತ್ತಿದ್ದೇವೆಯೋ ಅದು ಆಗಬೇಕು. ನಮ್ಮ ದೇಶದವರೇ ಆದ ಪದ್ಧತಿ ಬರಬೇಕು. ಸ್ವಾತಂತ್ರ್ಯದಲ್ಲಿಯೇ ಸಾಧನೆ ಮುಖ್ಯ ಅನ್ನುವುದನ್ನು ಕುರಿತು ಈ ರೀತಿ ಹೇಳಿದ್ದಾರೆ.

ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ
ಬಡತನವ ಬುಡಮಟ್ಟ ಕೀಳಬನ್ನಿ-
ಮೌಢ್ಯತೆಯ ಮಾರಿಯನ್ನು ಹೊರದೂಡಲೈತನ್ನಿ,
ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕ್ಕೆ.

ನಮ್ಮ ಸಮಾಜದಲ್ಲಿ ಮೇಲು-ಕೀಳು ಎಂಬ ಅಂತರ ಇದೆ. ಕಡುಬಡವರಿಗೂ ಶ್ರೀಮಂತರಿಗೂ ಇರುವ ಅಂತರ, ಇದೂ ಅವರ ಕವನದಲ್ಲಿ ಕಾಣುತ್ತೇವೆ. ನಾಲ್ಕೈದು ಸಾಲುಗಳಲ್ಲಿ ಈ ಎಲ್ಲಾ ಅರ್ಥ ಬರುವಂತೆ ಬರೆದಿದ್ದಾರಲ್ಲಾ ಯಾವ ಭಾಷೆಯಲ್ಲಿ ಸಹ ಈ ರೀತಿ ಬರೆದಿರುವುದು ನಾನು ಕಾಣಲಿಲ್ಲ.

ಸಗ್ಗದ ಬಾಗಿಲು ಎಲ್ಲಿಹುದಣ್ಣ
ನುಗ್ಗಿದರಲ್ಲೇ ತೆರೆಯುವುದಣ್ಣ
ದುಡಿಯುವ ರೈತನ ನೇಗಿಲೊಳಡಗಿದೆ
ಕಡಿಯುವ ಕೂಲಿಯ ಕತ್ತಿಯೊಳಗಿದೆ ನೇಗಿಲ ಬೆಳೆಯೇ ಸಗ್ಗದ ಹಾದಿ
ಕರ್ಮವೆ ಬಾಗಿಲಿಗೆ ನಡೆಯುವ ಬೀದಿ.

ಇದಕ್ಕಿಂತ ಉತ್ತಮವಾಗಿ ಹೇಳಬಲ್ಲವರು ಯಾರಿದ್ದಾರೋ ನನಗಂತೂ ಗೊತ್ತಿಲ್ಲ. ಒಂದೊಂದು ಸಾಲು ಎಷ್ಟು ಅರ್ಥವತ್ತಾಗಿದೆ. ಹಾಗೆಯೇ

ಧನಿಕರ ಮನೆಗಳು ಒಂದೆಡೆ ನಿಂತಿವೆ
ಬಡವರ ಮನೆಗಳು ಒಂದೆಡೆ ನಿಂತಿವೆ
ಪೀತಾಂಬರ ಹೊದೆದಿಹರಲ್ಲಿ
ಕೌಪೀನಕೂ ಚಿಂದಿಯೂ ಸಿಗದಿಲ್ಲಿ

ಇಂತಹ ಅಸಮಾನತೆ ನಮ್ಮ ಸಮಾಜದಲ್ಲಿದೆ ಎಂಬುದನ್ನು ತಿಳಿಸಿದ್ದಾರೆ. ಯಾವ ಕವಿಯೇ ಆಗಲಿ ಇದರ ಅರ್ಥವನ್ನು ಪೂರ್ಣ ಮಾಡುತ್ತಾನೋ ಆತನೆ ಮಹಾಕವಿ. ನನಗೆ ಪುಟ್ಟಪ್ಪನವರನ್ನು ನೋಡಿದಾಗಲೆಲ್ಲಾ, ಸಂಭಾಷಣೆ ಮಾಡಿದಾಗಲೆಲ್ಲಾ ಈ ಪದ್ಯ ಜ್ಞಾಪಕಕ್ಕೆ ಬರುತ್ತದೆ.

ಇಂದು ಕುವೆಂಪುರವರಿಗೆ ಸನ್ಮಾನ ಮಾಡಿದ್ದೀರಿ. ಅದಕ್ಕೆ ನನ್ನನ್ನು ಗೌರವ ಪೂರ್ವಕವಾಗಿ, ಮುಖ್ಯ ಅತಿಥಿಯನ್ನಾಗಿ ಕರೆದಿದ್ದೀರಿ. ಈಗ ನನಗೊಂದು ಯೋಚನೆ, ನಮ್ಮಿಬ್ಬರಲ್ಲಿ ಯಾರಿಗೆ ಗೌರವ ಹೆಚ್ಚಾಯ್ತು ಅಂತ. ವಿಕ್ರಮಾದಿತ್ಯನಿಗೆ ಬೇತಾಳ ಕೇಳುವ ಪ್ರಶ್ನೆಯಂತೆ ಆಯ್ತು. ಅದಕ್ಕೆ ನಾನೇ ಉತ್ತರ ಕೊಡುತ್ತೇನೆ. ರಾಷ್ಟ್ರ ಕವಿಗೆ, ನಮ್ಮ ಕರ್ನಾಟಕ ರಾಜ್ಯದ ಪರವಾಗಿ ಅದರಲ್ಲೂ ರಾಷ್ಟ್ರದ ಪರವಾಗಿ ಸನ್ಮಾನ ಮಾಡುತ್ತಿದ್ದೇವೆ. ನಾನು ಹಾರ ಹಾಕಿ ಶಾಲು ಹೊದಿಸಿದ್ದು ಅಂದರೆ ನಿಜವಾಗಲೂ ನನಗೆ ಗೌರವ ಅಂತ ಹೆಮ್ಮೆ ಪಟ್ಟುಕೊಳ್ಳುತ್ತೇನೆ. ಈ ಯುಗಪುರುಷ ನಮ್ಮೆಲ್ಲರ ಹಾರೈಕೆಯಂತೆ ಶತಾಯುವಾಗಲಿ ಎಂದು ಹಾರೈಸಿದರು.

# 1. ಭೂ ಸುಧಾರಣಾ ಸಮಿತಿಯ ಕುರಿತು ಚರ್ಚೆ

(19-4-1953)

**Mr. D. DEVARAJURS**.- I may state for the information of the Hon'ble member that it is called the land Reforms committee. ಸ್ವಾಮಿ. ಭೂ ಸುಧಾರಣೆಯಾಗಬೇಕೆಂದು ಹೇಳುವವರಲ್ಲಿ ನಾನೂ ಒಬ್ಬ, ಆದರೆ ಅವರು ಹೇಳುವ ಹಾಗೆ, ಜಮೀನಿರುವವರಿಂದ ಅದನ್ನು ಕಿತ್ತು ಬೇರೆಯವರಿಗೆ ಕೊಡುವುದು, ಬಹಳ ದೀರ್ಘವಾಗಿ ಯೋಚನೆಮಾಡಬೇಕಾದ ವಿಚಾರ. ಹೊಸದಾಗಿ ಜಮೀನು ಕೊಡುವುದು ಎನ್ನುವ ವಿಚಾರಗಳಲ್ಲಿ ಮಾತನಾಡಿದ್ದಾರೆ. ಒಂದು ಅನುಭವವನ್ನು ಹೇಳುತ್ತೇನೆ. ಹುಣಸೂರು ತಾಲ್ಲೂಕಿನಲ್ಲಿ ಸಹಕಾರ ಸಂಘ ಒಂದನ್ನು ಏರ್ಪಡಿಸಿ ಮೂರು ಸಾವಿರ ಎಕರೆ ಜಮೀನನ್ನು ಕೊಟ್ಟಿದ್ದಾರೆ. ನಾವು ಸುಮಾರು ಮೂರು ವರ್ಷದಿಂದ ಜಮೀನು ಕೊಡುತ್ತೇವೆ, ವ್ಯವಸಾಯಕ್ಕೆ ಸಹಾಯ ಮಾಡುತ್ತೇವೆ, ಬನ್ನಿ ಎಂದು ಪ್ರಕಟಣೆ ಕೂಡ ಮಾಡಿದ್ದೇವೆ, ಆದರೆ, ಸ್ವಾಮಿ, ಆ ಪ್ರದೇಶದಲ್ಲಿ ನಾಲ್ಕೈದು ಮೈಲಿ ದೂರದಲ್ಲಿ ಜಮೀನಿಲ್ಲದಿರುವ ಜನರಿದ್ದರೂ ಅವರು ಅಲ್ಲಿಗೆ ಬರುತ್ತಿಲ್ಲ. ಕೊಡಗಿನ ಕಡೆಯಿಂದ ಕೊಯಮತ್ತೂರು ಕಡೆಯಿಂದ ಬಂದು ವ್ಯವಸಾಯಗಾರರು ಅಲ್ಲಿ ನೆಲೆಸಿದ್ದಾರೆಯೇ ಹೊರತು ಸ್ಥಳದವರೊಬ್ಬರೂ ಬಂದಿಲ್ಲ. ಅಲ್ಲಿ ಏನೇನು ಅನುಕೂಲತೆಗಳನ್ನು ಕೊಡುತ್ತೇವೆಂದರೆ, ವ್ಯವಸಾಯಗಾರ ಬಂದರೆ, ಅವನಿಗೆ ಎರಡೆಕರೆ ತರೀ ಜಮೀನು, ಐದು ಎಕರೆ ಖುಷ್ಕಿ ಜಮೀನು ಕೊಡಬೇಕೆಂದು ಮಾಡಿದ್ದೇವೆ. ಇದರ ಜೊತೆಗೆ ಸಂಘದಿಂದಲೇ ಎತ್ತುಗಳು ಕರುಗಳನ್ನು ತೆಗೆದುಕೊಳ್ಳುವುದಕ್ಕೆ. ವ್ಯವಸಾಯದ ಸಲಕರಣೆಗಳನ್ನೊದಗಿಸಿಕೊಳ್ಳುವುದಕ್ಕೆಂದು 200 ರೂಪಾಯಿಗಳಿಂದ 500 ರೂಪಾಯಿಗಳವರೆಗೆ ಸಾಲ ಕೊಡಬೇಕೆಂದು ಮಾಡಿದ್ದೇವೆ. ಹೀಗಿದ್ದರೂ ಸ್ಥಳದ ಜನರು ಅಲ್ಲಿ ಬರದೆ, ಹುಣಸೂರಿನಲ್ಲಿದ್ದು ಕೊಡಗಿಗೆ ಹೋಗುವ ಲಾರಿಗಳ ಮೇಲೆ ಹೋಗಿ ಕಾಡಿನಲ್ಲಿ ಎರಡು ಗಂಟೆ ಕಾಲ ಮರ ಕತ್ತರಿಸಿ ನಾಲ್ಕೈದು ರೂಪಾಯಿ ಸಂಪಾದನೆ ಮಾಡಿ ಹೋಟೆಲ್ಲುಗಳಲ್ಲಿ ಹೊಟ್ಟೆ ಹೊರೆದುಕೊಂಡು ಕಾಲ ತಳ್ಳುತ್ತಿದ್ದಾರೆಯೇ ವಿನಾ ಜಮೀನನಲ್ಲಿ ಕೆಲಸ ಮಾಡಲು ಅವರಿಗೆ ಆಸಕ್ತಿಯಿಲ್ಲ. ಯಾರು ಯಾರು ಜಮೀನಿಲ್ಲವೆಂದು ಹೇಳುತ್ತಾರೋ ಅವರಿಗೆ ಅವರ ಸ್ಥಳದಲ್ಲಿಯೇ ಗೋಮಾಳವಾದರೂ ಕೊಡಿ, ಗುಂಡು ತೋಪಾದರೂ ಕೊಡಿ, ಏನಾದರೂ ಮಾಡಿ; ಭೂಮಿ ಇಲ್ಲದಿದ್ದರೆ ಸರ್ಕಾರದವರು ಉತ್ಪತ್ತಿ ಮಾಡಿಕೊಡಿ ಎಂದು ಕೇಳಿದರೆ ಅದು ಸಾಧ್ಯವೆ? ಮಲೆನಾಡಿನಲ್ಲಿ ತಮಗೆ ಗೊತ್ತಿರುವ ಹಾಗೆ ಲಕ್ಷಾಂತರ ಎಕರೆ ಜಮೀನು ಸಾಗುವಳಿಯಾಗದೆ ಬೀಳುಬಿದ್ದಿವೆ. ಹಿಡುವಳಿದಾರರ ಕೈಯ್ಯಲಿಲ್ಲದೇಯಿರುವ ಸರ್ಕಾರಿ ಜಮೀನು ಕೂಡಾ ಬೇಕಾದಷ್ಟಿದೆ. ಮಲೆನಾಡಿನಲ್ಲಿ ಜಮೀನು ವ್ಯವಸಾಯ ಮಾಡುವುದಕ್ಕೆ ದೊಡ್ಡ ಕೊರತೆಯೆಂದರೆ ಜನರು ಇಲ್ಲದೇಯಿರುವುದು. ಅಂಥ ಸ್ಥಳಕ್ಕೆ ಜನರು ಹೋದರೆ ಬೇಕಾದಷ್ಟು ಜಮೀನು ಕೊಡಬಹುದು. ಮೈಸೂರು ದೇಶದಲ್ಲಿ ಜಮೀನಿಗೆ ಅಭಾವವಿಲ್ಲವೆಂಬುದು ಖಚಿತವಾದ ವಿಚಾರ. ನಾವು ಇನ್ನೊಂದು ವಿಷಯ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಮೈಸೂರು ದೇಶದಲ್ಲಿರುವುದು ರೈತವಾರಿ ಪದ್ಧತಿ. ಇಲ್ಲಿ ಒಟ್ಟು 13 ಲಕ್ಷ ಖಾತೇದಾರರ ಪೈಕಿ ದೊಡ್ಡ ದೊಡ್ಡ ಜಮೀನ್‌ದಾರರು, ನೂರು ಎಕರೆಗಳ ಮೇಲೆ ಜಮೀನಿರುವವರು, ಹತ್ತು ಹದಿನೈದು ಸಾವಿರ ಜನರಿದ್ದರೆ ಹೆಚ್ಚು.

ಆದುದರಿಂದ ಅಂಥ ಕ್ರಾಂತಿಕಾರಿ ಸುಧಾರಣೆಯ ಅಗತ್ಯ ಇಲ್ಲಿ ಯಾವುದೂ ಕಾಣಲಿಲ್ಲ ರೈತವಾರಿ ಪದ್ಧತಿಯಲ್ಲಿ ನಮ್ಮ ದೇಶದಲ್ಲಿ...

ಶ್ರೀ ಎಂ. ಮಾದಯ್ಯ.- ನೂರು ಎಕರೆಗಿಂತ ಹೆಚ್ಚಿರುವವರು 3, 80, 000 ಜನರಿದ್ದಾರೆ.

**Sri. D. DEVARAJURS.-** It is incorrect, it is Wrong, I challenge. it is only 3,000 and odd it, is in the statistics also.

**Mr. SPEAKER.-** You can go on.

**ಶ್ರೀ ಡಿ. ದೇವರಾಜ ಅರಸ್.-** Thank you Sir. ಹೀಗಿರುವಾಗ ಹೆಚ್ಚಿಗೆ ಬದಲಾವಣೆ ಬೇಕಾಗಿಲ್ಲ. ಜನರು ಜಮೀನಿರುವ ಕಡೆ ಹೋಗುವುದಕ್ಕೆ ಮನಸ್ಸು ಮಾಡಬೇಕು, ಸರ್ಕಾರದವರು ಸಹಾಯ ಸಲಕರಣೆಗಳನ್ನೊದಗಿಸಿಕೊಡಬೇಕು. ಜನರಿಗೆ ಅನುಕೂಲತೆ ದೊರಕಬೇಕು, ಜಮೀನು ದೊರಕಬೇಕೆಂಬ ಭಾವನೆಯಿರುವವರಲ್ಲಿ ನಾನು ಒಬ್ಬ ಹಾಗಿರುವಾಗ ಇಲ್ಲಿ ಯಾವ ಹೆಚ್ಚು ಬದಲಾವಣೆಯೂ ಅನಗತ್ಯ. ಜನರು ಜಮೀನಿರುವ ಕಡೆಗೆ ಹೋಗುವುದಕ್ಕೆ ಮನಸ್ಸು ಮಾಡಬೇಕು. ಇದಕ್ಕೆ ಸರಕಾರದವರೂ ತಕ್ಕ ಸಹಾಯ ಸಲಕರಣೆಗಳನ್ನು ಒದಗಿಸುವುದಕ್ಕೆ ಮನಸ್ಸು ಮಾಡಿದರೆ ಜನರಿಗೆ ಬೇಕಾದ ಅನುಕೂಲ ಸಿಕ್ಕುತ್ತದೆ, ಜಮೀನು ಕೂಡಾ ಇದೆ. ಈ ಕಾರಣಗಳಿಂದ ಸಮಿತಿ ರಚನೆಯ ಅಗತ್ಯವೇನೂ ಇಲ್ಲವೆಂದು ಹೇಳುವವರಲ್ಲಿ ನಾನೂ ಒಬ್ಬ.

# 2. ಆಹಾರ ಸ್ಥಿತಿ ಕುರಿತು ಚರ್ಚೆ

(21-10-1952)

ಶ್ರೀ ಡಿ. ದೇವರಾಜ ಅರಸ್.- ಶ್ರೀ ಮರಿಯಪ್ಪನವರು ಮತ್ತು ವೀರಣ್ಣ ಗೌಡರು, ನೂರು ಪಲ್ಲದಲ್ಲಿ ಮುಕ್ಕಾಲು ಭಾಗ ಕೊಡಿ ಇನ್ನು ಕಾಲುಭಾಗ ಇಟ್ಟುಕೊಳ್ಳಿ ಎಂದು ಹೇಳುತ್ತಾರೆ. ಇದಕ್ಕೆ ಏನು ಆಧಾರ!

ಇನ್ನೊಂದು ವಿಷಯ ಮಂತ್ರಿಗಳು ಅಪ್ಪಣೆ ಕೊಟ್ಟರು. ಸಂಸ್ಥಾನದಲ್ಲಿ ಸ್ಟ್ಯಾಟುಟರಿ ರೇಷನಿಂಗ್ ಜಾರಿಯಲ್ಲಿರುವ ಕೋಲಾರ ಚಿನ್ನದಗಣಿ, ಬೆಂಗಳೂರು, ದಾವಣಗೆರೆ, ಈ ಮೂರು ಪ್ರದೇಶಗಳಿಗೆ ಆಹಾರವನ್ನು ಸರ್ಕಾರದವರು ಹಂಚುವ ಪದ್ಧತಿಯನ್ನನುಸರಿಸಿಕೊಂಡು ಬಂದಿದ್ದಾರೆ, ಬಾಕಿ ಕಡೆ ಈ ಪದ್ಧತಿ ಇಲ್ಲ ಎಂದು ಅವರು ಅಪ್ಪಣೆಕೊಟ್ಟರು. ಹೀಗೆ ಈ ಪ್ರದೇಶಗಳಿಗೆ ಒಂದು ವರ್ಷಕ್ಕೆ ಬೇಕಾಗುವಷ್ಟು ಧಾನ್ಯ ಸುಮಾರು 12 ಲಕ್ಷ ಪಲ್ಲ ಬತ್ತವೆಂತಲೂ ಎರಡು ಲಕ್ಷಪಲ್ಲ ಮಿಲೆಟ್ಸ್ ಎಂತಲೂ ಅವರು ಹೇಳಿದರು. ಇದನ್ನು ಸಂಸ್ಥಾನದಲ್ಲಿ ಶೇಖರಣೆ ಮಾಡಬೇಕು. ಹೊರಗಿನಿಂದ ತರಿಸತಕ್ಕ ಧಾನ್ಯಗಳ ಜೊತೆಗೆ ಇಷ್ಟನ್ನು ಇಲ್ಲಿ ಶೇಖರಣೆ ಮಾಡಬೇಕು ಎಂದು ಅಪ್ಪಣೆ ಕೊಡಿಸಿದ್ದಾರೆ. ಇದೊಂದು ಆಧಾರವಾಗಿ ಇಟ್ಟುಕೊಳ್ಳೋಣ. ಸರ್ಕಾರಕ್ಕೆ ಈ 12 ಲಕ್ಷ ಪಲ್ಲ ಭತ್ತ, ಎರಡು ಲಕ್ಷಪಲ್ಲ ರಾಗಿ, ಜೋಳ ಸಂಸ್ಥಾನದ ಸರ್‌ಪ್ಲಸ್ಸ್ ಹೋಲ್ಡರುಗಳಿಂದ ಬರಬೇಕಾಗುತ್ತದೆ. ಇದರ ಜೊತೆಗೆ ಹೊರಗಿನಿಂದ ತರಿಸಿಕೊಂಡು ಹಂಚಬೇಕಾಗುತ್ತದೆ. 12 ಲಕ್ಷ ಪಲ್ಲವನ್ನು ಕೊಡುವವರು ಎರಡೂವರೆ ಲಕ್ಷ ಜನ ಸರ್‌ಪ್ಲಸ್ ಹೋಲ್ಡರುಗಳಿರಬೇಕು. ಇದನ್ನು ಯಾವ ಆಧಾರದ ಮೇಲೆ ಹಾಕಿರುವುದು!

ಶ್ರೀ ಎಲ್. ಸಿದ್ದಪ್ಪ - ನೂರು ಪಲ್ಲಕ್ಕೆ ಎಪ್ಪತ್ತೈದು ಪಲ್ಲ ಕೊಡಬೇಕೆಂದು ಹೇಳಿದರಲ್ಲ ಅದೇ ಆಧಾರ.

ಶ್ರೀ ಡಿ. ದೇವರಾಜ ಅರಸ್. - ಇನ್ನೂ ಕಡಿಮೆ ಏಕೆ ಕೊಡಬಾರದು! ನೀವು 75 ಪಲ್ಲ ಕೊಡಬೇಕೆಂದು ಹೇಳಿದಿರಿ. ಲೆಕ್ಕಾಚಾರಚಾರ ಹಾಕಿ 12 ಲಕ್ಷ ಪಲ್ಲ ಬರಬೇಕಾದರೆ 75 ಪಲ್ಲ ಕೊಡಬೇಕೆಂದು ತೋರಿಸಿದರೆ ಒಪ್ಪೋಣ. ಆದರೆ ಹಾಗಿಲ್ಲದೆ ಇನ್ನೂ ಕಡಿಮೆ ಕೊಡಬೇಕಾದರೆ ಲೆಕ್ಕಾಚಾರದ ಪ್ರಕಾರ ಕಡಿಮೆ ತೆಗೆದುಕೊಳ್ಳಿ ತಮಗೆ 2 ಲಕ್ಷ ಪಲ್ಲ ಬೇಕಾಗಿರುವಾಗ ರಾಗಿ, ಜೋಳ, ಇವುಗಳನ್ನು ಶೇಕಡ 75 ಪಲ್ಲಗಳಂತೆ ವಸೂಲು ಮಾಡಬೇಕೆಂದು ಹೇಳಿದ್ದರ ಅರ್ಥವೇನೋ ನನಗೆ ಆಗುತ್ತಿಲ್ಲ. ಹಿಂದೆ 12 ಲಕ್ಷ ಪಲ್ಲಗಳನ್ನು ಒದಗಿಸಬೇಕಾಗಿದ್ದ ಕಾಲದಲ್ಲೇ 50 ಪಲ್ಲ ಕೂಡ ವಸೂಲು ಮಾಡಿಲ್ಲ. ತಮಗೆ ಬೇಕಾಗಿದ್ದನ್ನು ತಾವು ಶೇಕಡ 80ರಷ್ಟು ಬೇಕಾದರೂ ತೆಗೆದುಕೊಳ್ಳಿ, ತಮಗೆ ಕಿಲೋ 2 ಲಕ್ಷ ಪಲ್ಲವಲ್ಲ ಅದಕ್ಕೆ ಇನ್ನೂ ಹೆಚ್ಚಿಗೆ ಬೇಕಾದರೂ ತರಿಸಿಕೊಳ್ಳಿ. ತಮ್ಮ ಬಫರ್ ಸ್ಟಾಕ್ ಎಷ್ಟಿರಬೇಕೋ ಅಷ್ಟನ್ನೂ ಮಾಡಿಕೊಳ್ಳಿ; ಅದಕ್ಕೆ ನಾನು ಕೂಡದೆಂದು ಹೇಳುವುದಿಲ್ಲ. ತಾವು ವರ್ಷಾದ್ಯಂತವೂ ಎಲ್ಲಾ ಕಡೆಯೂ ಫೇರ್ ಪ್ರೈಸ್ ಡಿಪೋಗಳನ್ನು ತೆರೆಯಬೇಕಾದಂಥ ಅವಶ್ಯಕತೆ ಕೂಡ ತಮಗಿರುವುದಿಲ್ಲ. ಬೇರೆ ಕಡೆ ದವಸಧಾನ್ಯಗಳು ಸರಾಗವಾಗಿ ಸಿಕ್ಕುತ್ತಿರುವಾಗ ಯಾರು ತಾನೆ ನಿಮ್ಮ ಫೇರ್ ಪ್ರೈಸ್ ಡಿಪೋಗಳಿಗೆ ಬಂದು ಕೊಳ್ಳುತ್ತಾರೆ? ರೈತನಾದವನಂತೂ

ಖಂಡಿತ ನಿಮ್ಮ ಡಿಪೋಗಳಿಗೆ ಬರುವುದಿಲ್ಲ ಈ ಕಾರಣದಿಂದ ತಾವು ಎಲ್ಲಾ ಕಾಲದಲ್ಲೂ, ಎಲ್ಲ ಕಡೆಯೂ ಆಫೇರ್ ಪ್ರೈಸ್ ಡಿಪೋಗಳನ್ನು ತೆಗೆಯಬೇಕಾಗಿರುತ್ತದೆಂದು ಹೇಳುವುದಕ್ಕೆ ಅವಕಾಶವಿಲ್ಲ.

**Mr. CHAIRMAN.-** You have already taken 8 minutes. will you conclude it early!

**ಶ್ರೀ ಡಿ. ದೇವರಾಜ ಅರಸ್.-** If the chair kindly permits me another five minutes, I shall be able to finish my speech.

Mr. CHAIRMAN,- Yes

**ಶ್ರೀ ಡಿ. ದೇವರಾಜ ಅರಸ್.-** ಆದುದರಿಂದ ತಾವು ಇದನ್ನೇ ಒಂದು ಬೇಸಿಸ್ ಆಗಿ ಇಟ್ಟುಕೊಂಡು ಆ ಲೆಕ್ಕಾಚಾರದ ಪ್ರಕಾರವಾಗಿ, ಜೋಳವನ್ನು ವಸೂಲು ಮಾಡುವುದಕ್ಕೆ ಅವಕಾಶವಿರುವುದಿಲ್ಲ. ಈಗಾಗಲೇ ನನ್ನ ಮಾನ್ಯ ಮಿತ್ರರನೇಕರು ತಿಳಿಸಿರುವಂತೆ ಅನೇಕ ಕಡೆ ಖುಷ್ಕಿ ಬೆಳೆ ನಷ್ಟವಾಗಿದೆ. ಕೆಲವು ಕಡೆ 4-6 ಅಣೆ ಬೆಳೆ ಇದ್ದರೆ ಹೆಚ್ಚಾಯಿತು. ಅಥವಾ ತಾವು ಒಂದು ವೇಳೆ ನಾಲ್ಕಾಣೆ ಬೆಳೆಯಾಗಿರುವ ಕಡೆ ರೈತರು ಅರ್ಜಿ ಹಾಕಿಕೊಳ್ಳಬೇಕೆಂದು ಹೇಳುವುದಾದರೆ, ಅದು ಎಷ್ಟು ಜನರಿಗೆ ಸಾಧ್ಯವಾದೀತು? ಇದು ಬಹಳ ಕಷ್ಟತರಕ್ಕೆ ದಾರಿ ಹಾಕತಕ್ಕದ್ದಾಗಿದೆ, ತಾವೇನಾದರೂ ಒಂದು ಕನಿಷ್ಠ ಪರಿಮಿತಿಯನ್ನು ಗೊತ್ತು ಮಾಡಿ ಅಮಲ್ದಾರರುಗಳಿಗೆ ಈ 75 ಪಲ್ಲ ಧಾನ್ಯ ವಸೂಲಿಮಾಡಬೇಕೆಂದು ಹೇಳಿ ಕಡೆಗೆ 25 ಪಲ್ಲ ಸಹ ವಸೂಲಾಗದಂಥ ಕಷ್ಟ ನಿಷ್ಠೂರಗಳ ಪ್ರಮೇಯವನ್ನು ಮಾತ್ರ ತಂದೊಡ್ಡಬೇಡಿ ಎಂದು ನಾನು ಸರ್ಕಾರದವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಅಲ್ಲದೇ ತಾವು ರೈತರಿಗೆ ಬಿಟ್ಟುಕೊಡುವ ದವಸವನ್ನು ಸರ್ಕಾರದವರು ನಿಗದಿ ಮಾಡುವ ಧಾರಣೆಗೆ ಅತನು ಸಂಸ್ಥಾನದಲ್ಲಿ ಎಲ್ಲಿ ಬೇಕಾದರೂ ನಿರಾತಂಕವಾಗಿ ಮಾರಾಟಮಾಡಿಕೊಳ್ಳಲು ಅವಕಾಶ ಕೊಡಬೇಕು. ಹಾಗೆ ತಾವು ಸ್ಕೋಪನ್ನು ಕೊಡದೆ ಹೋದರೆ ಪುನಃ ಅದೇ ಬ್ಲಾಕ್ ಮಾರ್ಕೆಟ್ ರಗಳೆಗಳೂ ಪೋಲೀಸರಿಂದ ತೊಂದರೆ ಇತ್ಯಾದಿ ನಾನಾ ತೊಂದರೆಗಳುಂಟಾಗಲು ಅವಕಾಶವಾಗುತ್ತದೆ. ಆದ್ದರಿಂದ ತಾವು Free movement ಗೆ ಅವಕಾಶವನ್ನು ಕೊಡಬೇಕು.

ಇಲ್ಲಿಯತನಕ ಮಾತನಾಡಿರತಕ್ಕ ಸದಸ್ಯರಾರೂ ಈ ಧಾರಣೆ ಹೆಚ್ಚಿಸುವ ವಿಚಾರವಾಗಿ (ವಿರೋಧಾಭಿಪ್ರಾಯಗಳನ್ನು) ವ್ಯಕ್ತಪಡಿಸಿರುವುದಿಲ್ಲ. ಆದ ಕಾರಣ ನಾನು ಹೇಳಬೇಕಾಗಿರುವುದು ಇಷ್ಟೆ - ಈಗ ತಾವು ರೈತರಿಗೆ ಎಷ್ಟು ಪ್ರಮಾಣದಲ್ಲಿ ಭತ್ತಕ್ಕೆ ಬೆಲೆಗಳನ್ನು ಕೊಡುತಿದ್ದೀರೋ ಅದೇ ಪ್ರಮಾಣದಲ್ಲಿ ಬೆಲೆಯನ್ನು ತಾವು ಎಲ್ಲ ಧಾನ್ಯಕ್ಕೂ ಕೊಡಬೇಕೆಂದು ತಿಳಿಸುತ್ತೇನೆ. ಈಗ ತಾವು ಭತ್ತ ಒಂದನೇ ದರ್ಜೆಯದಕ್ಕೆ ಪಲ್ಲ ಒಂದಕ್ಕೆ 21ರೂ. ನಂತೆಯೇ, 2ನೇ ದರ್ಜೆಯದಕ್ಕೆ ಪಲ್ಲ ಒಂದಕ್ಕೆ 19 ರೂಪಾಯಿ ಪ್ರಕಾರವೂ ಕೊಡುತ್ತಿದ್ದೀರಿ. ಅದೇ ಪ್ರಕಾರ ರಾಗಿ, ಜೋಳಗಳಿಗೂ ಪಲ್ಲಕ್ಕೆ 25 ರೂಪಾಯಿಗಳಂತೆ ಧಾರಣೆ ಹೆಚ್ಚು ಕೊಡಬೇಕೆಂದು ತಿಳಿಸುತ್ತೇನೆ. ಈಗ ತಾವು ಪಲ್ಲ ರಾಗಿಗೆ 20 ರೂಪಾಯಿಗಳ ದರವನ್ನು ನಿಗದಿ ಮಾಡಿದ್ದೀರಿ. ಅದನ್ನು 25 ರೂಪಾಯಿಗಳಿಗೆ ಹೆಚ್ಚಿಸಬೇಕು ಎಂದು ಕೆಲವು ಮಾನ್ಯ ಸದಸ್ಯರು ಹೇಳಿದ್ದಾರೆ........

ಶ್ರೀ ಎಲ್. ಸಿದ್ದಪ್ಪ.- ನಮ್ಮ ಪಾರ್ಟಿಯವರು ಪಲ್ಲಕ್ಕೆ 30 ರೂಪಾಯಿಗಳಂತೆ ಕೊಡಬೇಕೆಂದು ತಿಳಿಸಿದ್ದಾರೆ.

ಶ್ರೀ ಡಿ. ದೇವರಾಜ ಅರಸ್.- ನನ್ನ ಸಲಹೆಯೂ ಕೂಡ ಕನಿಷ್ಠ ಪಕ್ಷ ಪಲ್ಲಕ್ಕೆ 25 ರೂಪಾಯಿಗಳು ಇರಬೇಕೆಂದು. ಸರ್ಕಾರದವರು ಒಂದನೇ ದರ್ಜೆ ಭತ್ತಕ್ಕೆ ಏನೊಂದು ಪರಮಾವಧಿ ಬೆಲೆಯನ್ನು ನಿರ್ಧರಿಸುತ್ತಾರೋ ಆ ಬೆಲೆಯನ್ನು ರಾಗಿ ಮತ್ತು ಜೋಳಕ್ಕೂ ಸಹ ನಿಗದಿಮಾಡಬೇಕೆಂದು ನಾನು ತಿಳಿಸುತ್ತೇನೆ. ಮಾನ್ಯ ಸದಸ್ಯರಲ್ಲಿ ಅನೇಕರಿಗೆ ಈ ಬಾರ್ಟರ್ ಸಿಸ್ಟಂ ಗೊತ್ತಿಲ್ಲದಿರಬಹುದು. ಆ ಪದ್ಧತಿ ಪ್ರಕಾರ ಗ್ರಾಮಾಂತರ ಪ್ರದೇಶಗಳಲ್ಲಿ ಈಗೂ ಒಂದು ಪಲ್ಲ ರಾಗಿಗೆ ಒಂದು ಪಲ್ಲ ಭತ್ತ ಸಿಕ್ಕುತ್ತಿದೆ. ಖುಷ್ಕಿ ಬೆಳೆ ತೆಗೆಯುವುದು ಎಷ್ಟು ಕಷ್ಟವಿದೆಯೆಂಬ ವಿಚಾರ ತಮಗೂ ಗೊತ್ತಿದೆ. ಅದನ್ನು ನಾನು ಪುನಃ ವಿಮರ್ಶೆ ಮಾಡುವ ಅಗತ್ಯವೇನೂ ಇಲ್ಲ. ಈ ಕಾರಣಗಳಿಂದ ನಾನು ಸರ್ಕಾರದವರು ಭತ್ತಕ್ಕೆ ಯಾವ ಪ್ರಮಾಣದ ಬೆಲೆ ಕೊಡುತ್ತಾರೋ ಅದೇ ಪ್ರಮಾಣದ ಬೆಲೆಯನ್ನು ರಾಗಿ, ಜೋಳಕ್ಕೂ ನಿರ್ಧಾರಮಾಡಬೇಕೆಂದು ತಿಳಿಸುತ್ತೇನೆ.

ಶ್ರೀ ಎಲ್. ಸಿದ್ಧಪ್ಪ.- ಹಾಗೆ ನಿಮ್ಮ ಹುಣಸೂರು ತಾಲ್ಲೂಕಿನಲ್ಲಿ ಇದ್ದರೂ ಇರಬಹುದು.

**Sri D. DEVARAJURS-.** Not only in Hunsur Taluk but through out Mysore Dictrict. I do not know about Shimoga District, The Hon'ble Member may kindly enlighten me on the matter. ಆದರೆ ಹೀಗೆ ರೇಟನ್ನು ಹೆಚ್ಚಿಸಿಕೊಡಬೇಕೆಂದು ಕೇಳುವಾಗ ಇದಕ್ಕೆ ಸರ್ಕಾರದವರು ಒಂದು ಅಡ್ಡಿಯನ್ನು ತಂದೊಡ್ಡಬಹುದು. ಅದೇನೆಂದರೆ, ಇದು ಕೇಂದ್ರ ಸರ್ಕಾರಕ್ಕೆ ಸಂಬಂಧಪಟ್ಟ ಪ್ರಶ್ನೆ, ಆದ್ದರಿಂದ ನಾವು ಇಲ್ಲಿ ಧಾರಣೆವಾಸಿಗಳನ್ನು, ಅವರ ಅನುಮತಿ ಪಡೆಯದೆ ಏಕ್‌ದಂ ಹೆಚ್ಚಿಸುವುದಕ್ಕೆ ಆಗುವುದಿಲ್ಲ ಎಂದು. ಅದಕ್ಕೆ ನಾನು ಸಲಹೆ (ಮಾಡುವುದಿಷ್ಟೆ;) ಈ ಅಸೆಂಬ್ಲಿಯ ಮಾನ್ಯ ಸದಸ್ಯರುಗಳೆಲ್ಲರೂ ಬಹಳ ಒತ್ತಾಯಮಾಡಿ ಒಂದು ನಿರ್ಣಯವನ್ನು ಮಾಡಿದ್ದೇ ಆದರೆ ನಾವು ಅದರಂತೆ ನಡೆಯಲೇಬೇಕಾಗಿದೆ ಅದಕ್ಕಾಗಿ ಧಾರಣೆ ಹೆಚ್ಚಿಸಲು ಅನುಮತಿ ಕೊಡಬೇಕೆಂದು ನಮ್ಮ ಸರ್ಕಾರದವರು ಕೇಂದ್ರ ಸರ್ಕಾರಕ್ಕೆ ಮನವಿಮಾಡಬಹುದು. ಈ ರೀತಿ ಒತ್ತಾಯ ಹಾಕತಕ್ಕದ್ದು ನ್ಯಾಯವಾಗಿದೆ. ಆ ಪ್ರಕಾರ ಅವರೂ ಕೂಡ ಇದಕ್ಕೆ ಒಪ್ಪಲೇಬೇಕಾಗಿದೆ. ಹಾಗೆ ಅವರು ಒಪ್ಪುತ್ತಾರೆಂದು ನಾನು ಹೇಳುವುದಕ್ಕೆ ಕಾರಣ ನಮ್ಮ ಅಕ್ಕಪಕ್ಕದ ನೆರೆ ಪ್ರಾಂತ್ಯಗಳಲ್ಲಿ ಅವರು ಭತ್ತದ ಧಾರಣೆಯನ್ನು ಪಲ್ಲಕ್ಕೆ 26,27,28 ರೂಪಾಯಿಗಳಿಗೆ ಹೆಚ್ಚಿಸಲು ಅನುಮತಿಯನ್ನು ನೀಡಿರುವಾಗ ಇಂದು ನಾವು ಕೇಳತಕ್ಕ ಸಂದರ್ಭದಲ್ಲಿ ಇದು ನ್ಯಾಯವಾಗಿಯೂ ಇದೆ, ಇದನ್ನು ಒಪ್ಪಲೇಬೇಕಾಗಿದೆ ಎಂಬುದನ್ನು ಅವರು ತಿಳಿದುಕೊಳ್ಳಲಾರರೇನು; ಅದಕ್ಕಾಗಿ ನಮ್ಮ ಸರ್ಕಾರಕ್ಕೆ ಈ ಮಾನ್ಯ ಸಭೆಯ ಸದಸ್ಯರೆಲ್ಲರೂ ಬೆಂಬಲನೀಡಬೇಕೆಂದೂ, ಈ ರೀತಿ ಒಂದು ನಿರ್ಣಯ ಮಾಡಿ, ಅದನ್ನು ಇಂಡಿಯಾ ಸರ್ಕಾರದವರ ಮುಂದಿಟ್ಟು, ನಮ್ಮ ಸರ್ಕಾರ ಧಾರಣೆವಾಸಿಗಳನ್ನು ಹೆಚ್ಚುಮಾಡಬೇಕೆಂದು ಸಲಹೆ ಮಾಡಿ ನನ್ನ ಭಾಷಣವನ್ನು ಮುಕ್ತಾಯಮಾಡುತ್ತೇನೆ.

# 3. ಮೈಸೂರು ಸಹಕಾರಿ ಸಂಸ್ಥೆಗಳ ತಿದ್ದುಪಡಿ ಮಸೂದೆ 1954

(23-10-1954)

ಶ್ರೀ ಡಿ. ದೇವರಾಜ್ ಅರಸ್(ಹುಣಸೂರು).- ಸ್ವಾಮಿ, ಈ ತಿದ್ದುಪಡಿ ಮಸೂದೆಯನ್ನು ತಂದಿರತಕ್ಕಂಥ ಮಾನ್ಯ ಸಚಿವರಾದ ಡಾ- ನಾಗನಗೌಡರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರು ಇಲ್ಲಿ ಮೈಸೂರು ದೇಶದ ಸಚಿವರಾಗುವುದಕ್ಕೆ ಮುಂಚೆ ಬಳ್ಳಾರಿ ಪ್ರಾಂತ್ಯದಲ್ಲಿ, ಮದರಾಸು ಪ್ರಾಂತ್ಯದಲ್ಲಿ ಈ ಕೋ-ಆಪರೇಟಿವ್ ಮೂವ್‌ಮೆಂಟ್ ಯಾವ ರೀತಿ ನಡೆಯುತ್ತಾ ಇದೆ, ಎಷ್ಟು ಮಟ್ಟಿಗೆ ಯಶಸ್ವಿಯಾಗಿದೆ ಎಂಬ ಅನುಭವವನ್ನು ಚೆನ್ನಾಗಿ ಪಡೆದಿದ್ದಾರೆ. ಆ ಅನುಭವದ ಜೊತೆಗೆ ನಮ್ಮ ಮೈಸೂರು ಸಂಸ್ಥಾನದಲ್ಲಿ ಈಗ ಕೆಲವು ದಿವಸಗಳಿಂದೀಚೆಗೆ ಸ್ವಲ್ಪ ಅನುಭವವನ್ನು ಪಡೆದು ಪ್ರಕೃತದಲ್ಲಿ ಇರತಕ್ಕ ಆಕ್ಟು ಇದ್ದ ಹಾಗೆಯೇ ಇದ್ದ ಪಕ್ಷದಲ್ಲಿ ಈ ಕೋ-ಆಪರೇಟೀವ್ ಸೊಸೈಟಿಗಳ ಮೂವ್‌ಮೆಂಟು ದೇಶದಲ್ಲಿ ಅಭಿವೃದ್ಧಿಗೆ ಅಡಚಣೆಗಳಿವೆ ಎಂಬುದನ್ನು ಚೆನ್ನಾಗಿ ಮನಗಂಡು, ಕೆಲವು ತಿದ್ದುಪಾಟುಗಳು ಈ ಸೊಸೈಟಿಗಳ ಅಭಿವೃದ್ಧಿ ದೃಷ್ಟಿಯಿಂದ ತುಂಬಾ ಅವಶ್ಯಕ ಎಂಬುದನ್ನು ತಿಳಿದು ಈ ತಿದ್ದುಪಟುಗಳನ್ನು ತಂದಿದ್ದಾರೆ. ಮಾನ್ಯ ಸ್ನೇಹಿತರನೇಕರು ಈ ತಿದ್ದುಪಾಟುಗಳು ಅನಾವಶ್ಯಕ, ಅನ್‌ಡೆಮೋಕ್ರಾಟಿಕ್ಕು ಇತ್ಯಾದಿ, ಇತ್ಯಾದಿ ಕೆಲವು ಟೀಕೆಗಳನ್ನು ಮಾಡಿದಂಥ ಮಾನ್ಯ ಸದಸ್ಯರು ಶ್ರೀಮಾನ್ ಶ್ರೀನಿವಾಸ ಅಯ್ಯಂಗಾರ್‌ರವರು ಮಾತನಾಡಿದಂಥ ಕಾಲದಲ್ಲಿ ನಾನು ಇರಲಿಲ್ಲ. ಶ್ರೀಮಾನ್ ಶ್ರೀನಿವಾಸ ಅಯ್ಯಂಗಾರ್‌ರವರಂಥ ಅನುಭವಸ್ಥರು ಇಂಥಾ ಸರ್ವರಿಗೂ ಉಪಯುಕ್ತವಾದ ತಿದ್ದುಪಡಿಯನ್ನು ತಂದಿರತಕ್ಕ ಕಾಲದಲ್ಲಿ ಏಕೆ ತೀವ್ರವಾಗಿ ಇಷ್ಟು ವಿರೋಧಿ ಮಾಡಿದರು ಅನ್ನುವುದೇ ನನಗೆ ಆಶ್ಚರ್ಯ. ಕೋ-ಆಪರೇಟಿವ್ ಮೂವ್‌ಮೆಂಟು ಕೆಲವಾರು ವರ್ಷಗಳಿಂದೀಚೆಗೆ ಎಲ್ಲಾ ತಾಲ್ಲೂಕುಗಳಲ್ಲಿ, ಎಲ್ಲಾ ಹೋಬಳಿಗಳನ್ನೂ ಒಳಗೊಂಡಿದೆ. ತಮಗೇ ಗೊತ್ತಿರುವ ಹಾಗೆ, ಸ್ವಾಮಿ, ಪ್ರತಿ ತಾಲ್ಲೂಕಿನಲ್ಲೂ ಒಂದು ತಾಲ್ಲೂಕು ಮಲ್ಟಿಪರ್‌ಪಸ್ ಸೊಸೈಟಿಯನ್ನು ಸ್ಥಾಪನೆ ಮಾಡಿದರು. ಅದರ ಅನುಭವದ ಮೇಲೆ ಪ್ರತಿ ಹೋಬಳಿ, ಸರ್ಕ್ಯಲ್‌ನಲ್ಲೂ ಕೂಡ ಸರ್ಕ್ಯಲ್ ಸೊಸೈಟಿಗಳು ಸ್ಥಾಪನೆ ಆದವು. ಹಾಗೆ ಸಾವಿರಾರು ಕೋ-ಆಪರೇಟೀವ್ ಸೊಸೈಟಿಗಳು ಕೆಲವಾರು ವರ್ಷಗಳಿಂದೀಚೆಗೆ ನಮ್ಮ ಸಂಸ್ಥಾನದಲ್ಲಿ ಸ್ಥಾಪನೆ ಆಗಿ ಕೆಲವೇ ವರ್ಷಗಳಲ್ಲಿ ಆ ಸಂಸ್ಥೆಗಳಲ್ಲಿ ಜನರಿಗೆ ಇದ್ದಂಥ ನಂಬಿಕೆ ಸಂಪೂರ್ಣವಾಗಿ ಹಾಳಾಗುವುದಕ್ಕೆ ಅವಕಾಶ ಉಂಟಾಗಿದೆ, ಸೊಸೈಟಿಗಳನ್ನು ಸ್ಥಾಪನೆ ಮಾಡುವ ಕಾಲದಲ್ಲಿ ಹಿನ್ನೆಲೆ ಏನು ಎಂಬುದನ್ನೂ ಕೂಡ ನಾವು ಈ ಸಂದರ್ಭಗಳಲ್ಲಿ ಸ್ವಲ್ಪ ಸ್ಮರಿಸಿಕೊಳ್ಳಬೇಕಾದ ಅವಶ್ಯಕತೆ ಇದೆ ಎಂದು ನಾನು ಭಾವಿಸುತ್ತೇನೆ. ಸೊಸೈಟಿಗಳು ಎಲ್ಲಾ ಕಡೆಯೂ ಸ್ಥಾಪಿತವಾಗಬೇಕು ಎಂಬ ದೃಷ್ಟಿಯಿಂದ ಮತ್ತು ಕಂಟ್ರೋಲ್ ಇದ್ದಂಥ ಕಾಲದಲ್ಲಿ ಹಳ್ಳಿಗಳೆಲ್ಲಕ್ಕೂ ಸೊಸೈಟಿಗಳ ಮೂಲಕ ರೇಷನ್ ಹಂಚಿಕೆ ಆಗಬೇಕು ಎಂಬ ದೃಷ್ಟಿಯಿಂದ ಈ ಮಲ್ಟಿಪರ್‌ಪಸ್ ಕೋ-ಆಪರೇಟೀವ್ ಸೊಸೈಟಿಗಳನ್ನು ಎಲ್ಲಾ ಕಡೆಯೂ ಸ್ಥಾಪನೆ ಮಾಡಿದರು. ಸ್ಥಾಪನೆ ಮಾಡುವ ಕಾಲದಲ್ಲಿ ಸ್ಥಳದ ಮುಖಂಡರು, ಸ್ಥಳದ ಅಧಿಕಾರಿಗಳು ಎಲ್ಲರೂ ಸೇರಿ, ಇಂಥ ಸೊಸೈಟಿಗಳ ಅವಶ್ಯಕತೆ ಇದೆ, ಇದನ್ನು ನಾವು ಸ್ಥಾಪನೆ ಮಾಡಬೇಕು, ಜನರೆಲ್ಲರೂ ಇದಕ್ಕೆ ಸಹಾಯ ಮಾಡಬೇಕು, ಷೇರುದಾರರಾಗಬೇಕು ಎಂದು ಹೇಳಿ ಬಲವಾದ

ಪ್ರಾಪಗ್ಯಾಂಡಾ ನಡೆಸಿ ಈ ಸಂಸ್ಥೆಗಳಿಗೆ ಜನರೆಲ್ಲರೂ ಷೇರುದಾರರಾಗುವುದಕ್ಕೆ ಸಹಾಯಮಾಡಿದರು. ಆಗ ಈ ಸೊಸೈಟಿಗಳಿಗೆ ಪುರೋಭಿವೃದ್ಧಿ ಚೆನ್ನಾಗಿ ಆಗುತ್ತದೆ, ನಾವು ಈ ಸೊಸೈಟಿಗೆ ಷೇರುದಾರರಾದ ಪಕ್ಷದಲ್ಲಿ ಈ ಸೊಸೈಟಿಗಳ ಮೂಲಕವೇ ನಮಗೆ ಬೇಕಾದಂಥ ಸಾಮಾನುಗಳನ್ನು ಒದಗಿಸಲ್ಪಡುತ್ತವೆ, ಆದ್ದರಿಂದ ತುಂಬಾ ಅನುಕೂಲತೆ ಇದೆ ಎಂದು ಹೇಳಿ ಆಗ ಜನಗಳಿಗೆ ಭರವಸೆ ಕೊಟ್ಟಿದ್ದಾಯಿತು. ಈಗಿನ ಪರಿಸ್ಥಿತಿ ಏನಾಗಿದೆ ಎಂದರೆ, ಕಂಟ್ರೋಲ್ ಇರುವವರೆಗೂ, ಸರ್ಕಾರದವರು ಕಂಟ್ರೋಲ್‌ಡ್ ಕಮಾಡಿಟೀಸ್ ಎಲ್ಲವನ್ನು ಕೂಡ ಈ ಸೊಸೈಟಿಗಳ ಮೂಲಕ ಹಂಚಿಕೆ ಮಾಡುತ್ತಾ ಇದ್ದವರೆಗೂ ಹೇಗೋ ಈ ಸೊಸೈಟಿಗಳು ನಡೆದುಕೊಂಡು ಬಂದವು. ಇತ್ತೀಚಿಗೆ ಕಂಟ್ರೋಲ್ ವಜಾ ಆದ ಮೇಲೆ ಈ ಸಾಮಾನುಗಳನ್ನು ಸೊಸೈಟಿಯವರು ತಾವೇ ತೆಗೆದುಕೊಂಡು ಬಂದು ಮಾರಾಟ ಮಾಡುವುದಕ್ಕೆ ಬಂಡವಾಳವಿಲ್ಲದೆ ಈ ಸೊಸೈಟಿಗಳೆಲ್ಲಾ ಕ್ಷೀಣ ಸ್ಥಿತಿಗೆ ಬರುವುದಕ್ಕೆ ಒಂದು ಕಾರಣವಾಯಿತು. ಜೊತೆಗೆ ಈ ಸೊಸೈಟಿಗೆ ಸೆಕ್ರೆಟರಿ, ಪ್ರೆಸಿಡೆಂಟ್‌ರವರು ಮತ್ತು ಡೈರೆಕ್ಟರ್‌ಗಳು ಇದ್ದಾರೆಯಲ್ಲಾ ಅವರುಗಳು ಮೊದಲೇನೋ ಚುನಾವಣೆಯಿಂದ ಅಧಿಕಾರ ವರ್ಗಕ್ಕೆ ಬಂದಿದ್ದರೂ ಕೂಡ ಅನೇಕ ವರ್ಷಗಳಿಂದಲೂ ಅವರೇ ಅಲ್ಲಿ ಮನೆ ಮಾಡಿಕೊಂಡುಬಿಟ್ಟಿದ್ದಾರೆ. ಈ ರೀತಿಯಾಗಿ ಬೇರೂರಿಕೊಂಡು ಆ ಸೊಸೈಟಿಯಲ್ಲಿ ಅನೇಕ ವಿಧವಾದಂಥ ಅವ್ಯವಸ್ಥೆಗೆ ಕಾರಣರಾಗಿದ್ದಾರೆ, ಎಷ್ಟೋ ಕಡೆ Misappropriation ಕೂಡ ಆಗಿದೆ. ಸ್ವಾಮಿ, ಹೀಗೆ ಅವ್ಯವಸ್ಥೆಯಾಗಿ ಈ ಹಳ್ಳಿಯಲ್ಲಿರತಕ್ಕ ಷೇರುದಾರರು ಏನು ಹೇಳುತ್ತಾ ಇದ್ದಾರೆಂದರೆ; "ಸ್ವಾಮಿ, ನಮಗೆ ಲಾಭ ಇಲ್ಲದೆ ಇದ್ದರೂ ಪರವಾಗಿಲ್ಲ, ನಾವು ಷೇರುದುಡ್ಡು ಕೊಟ್ಟಿದ್ದೇವಲ್ಲಾ ಅದನ್ನು ಕೊಡಿಸುವುದಕ್ಕೆ ಏನಾದರೂ ಸಾಧ್ಯವೇ" ಎಂದು ಕೇಳುತ್ತಿದ್ದಾರೆ. ಆ ಷೇರು ದುಡ್ಡು ಕೊಡಬೇಕಾದರೆ ಜನರಲ್ ಬಾಡಿ ಮೀಟಿಂಗ್ ಮಾಡಿ, ಆ ಮೀಟಿಂಗ್‌ನಲ್ಲಿ, ಅವ್ಯವಸ್ಥೆಯೋ, ವ್ಯವಸ್ಥೆಯೋ, ಅದನ್ನೆಲ್ಲಾ ಕೂಲಂಕುಷವಾಗಿ ಪರಿಶೀಲನೆಮಾಡಿ ದುಡ್ಡು ತಿಂದುಹಾಕಿದ್ದಾರೆಯೇ, ಷೇರುದುಡ್ಡು ಇದೆಯೇ ಇಲ್ಲವೇ, ಇದನ್ನೆಲ್ಲಾ ಕಂಡುಹಿಡಿದು ಆಮೇಲೆ ಅವರ ಷೇರು ಹಣ ಕೊಡುವುದನ್ನೋ ಬಿಡುವುದನ್ನೋ ತೀರ್ಮಾನ ಮಾಡಬೇಕು, ಅವರಿಗೆ ಇಷ್ಟೆಲ್ಲಾ ಗೊತ್ತಾಗುವುದಿಲ್ಲ, ಅಂತೂ ನಮಗೆ ದುಡ್ಡು ಕೊಡಿಸಿ ಎಂದು ಒಂದು ಮಾತ್ರ ಹೇಳುತ್ತಾರೆ. ಒಂದು ವೇಳೆ ವ್ಯವಸ್ಥಿತವಾಗಿ ಸೊಸೈಟಿ ನಡೆಯದೇ ಹೋದ ಪಕ್ಷದಲ್ಲಿ ಅದನ್ನು ಮುಚ್ಚಿ ಅದಕ್ಕೆ ಬದಲಾಗಿ, ಇನ್ನಾವುದಾದರೂ ಧರ್ಮಕಾರ್ಯಕ್ಕಾದರೂ ಹಣ ಕೊಡಿ ಎಂದು ಕೇಳುತ್ತಾ ಇದ್ದಾರೆ. ಆದರೆ, ಯಾವುದನ್ನು ಮಾಡುವುದಕ್ಕೂ ರಿಜಿಸ್ಟ್ರಾರ್‌ರವರನ್ನು ಕೇಳಬೇಕು. 'ಅನೇಕ ಸೊಸೈಟಿಗಳು ಹಾಳಾಗುತ್ತಾ ಇದೆಯಲ್ಲಾ ನೀವು ಕಾರ್ಯಕ್ರಮ ತೆಗೆದುಕೊಳ್ಳಬಾರದೆ" ಎಂದು ಕೇಳಿದರೆ, ಅವರು 'ಕಾನೂನುಪ್ರಕಾರ ನಾವು ನೇರವಾಗಿ,quick ಆಗಿ, ಕಾರ್ಯಕ್ರಮ ತೆಗೆದು ಕೊಳ್ಳುವುದಕ್ಕೆ ನಮಗೆ ಸಾಧ್ಯವಿಲ್ಲ; ಕಾನೂನಿನಲ್ಲಿ ತಮಗೆ ಹೆಚ್ಚಿನ ಅಧಿಕಾರವಿಲ್ಲದೇ ಇರುವುದರಿಂದ ತುಂಬಾ ಕಷ್ಟವಾಗಿದೆ, ಏನು ಮಾಡುವುದಕ್ಕೂ ಸಾಧ್ಯವಾಗುತ್ತಾ ಇಲ್ಲ' ಎಂದು ಒಂದು ಕಡೆ ತಮ್ಮ inability plead ಮಾಡುತ್ತಾ ಇದ್ದಾರೆ. ಇಂಥ ಒಂದು ಸಂದಿಗ್ಧ ಪರಿಸ್ಥಿತಿಯೊಳಗೆ ಈ ಸೊಸೈಟಿಗಳು ನಮ್ಮ ದೇಶದಲ್ಲಿವೆ. ಇವೆಲ್ಲವನ್ನೂ ಅನುಭವ ಮಾಡಿ ಈ ಅನುಭವದ ಪರಿಣಾಮವಾಗಿಯೇ ಈ ತಿದ್ದುಪಡಿ ತಂದಿರತಕ್ಕಂತಾಗಿದ್ದು. ಇದನ್ನು ಅನ್‌ಡೆಮೋಕ್ರಾಟಿಕ್, ಕೂಡದು ಎಂದು ಹೇಳುತ್ತಾರೆ! ಸ್ವಾಮಿ ಡೆಮಾಕ್ರೆಸಿಗೆ ಒಂದು ರಕ್ಷಣೆಯನ್ನುಂಟುಮಾಡತಕ್ಕಂಥ ಈ ಸೊಸೈಟಿಗಳು ಸುವ್ಯವಸ್ಥಿತವಾಗಿ ನಡೆಯುವುದಕ್ಕೆ ಕಾನೂನನ್ನು

ಮಾಡಿದರೆ ಇದು ಅನ್‌ಡೆಮೋಕ್ರಾಟಿಕ್ ಎಂದು ಯಾರಾದರೂ ಭಾವಿಸಿದರೆ ಅದೇಕೆ ಆ ರೀತಿ ಭಾವಿಸುತ್ತಾರೋ ನಮಗೆ ಅರ್ಥವಾಗುವುದಿಲ್ಲ. ನಮ್ಮ ಸ್ಥಳದಲ್ಲೇನೇ ಅನೇಕ ಸೊಸೈಟಿಗಳು ಹೀನಸ್ಥಿತಿಯಲ್ಲಿವೆ. ನಾವು ಎಷ್ಟೋ ಸಲ ರಿಜಿಸ್ಟ್ರಾರ್‌ರವರಿಗೆ ದೂರು ಕೊಟ್ಟರೂ ಕೂಡ ಅವರು ತಾವೇನು ಮಾಡುವುದಕ್ಕೂ ಸಾಧ್ಯವಿಲ್ಲ ಎಂದು ಹಿಂದು ಮುಂದೆ ನೋಡುತ್ತಿದ್ದಾರೆ; ಒದ್ದಾಡುತ್ತಿದ್ದಾರೆ. ಸೊಸೈಟಿಗಳು ಸುವ್ಯವಸ್ಥಿತವಾಗಿ ನಡೆಯುವುದಕ್ಕೆ ಜನಗಳಲ್ಲಿ ಒಂದು ವಿಧವಾದ ನಂಬಿಕೆಯುಂಟಾಗುವುದಕ್ಕೆ ಜರೂರಾಗಿ ಕೆಲವು ಕಾರ್ಯಗಳನ್ನು ಕೈಗೊಳ್ಳಬೇಕಾದದ್ದು ತೀರ ಅವಶ್ಯಕವಾಗಿತ್ತು. ಮುಖ್ಯವಾಗಿ "ಉದ್ದೇಶಗಳು ಮತ್ತು ಕಾರಣಗಳು ವಿವರ"ದಲ್ಲಿ ಕೆಲವು ಮಾತನ್ನು ಹೇಳಿದ್ದಾರೆ. ಏನೆಂದರೆ, ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾದವರು ಷಾರ್ಟ್ ಟರ್ಮ್‌ಲೋನ್ಸ್ ಕೊಡುವುದಕ್ಕೆ ಸಾಲವನ್ನು ಕೊಡಲು ಒಪ್ಪಿದ್ದಾರ, ಅದನ್ನು ನಾವು ಉಪಯೋಗಿಸಿಕೊಳ್ಳಬೇಕು ಮತ್ತು ಇನ್ನು ಮೇಲೆ ಎಲ್ಲಾ ಕಡೆಯೂ ವ್ಯವಸಾಯಗಾರರಿಗೆ ಷಾರ್ಟ್‌ಟರ್ಮ್ ಸಾಲ ಸಿಕ್ಕುವುದಕ್ಕೆ ನಾವು ಸೊಸೈಟಿಗಳನ್ನು ತೆರೆಯಬೇಕು ಎಂದು ಹೇಳಿದ್ದಾರೆ. ಈ ರೀತಿಯಾಗಿ ವ್ಯವಸಾಯಗಾರರಿಗೆ ಷಾರ್ಟ್‌ಟರ್ಮ್ ಕ್ರೆಡಿಟ್ ಸಿಕ್ಕುವ ವ್ಯವಸ್ಥೆ ಮಾಡುತ್ತಿರುವುದು ಇದೇ ಮೊದಲು. ಇದುವರೆಗೆ ಅಡಮಾನದ ಬ್ಯಾಂಕುಗಳು ಎಲ್ಲಾ ಕಡೆಯೂ ಕೆಲಸ ಮಾಡುತ್ತಿದ್ದುವು. ಆ ಬ್ಯಾಂಕುಗಳಲ್ಲಿ ಷಾರ್ಟ್ ಟರ್ಮ್‌ಸಾಲ ಕೊಡುವ ವ್ಯವಸ್ಥೆ ಇರಲಿಲ್ಲ ಯಾವನಾದರೂ ಒಬ್ಬ ಮನುಷ್ಯ ಈ ಬ್ಯಾಂಕಿನಿಂದ ಸಾಲ ಪಡೆಯಬೇಕಾದರೆ ಆತ ಹಿಂದೆ ಸಾಲ ಮಾಡಿರಬೇಕು. ಆ ರೀತಿ ಹಿಂದೆ ಸಾಲ ಮಾಡಿದ ಸಾಲವನ್ನು ತೀರಿಸುವುದಕ್ಕೆ ಸಾಲ ಪಡೆಯಲು ಅವಕಾಶವಿತ್ತು. ಅಷ್ಟು ವಿನಾ ಷಾರ್ಟ್ ಟರ್ಮ್ ಕ್ರೆಡಿಟ್ ಅಂದರೆ ನಾಳೆ ವ್ಯವಸಾಯಕ್ಕೆ ದುಡ್ಡು ಬೇಕಾದರೆ, ಖರ್ಚಿಗೆ ಆರು ತಿಂಗಳವರೆಗೆ ಅಥವಾ ಒಂದು ವರ್ಷದ ಅವಧಿಯಲ್ಲಿ ಸಾಲ ಪಡೆಯಬೇಕಾಗಿದ್ದರೆ, ಆಗ ರೈತರಿಗೆ ಸಾಲ ಪಡೆಯುವುದಕ್ಕೆ ಯಾವ ವಿಧವಾದ ಬ್ಯಾಂಕಿನ ವ್ಯವಸ್ಥೆಯೂ ಇರಲಿಲ್ಲ. ಈಗ ಷಾರ್ಟ್ ಟರ್ಮ್ ಸಾಲ ರೈತರಿಗೆ ಸಿಕ್ಕುವುದಕ್ಕೆ ಆ ರೀತಿಯಾದ ಒಂದು ವ್ಯವಸ್ಥೆಯನ್ನು ಸರ್ಕಾರದವರು ಮಾಡಬೇಕೆಂದು ಪ್ರಯತ್ನಮಾಡಿದ್ದಾರೆ. ಇದಕ್ಕೆ ರಿಸರ್ವ್ ಬ್ಯಾಂಕಿನವರೂ ಕೂಡ ಸಾಲ ಕೊಡುವುದಕ್ಕೆ ಒಪ್ಪಿದ್ದಾರೆ. ಈ ಷಾರ್ಟ್ ಟರ್ಮ್ ಸಾಲಗಳನ್ನು ಕೊಡುವಾಗ ಈ ಸಾಲ ಸಲೀಸಾಗಿ ರೈತರಿಂದ ಹಿಂದಕ್ಕೆ ಸಕಾಲದಲ್ಲಿ ಪಾವತಿಯಾಗತಕ್ಕದ್ದು ಕೂಡ ತೀರ ಅವಶ್ಯಕವಾಗಿದೆ. ಹೀಗೆ ಸಕಾಲದಲ್ಲಿ ಪಾವತಿಯಾಗದೆ ಈಗ ಮಾನ್ಯ ಸಭೆಗೆ ಗೊತ್ತಿರುವ ಹಾಗೆ ಅಡಮಾನದ ಬ್ಯಾಂಕುಗಳಲ್ಲಿ ಯಾವ ರೀತಿಯಾಗಿ ಲಕ್ಷಾಂತರ ರೂಪಾಯಿಗಳನ್ನು ಕೊಟ್ಟು ಸಾಲ ಹಿಂದಕ್ಕೆ ಬಾರದೆ ಅಥವಾ ಬ್ಯಾಡ್ ಡೆಟ್ ಎಂದು ರೈಟ್ ಆಫ್ ಮಾಡುವುದು ಅಥವಾ ಯಾವ ಕ್ರಮ ತೆಗೆದುಕೊಳ್ಳುವುದಕ್ಕೂ ಆಗದೆ ಸುಮ್ಮನೆ ಬಿಟ್ಟುಕೊಂಡು ಬಂದಿರುವಂಥ ಒಂದು ದೊಡ್ಡ ಅವ್ಯವಸ್ಥೆ ಈಗಿರುವುದು ಮುಂದುವರಿದರೆ, ಸೊಸೈಟಿಗಳಲ್ಲಿ ಅಥವಾ ಬ್ಯಾಂಕುಗಳಲ್ಲಿ ಈ ಅವಸ್ಥೆಯಾದರೆ ಈ ಸಾಲ ದೊರೆಯುವುದು ಕೂಡ ನಿಲ್ಲುತ್ತದೆ. ಈ ಮಾತನ್ನು ಉದ್ದೇಶಗಳು ಮತ್ತು ಕಾರಣಗಳ ವಿವರದಲ್ಲಿ ನಮೂದು ಮಾಡಿದ್ದಾರೆ.

"In the event of default, the Reserve Bank stops further credit to the constituency concerned and heavy penalties are imposed for each day's delay in clearing the outstandings.

ಎಂದು ಹೇಳಿದೆ. ಈ ರೀತಿಯಾದ ಒಂದು ಅಪಘಾತವಿದೆ ಸ್ವಾಮಿ, ಹಳ್ಳಿಯಲ್ಲಿ ಒಂದು ಗಾದೆಯಿದೆ. ಯಾರನ್ನಾದರೂ ಹಾಳುಮಾಡಿ ಕೆಡಿಸಬೇಕು ಎಂದು ಒಬ್ಬ ಬಡವನ ಮೇಲೆ ಕಣ್ಣಿಟ್ಟರೆ, ಅವನಿಗೆ ಸಾಲ ಕೊಟ್ಟು ಅನೇಕ ವರ್ಷಗಳವರೆಗೆ ಕೇಳದೆ ಸುಮ್ಮನಿದ್ದರೆ ಅವನನ್ನು ಹಾಳು ಮಾಡುವುದಕ್ಕೆ ಅದು ಬಹಳ ಸುಲಭವಾದ ಮಾರ್ಗ. ಏಕೆಂದರೆ ವರ್ಷ ವರ್ಷ ಬರುವ ಬಡ್ಡಿಯನ್ನು ವಸೂಲು ಮಾಡದೇ ಹತ್ತಾರು ವರ್ಷಗಳು ಸುಮ್ಮನೆ ಬಿಡುವುದು, ಆ ಬಡ್ಡಿ ಬೆಳೆದು ಒಟ್ಟಿಗೆ ಸೇರಿ ಸಾವಿರ ರೂಪಾಯಿಗಳವರೆಗೆ ಅಕ್ಯೂಮಲೇಟ್ ಆದಾಗ ದಾವಾ ವಗೈರೆ ನಡೆಸಿ ಅವನ ಆಸ್ತಿ ಬರಮಾಡಿಕೊಳ್ಳುವುದಕ್ಕೆ ಒಂದು ಮಾರ್ಗ ಎಂದು ಅನೇಕರು ಒಂದು ಬುದ್ಧಿವಂತಿಕೆಯನ್ನು ಕಂಡು ಹಿಡಿದು ಅನೇಕರ ಮನೆಮಠಗಳನ್ನು ವಶಪಡಿಸಿಕೊಂಡಿದ್ದಾರೆ. ಹೀಗೆ ನಾವು ಷಾರ್ಟ್‌ಟರ್ಮ್ ಸಾಲವನ್ನಾಗಲಿ ಅಥವಾ ಲಾಂಗ್ ಟರ್ಮ್ ಸಾಲವನ್ನಾಗಲಿ ಕೊಟ್ಟು ವಸೂಲು ಮಾಡುವುದನ್ನು ಸಾವಧಾನವಾಗಿ ಮಾಡುವುದರಿಂದ ಅಥವಾ ಸರಿಯಾದ ರೀತಿಯಲ್ಲಿ ಜಾಗ್ರತೆ ಬರಮಾಡಿಕೊಳ್ಳದೆ ಉದಾಸೀನ ಮಾಡುವುದರಿಂದ ಜನರಿಗೆ ಉಪಕಾರ ಮಾಡಿದ ಹಾಗಾಗುವುದಿಲ್ಲ. ಅದರಿಂದ ಉತ್ತರೋತ್ತರ ಸಾಲ ತೆಗೆದುಕೊಂಡವರಿಗೆ ತೊಂದರೆಗಳು ಜಾಸ್ತಿಯಾಗುತ್ತವೆ ಎಂದು ನಾನು ತಿಳಿದುಕೊಂಡಿದ್ದೇನೆ. ಆಕಾರಣ ಈ ರೀತಿಯಾದ ಸ್ಟ್ರಿಂಜೆಂಟ್ ಮೆಷರ್ಸ್ ಇದ್ದರೇನೇ ಈ ಷಾರ್ಟ್‌ಟರ್ಮ್ ಸಾಲಗಳು ಸಲೀಸಾಗಿ ಹಳ್ಳಿಗಳಿಂದ ಬರುವುದಕ್ಕೆ ಅವಕಾಶವಾಗುತ್ತದೆ. ಇಂಥ ಅವಕಾಶಗಳನ್ನು ಕಲ್ಪಿಸಿ ಕೊಡುವುದರಲ್ಲಿ ನಾವು ತೀರ ಆಸಕ್ತಿಯುಳ್ಳವರಾಗಿರಬೇಕು ಎಂದು ಭಾವಿಸುತ್ತೇನೆ.

ಎಂಟನೆಯ ಸೆಕ್ಷನ್ ತಿದ್ದುಪಡಿಯು ಬಹಳ ಸಾಧುವಾದುದೆಂದು ತಿಳಿಯುತ್ತೇನೆ. ಒಂದೇ ಕಡೆ ಇರತಕ್ಕಂಥ ಹಳ್ಳಿಗಳ ಗ್ರೂಪಿನ ನಿವಾಸಿಗಳು ಆಯಾ ಸ್ಥಳದ ಬ್ಯಾಂಕಿನ ಮೆಂಬರುಗಳಾಗಲು ಅರ್ಹತೆಯುಳ್ಳವರಾಗುತ್ತಾರೆ, ಇತರರು ಯಾರಾದರೂ ಆ ಸೊಸೈಟಿ ಅಥವಾ ಬ್ಯಾಂಕಿನ ಮೆಂಬರಾಗಬೇಕಾದರೆ ರಿಜಿಸ್ಟ್ರಾರ್‌ರವರು ಅಪ್ಪಣೆ ಮಾಡಬೇಕು ಎಂದು ಕೆಲವು ನಿಬಂಧನೆಗಳನ್ನು ಇಲ್ಲಿ ಹೊಸದಾಗಿ ನಮೂದಿಸಿದ್ದಾರೆ. ಇದು ತುಂಬ ಸಾಧುವಾದದ್ದು. ಏಕೆಂದರೆ ನಾಲ್ಕಾರು ಹಳ್ಳಿಗಳಿಗೆ ಸಂಬಂಧಪಟ್ಟ ಹಾಗೆ ಒಂದು ಷಾರ್ಟ್‌ಟರ್ಮ್‌ಸಾಲ ಕೊಡುವ ಸೊಸೈಟಿ ಸ್ಥಾಪಿಸಿದ್ದೇ ಆದರೆ ಅಲ್ಲಿ ಸುಲಭ ದರದಲ್ಲಿ ಕೂಡಲೇ ಸಾಲ ಸಿಕ್ಕುತ್ತದೆಂದು ವ್ಯವಸಾಯಗಾರರಲ್ಲದಿರುವವರೂ ಸದಸ್ಯರಾಗಿ ಆ ಸೊಸೈಟಿಯ ಅನುಕೂಲತೆ ಪಡೆದು ದುಡ್ಡನ್ನು ದುರುಪಯೋಗಪಡಿಸಿಕೊಳ್ಳುವುದಕ್ಕೆ ಅವಕಾಶವಿರುತ್ತದೆ. ಈ ಅವಕಾಶವನ್ನು ಖಂಡಿತವಾಗಿಯೂ ತಪ್ಪಿಸಬೇಕು. ನಮ್ಮ ಯಾವ ಒಂದು ಉದ್ದೇಶ ಇದುವರೆಗೆ ಯಾವ ಸಹಾಯವೂ ಇಲ್ಲದೇನೆ ನೇರವಾಗಿ ಸುಲಭ ದರದಲ್ಲಿ ತಕ್ಷಣವೇ ಸಾಲ ಬೇಕಾದರೆ ಸಿಕ್ಕದೇನೆ ತುಂಬ ದುಡ್ಡಿರುವವರ ಹಿಡಿತಕ್ಕೆ ಸಿಕ್ಕಿ ಅನೇಕ ಸಂದರ್ಭದಲ್ಲಿ ಕಷ್ಟಪಟ್ಟಿರುವ ರೈತರಿಗೆ ಈ ದಿವಸ ಇಂಥ ಸಾಲವನ್ನು ಷಾರ್ಟ್ ಟರ್ಮ್ ಕ್ರೆಡಿಟ್ ಸೊಸೈಟಿ ಸ್ಥಾಪನೆ ಅದರ ಮೂಲಕ ದೊರೆಯುವಂತೆ ಮಾಡಬೇಕೆಂದೇನಿದೆಯೋ ಅದು ಸಾರ್ಥಕವಾಗಬೇಕು. ಇತರ ಜನರು ಅಂದರೆ ಇನ್ನೂ ಇತರ ಉದ್ಯೋಗದವರು ತಾವು ಸದಸ್ಯರಾಗಿ ನಿಜವಾದ ವ್ಯವಸಾಯಗಾರರಿಗೆ, ಯಾರು ಈ ಬ್ಯಾಂಕಿನಿಂದ ಸಹಾಯ ಪಡೆಯುವುದಕ್ಕೆ ಅರ್ಹತೆ ಹೊಂದಿರುವರೋ ಅವರಿಗೆ ಈ ಸಾಲ ದೊರೆಯದ ಹಾಗೆ ಮಾಡುವುದಕ್ಕೆ ಅವಕಾಶವಿದೆ. ಅಂಥ ಜನರು, ವ್ಯವಸಾಯಗಾರರಲ್ಲದವರು ಈ ಸೊಸೈಟಿ ಸದಸ್ಯರಾಗುವುದಕ್ಕೆ ಅವಕಾಶ ಕೊಡದ ರೀತಿಯಲ್ಲಿ ವ್ಯವಸ್ಥೆ ಮಾಡಬೇಕಾದದ್ದು ಅಗತ್ಯವಾಗಿದೆ.

ಇನ್ನು ಮುಖ್ಯವಾಗಿ ಒಂದು ಬದಲಾವಣೆಯನ್ನು ಒರಿಜಿನಲ್ ಆಕ್ಟಿನ 44ನೇ ಸೆಕ್ಷನ್‌ನಲ್ಲಿ ಮಾಡಿದ್ದಾರೆ. ಒರಿಜಿನಲ್ ಸೆಕ್ಷನ್ ಈ ರೀತಿಯಾಗಿದೆ:-

"Section 44:- If, in the opinion of the Registarar, the Committee of any registered society is not functioning properly, he may after giving an opportunity to the committee to state its objections, if any, and after considering the objections raised, call upon the members of the society to appoint another committee in such time as may be fixed by him. If the members fail to appoint a committee which, in the opinion of the Registrar, is likely to function satisfactorily and the Registrar is of opinion that in the circumstances of the case, it is undesirable to order the cancellation of the registration of the society he may, by order in writing, disolve the committee and appoint a suitable person or persons to manage the affairs of the Society for a specified period not exceeding one year. The period specified in such order may, at the discretion of the Registrar, be extended from time to time, provided that such order shall not remain in force for more than two years in the aggregate.

ಸಬ್ ಸೆಕ್ಷನ್ ಒಂದರಲ್ಲಿ ಕೆಲವು ಮಾತುಗಳನ್ನು ಬಿಡಬೇಕೆಂದು ತಿದ್ದುಪಡಿ ತಂದಿರುವುದು ಈ ರೀತಿಯಾಗಿದೆ.

" The words beginning from ' call upon the members of the society' and ending with it is undesirable to order the cancellation of the registration of the society' shall be omitted".

ಈ ರೀತಿಯಾಗಿ ಇಷ್ಟು ಪದಗಳನ್ನು ಬಿಟ್ಟ ಪಕ್ಷದಲ್ಲಿ ಇದರ ಅರ್ಥವೇನಾಗುತ್ತದೆಯೆಂದರೆ, ರಿಜಿಸ್ಟ್ರಾರ್‌ರವರು ಯಾವುದಾದರೂ ಒಂದು ಕಮಿಟಿ ಸರಿಯಾಗಿ ಕೆಲಸ ಮಾಡದೇ ಹೋದ ಪಕ್ಷದಲ್ಲಿ ಆ ಸೊಸೈಟಿಯ ಸದಸ್ಯರನ್ನು ಕರೆದು "ಬೇರೊಂದು ಸಮಿತಿಯನ್ನು ನೀವು ನೇಮಿಸಬೇಕು" ಎಂದು ಕೇಳಬಹುದು. ಒಂದು ವೇಳೆ ಆ ರೀತಿಯಾಗಿ ರಿಜಿಸ್ಟ್ರಾರ್‌ರವರು ಸೂಚನೆ ಕೊಟ್ಟಮೇಲೆ ಆ ಸದಸ್ಯರು ಸರಿಯಾಗಿ ರಿಜಿಸ್ಟ್ರಾರ್‌ರವರಿಗೆ ಸಮರ್ಪಕವಾದ ಒಂದು ಸಮಿತಿಯನ್ನು ನೇಮಿಸದೇ ಹೋದ ಪಕ್ಷದಲ್ಲಿ ಆ ಸಮಿತಿಯನ್ನು ವಜಾಮಾಡಿ ಪುನಃ ಇನ್ನಾದರೂ ಬೇರೆಯವರನ್ನು ರಿಜಿಸ್ಟ್ರಾರ್‌ರವರು ನೇಮಕ ಮಾಡಬಹುದು ಎಂದು ಹಿಂದಿನ ಕಾನೂನಿನಲ್ಲಿದೆ. ಈಗ ಈ ರೀತಿಯಾಗಿ ಪುನಃ ಹೊಸದಾಗಿ ಇನ್ನೊಂದು ಸಮಿತಿ ಏರ್ಪಾಡು ಮಾಡಿ ಎಂದು ಹೇಳುವುದನ್ನು ಬಿಟ್ಟು ಬಿಡಿ ಎಂದು ತಿದ್ದುಪಡಿ ತಂದಿದ್ದಾರೆ. ಇದಕ್ಕೆ ಬಹಳವಾಗಿ ವಿರೋಧ ಸೂಚಿಸಲ್ಪಟ್ಟಿದೆ. ಮಾನ್ಯ ಸದಸ್ಯರನೇಕರು ಇದು ಕೂಡದು, ಈ ರೀತಿಯಾದ ಒಂದು ತಿದ್ದುಪಡಿ ಇರಕೂಡದು,

ಇದು ರಿಜಿಸ್ಟ್ರಾರ್‌ರವರಿಗೆ ವಿಪರೀತವಾಗಿ ಒಂದು ಪ್ರಾಬಲ್ಯವನ್ನು ಕೊಡುತ್ತದೆ. ಅಧಿಕಾರವನ್ನು ಕೊಡುತ್ತದೆ ಎಂದು ಟೀಕೆ ಮಾಡಿದ್ದಾರೆ.

ಯಾವುದಾದರೂ ಸೊಸೈಟಿ ಅವ್ಯವಸ್ಥೆಯಿಲ್ಲದ್ದರೆ ಅದರ ಮೇಲೆ ಅಧಿಕಾರವನ್ನು ಚಲಾಯಿಸುವುದಕ್ಕೂ ಕೂಡ ಸರಿಯಾದ ಅವಕಾಶವಿಲ್ಲದೆ, ಯಾವ ರೀತಿಯ ಕಾರ್ಯಕ್ರಮ ಕೈಗೊಳ್ಳುವುದಕ್ಕೂ ಕಷ್ಟವಾಗಿತ್ತು ಎಂಬುದು ರಿಜಿಸ್ಟ್ರಾರ್‌ರವರಿಗೆ ಅವರ ಅನುಭವದಿಂದ ವ್ಯಕ್ತಪಟ್ಟಿದೆಯೆಂದು ನಾನು ತಿಳಿಯುತ್ತೇನೆ. ಈಗ ಹಳ್ಳಿಗಳಲ್ಲಿ ಹೊಸದಾಗಿ ಮಲ್ಟಿಪರ್ಪಸ್ ಸೊಸೈಟಿಗಳಾಗಿರುವ ಕಡೆಯಲ್ಲಿ ಒಂದು ಸಾರಿ ಸದಸ್ಯರಾದ ಮೇಲೆ ಒಂದು ಸಾರಿ ಆ ಸ್ಥಳದ ಮುಖಂಡರನ್ನು ಡೈರೆಕ್ಟರುಗಳನ್ನಾಗಿಯೋ, ಪ್ರೆಸಿಡೆಂಟರನ್ನಾಗಿಯೋ ಮಾಡಿದ ಮೇಲೆ, ಪುನಃ ರಿಜಿಸ್ಟ್ರಾರ್‌ರವರೇ ಆಗಲಿ ಯಾರೇ ಆಗಲಿ, ಅವರನ್ನು ಬದಲಾಯಿಸಿ ಹೊಸ ಸಮಿತಿಯನ್ನು ರಚಿಸಬೇಕೆಂದು ಅಲ್ಲಿಯ ಜನರಿಗೆ ತಿಳುವಳಿಕೆ ಕೊಟ್ಟರೂ ಪುನಃ ಪುನಃ ಇವರುಗಳೇ ಅಧ್ಯಕ್ಷರಾಗಿ ಚುನಾಯಿತರಾಗಿ ಬರುವ ಅನೇಕ ನಿದರ್ಶನಗಳಿವೆ.

**Mr. SPEAKER-**No time. we have to hurry up.

**Sri. Mulka GOVINDA REDDY** (Chitradrug)- This is a legislative measure and an important measure too, Members must be given ample opportunities to express their views.

**Sri. D. DEVARAJURS**-I have no mind to drag on my Speach on this Bill for any length of time. If it is the wish the House that this Bill should go to the Select committee and therefore the debate on it should close at this stage alone, I am prepared to close my speech shortly, in a few minutes.

ಈ ರೀತಿಯಾಗಿ ಅನೇಕ ಕಡೆ ಸಮಿತಿಯ ಸದಸ್ಯರು ತಾವು ತಪ್ಪಿತಸ್ಥರಾಗಿದ್ದರೂ ಸಹ, ರಿಜಿಸ್ಟ್ರಾರ್‌ರವರ ದೃಷ್ಟಿಯಲ್ಲಿ ಅವರಿಗೆ ಬದಲು ಬೇರೆ ಜನರು ಆ ಸ್ಥಾನಗಳಿಗೆ ಬರಬೇಕೆಂಬ ಅಪೇಕ್ಷೆ ಇದ್ದರೂ, ಸಾಮಾನ್ಯ ಜನರು ಬೇರೆ ಜನರನ್ನು ಆ ಸ್ಥಾನಗಳಿಗೆ ಚುನಾಯಿಸುವುದು ತುಂಬಾ ಕಷ್ಟವಾಗುತ್ತದೆ. ಇದು ಅನುಭವದ ಮಾತು. ತಾವು ಹೇಳಬಹುದು, democratic principles ಪ್ರಕಾರ ಯಾರನ್ನು ಬೇಕಾದರೂ ಚುನಾಯಿಸಿ ತರಬಹುದು ಎಂದು. ಸ್ವಾಮಿ, ಹಳ್ಳಿಯಲ್ಲಿ ಜನರ ಸ್ಥಿತಿ ಅವರ ತಿಳುವಳಿಕೆಯ ಮಟ್ಟ, ಸ್ಥಳದ ಮುಖಂಡರ ಪ್ರಭಾವಕ್ಕೆ ಒಳಗಾಗಿರುವ ವಿಚಾರವನ್ನು ತಿಳಿದ ಮಹನೀಯರು ಅಂಥ ಕಡೆಗಳಲ್ಲಿ democracy ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಚೆನ್ನಾಗಿ ಅರಿಯಬಹುದು. ಯಾರು ಸ್ಥಳದಲ್ಲಿ ಪ್ರಭಾವಶಾಲಿಗಳಾಗಿರುತ್ತಾರೋ, ಯಾರು (ಮಾತು) ಭಾರಿ ಮನುಷ್ಯರಾಗಿರುತ್ತಾರೋ, ಅವರು ಸಾರ್ವಜನಿಕರ ದುಡ್ಡನ್ನು ತಿಂದಿರಲಿ ಅಥವಾ ಯಾವ ರೀತಿಯಲ್ಲಾದರೂ ದುರುಪಯೋಗ ಮಾಡಿಕೊಂಡಿರಲಿ, ಏನು ತಪ್ಪು ಮಾಡಿದ್ದರೂ ಸಹ ಪುನಃ ಅವರೇ ಚುನಾಯಿತರಾಗಿ ಬರುವ ನಿದರ್ಶನಗಳು ಹಲವಾರು ಇವೆ. ಇಂಥ ಸಮಯದಲ್ಲಿ ರಿಜಿಸ್ಟ್ರಾರ್‌ರವರು ಯಾವ ಕಾರ್ಯಕ್ರಮವನ್ನು ಕೈಗೊಳ್ಳುವುದಕ್ಕೂ ತುಂಬ ಕಷ್ಟವಿದೆ.

ಈ ಬಗ್ಗೆ ಪೂರ್ಣ ಅನುಭವ ಪಡೆದು ಯಾವ ರೀತಿಯ ಎಚ್ಚರಿಕೆ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಆಲೋಚಿಸಿ ಈ ತಿದ್ದುಪಡಿಗಳನ್ನು ತಂದಿರುತ್ತಾರೆಂದು ನಾನು ಭಾವಿಸುತ್ತೇನೆ. ಈ ಮೂಲಕ ರಿಜಿಸ್ಟ್ರಾರ್‌ರವರಿಗೆ ವಿಶೇಷಾಧಿಕಾರವನ್ನು ಕಲ್ಪಿಸಿಕೊಡುವುದರಿಂದ ಅವರು ನೇರವಾಗಿ ತಮ್ಮ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘದ ಮ್ಯಾನೇಜಿಂಗ್ ಕಮಿಟಿಯನ್ನು ಬದಲಾಯಿಸಿ ಬೇರೆಯವರನ್ನು ನೇಮಕ ಮಾಡುವುದಕ್ಕೆ ಒಂದು ಅವಕಾಶವನ್ನು ಕ್ಷಿಪ್ರದಲ್ಲಿಯೇ ಕಲ್ಪಿಸಿದ ಹಾಗಾಗುತ್ತದೆ.

ಆಮೇಲೆ surcharge ವಿಚಾರವಾಗಿ ಬಹಳ ಆಕ್ಷೇಪಣೆಗಳು ಬಂದಿವೆ. ಆಡಿಟ್ ಮಾಡುವ ಆಫೀಸರು ವರದಿ ಒಪ್ಪಿಸಿದ ಮೇಲೆ ಸೊಸೈಟಿಗೆ ಸಂಬಂಧಪಟ್ಟ ಯಾವ ಅಧಿಕಾರಿಯ ಮೇಲಾಗಲಿ ರಿಜಿಸ್ಟ್ರಾರ್‌ರವರು ಕೂಡಲೇ ಕಾರ್ಯಕ್ರಮ ಕೈಗೊಳ್ಳಲು ಮತ್ತು ಯಾವುದಾದರೂ ಅಪೀಲು ಸರ್ಕಾರಕ್ಕೆ ಬಂದರೂ ರಿಜಿಸ್ಟ್ರಾರ್‌ರವರ ಆರ್ಡರ್ ಮೇಲೆಯೇ ಅದನ್ನು hear ಮಾಡಬಹುದೆಂದು ಕೆಲವು ಬದಲಾವಣೆಗಳನ್ನು original act ನ49ನೆಯ ಸೆಕ್ಷನ್ನಿಗೆ ಮಾಡಿರುತ್ತಾರೆ. ಹಿಂದೆ ಡಿಸ್ಟ್ರಿಕ್ಟ್ ಕೋರ್ಟಿಗೆ ಅಧಿಕಾರವಿತ್ತು. ಈ ಅಧಿಕಾರವನ್ನು ತೆಗೆದು ಹಾಕಿ ಈಗ ನೇರವಾಗಿ ಸರ್ಕಾರದವರೇ ಇದನ್ನು ವಹಿಸಿರುತ್ತಾರೆ. ಆದಕಾರಣ ಇದನ್ನು retrograde step ಎಂದೇ ಭಾವಿಸಬೇಕಾಗುತ್ತದೆ. ಆದರೆ ಈ ರೀತಿ ತಿದ್ದುಪಡಿ ಬಂದಿರುವ ಕಷ್ಟ ಪರಂಪರೆಗಳನ್ನು ಈ ಬಗ್ಗೆ ನ್ಯಾಯ ತೀರ್ಮಾನ ದೊರಕಿಸಿಕೊಡುವುದಕ್ಕೆ ಅವಕಾಶ ಇರಬೇಕು ಎಂಬುದಾಗಿ ಅಭಿಪ್ರಾಯಪಡುವುದಾದರೆ ಸೆಲೆಕ್ಟ್ ಕಮಿಟಿಯಲ್ಲಿ ಈ ವಿಚಾರವನ್ನು ಕೂಲಂಕುಷವಾಗಿ ಪರಿಶೀಲಿಸಿ ಸೂಕ್ತ ರೀತಿಯ ಬದಲಾವಣೆ ಮಾಡಬಹುದು.

ಒಟ್ಟಿನಲ್ಲಿ ಈ ತಿದ್ದುಪಡಿ ಮಸೂದೆಯನ್ನು ತಂದಿರತಕ್ಕ ಉದ್ದೇಶ ಸಾಧುವಾಗಿದೆ, ಕೋ-ಆಪರೇಟಿವ್ ಸಂಸ್ಥೆಗಳು ನಮ್ಮ ದೇಶದಲ್ಲಿ ಬೆಳೆಯುವುದಕ್ಕೆ ಸಹಾಯಕವಾಗಿದೆ ಎಂದು ತೋರುತ್ತದೆ. ಬರೀ ತತ್ವಗಳ ಮೇಲೆ ಮಾತನಾಡುವುದಾದರೆ ಇದು ಸರಿಯಲ್ಲ, ಅದು ಸರಿಯಲ್ಲ, ಅಥವಾ democratic principles ಗೆ ವಿರುದ್ಧವಾಗಿದೆ ಎಂದು ಹೇಳಬಹುದು. ಆದರೆ ಇದರ ಜೊತೆಗೆ ಅನುಭವದ ಅಂಶವನ್ನೂ ಗಣನೆಗೆ ತೆಗೆದು ಕೊಂಡರೆ ಇಂಥ ಕೆಲವು ಮುಖ್ಯ ಬದಲಾವಣೆಗಳು ತೀರ ಅಗತ್ಯವೆಂಬುದು ನಮಗೆ ಮನದಟ್ಟಾಗುತ್ತದೆ. ಈ ಬದಲಾವಣೆಗಳಾಗದಿದ್ದರೆ ಸಹಕಾರ ಸಂಸ್ಥೆಗಳ ಬೆಳವಣಿಗೆಯಾಗುವುದಕ್ಕೆ ಸಾಧ್ಯವಿಲ್ಲ. ಆದುದರಿಂದ ಇದನ್ನು ನಾವೆಲ್ಲರೂ ಹೃತ್ಪೂರ್ವಕವಾಗಿ ಸ್ವಾಗತಿಸಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

# 4. ಅಚ್ಚುಕಟ್ಟು ಪ್ರದೇಶದ ಟೆಂಡರ್ ಹಂಚುವಿಕೆ ಕುರಿತು

(26-2-55)

ಶ್ರೀ ಡಿ. ದೇವರಾಜ ಅರಸ್(ಹುಣಸೂರು) - ಸ್ವಾಮಿ, ಇದನ್ನು ಸಮರ್ಥಿಸುತ್ತಾ ಒಂದು ವಿಷಯವನ್ನು ಸರ್ಕಾರದವರ ಗಮನಕ್ಕೆ ತರುತ್ತೇನೆ. ಮೈನರ್‌ಕೆರೆಗಳಿಗೆ ಅಂದಾಜು ಮಾಡಿದ ಮೇಲೆ ಇಲಾಖೆಯಲ್ಲಿ ಹಾಲಿ ಇರತಕ್ಕ ಪದ್ಧತಿಯೇನೆಂದರೆ, ಟೆಂಡರುಗಳನ್ನು ಕರೆದು ಅವುಗಳಲ್ಲಿ ಅತ್ಯಂತ ಕಡಿಮೆ ಟೆಂಡರುದಾರನಿಗೆ ಕೆಲಸವನ್ನು ಕೊಡತಕ್ಕದ್ದು. ಕೆಲವು ಕಡೆ ಕೆರೆಯ ಕೆಳಗಿನ ಅಚ್ಚುಕಟ್ಟುದಾರರೇ, ಆ ಊರಿನ ಜನರೇ ಮುಂದೆ ಬಂದು ತಾವೇ ಕೆರೆಯ ಕೆಲಸವನ್ನು ಮಾಡಿಕೊಳ್ಳುತ್ತೇವೆಂದು ಹೇಳಿದಾಗ ಅವರಿಗೇ ವಹಿಸತಕ್ಕ ಪದ್ಧತಿ ಕೆಲವು ವರ್ಷಗಳ ಹಿಂದೆ ಈ ಇಲಾಖೆಯಲ್ಲಿತ್ತು. ಇತ್ತೀಚೆಗೆ ಈ ರೀತಿ ಪದ್ಧತಿಯನ್ನನುಸರಿಸಕೂಡದು ಮತ್ತು ಅಚ್ಚುಕಟ್ಟುದಾರರು ಮುಂದೆ ಬಂದು ಕೇಳಿದರೂ ಟೆಂಡರ್ ಮೂಲಕ ಯಾರು ಬಂದಿರುತ್ತಾರೋ ಅವರಿಗೇ ವಹಿಸಬೇಕೆಂದು ಸರ್ಕಾರ ಆಜ್ಞೆ ಮಾಡಿದೆ ಎಂದು ತಿಳಿದು ಬಂದಿದೆ. ಇಲಾಖೆಯ ಕೋಡ್ ಪ್ರಕಾರ ಎಗ್ಸಿಕ್ಯುಟಿವ್ ಇಂಜಿನಿಯರು ಐದು ಸಾವಿರ ರೂಪಾಯಿಗೊಳಪಟ್ಟಿರುವ ಕೆಲಸಗಳನ್ನು ಅವರ ವಿವೇಚನೆಯನ್ನು ಉಪಯೋಗಿಸಿ, ಕೆರೆ ಕೆಳಗಿನ ಅಚ್ಚುಕಟ್ಟುದಾರರಿಗೆ ಅವರು ಅಪೇಕ್ಷಿಪಟ್ಟರೆ ವಹಿಸಬಹುದೆಂದಿದೆ. ಹೀಗೆ ಯಾವ ಯಾವ ಸ್ಥಳಗಳಲ್ಲಿ ಅಚ್ಚುಕಟ್ಟುದಾರರೇ ರಿಪೇರಿ ಕೆಲಸಗಳನ್ನು ತೆಗೆದುಕೊಳ್ಳಬೇಕೆಂದು ಇಷ್ಟಪಡುತ್ತಾರೋ ಅಲ್ಲಿ ಅವರಿಗೇ ವಹಿಸುವುದು ಸೂಕ್ತವೆಂದು ಕಾಣುತ್ತದೆ. ಏಕೆಂದರೆ, ಕಸಬುದಾರರಾದ ಕಂಟ್ರಾಕ್ಟರುಗಳು ಕೆಲವರು ಅನೇಕ ಸಂದರ್ಭಗಳಲ್ಲಿ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವುದಿಲ್ಲ. ಅದರಲ್ಲಿಯೂ ಮೈನರ್ ಕೆರೆ ರಿಪೇರಿ ಎಂದರೆ ಇದರಲ್ಲಿ ಮಣ್ಣು ಕಾಮಗಾರಿಯೇ ಹೆಚ್ಚಾಗಿರುತ್ತದೆ. ಇದರಲ್ಲಿ ಅವರಿಗೆ ಹಣ ಉಳಿಸಿಕೊಳ್ಳುವುದಕ್ಕೆ ಅವಕಾಶವಿರುತ್ತದೆಂದು ಕಸಬುದಾರ ಕಂಟ್ರಾಕ್ಟರುಗಳೇ ಹೆಚ್ಚು ಹೆಚ್ಚಾಗಿ ಮುಂದೆ ಬರುತ್ತಾರೆ. ಯಾವ ಯಾವ ಗ್ರಾಮಗಳಲ್ಲಿ ಮೈನರ್ ಕೆರೆ ರಿಪೇರಿ ಆಗಬೇಕೋ ಅಲ್ಲಿ ಕೆರೆ ಕೆಳಗಿನ ಅಚ್ಚುಕಟ್ಟುದಾರರು ನಾವೇ ಮಾಡುತ್ತೇವೆಂದರೆ, ಇಲಾಖೆಯವರು ಅವರಿಗೇ ಕೊಟ್ಟರೆ, ಕೆಲಸವನ್ನು ಅವರು ಸ್ವಂತ ಕೆಲಸವೆಂದು ಭಾವಿಸಿ ಶ್ರದ್ಧೆಯಿಂದ ಮಾಡುತ್ತಾರೆ. ಕೆರೆ ಸರಿಯಾಗಿದ್ದರೆ ತಮ್ಮ ಜಮೀನಿಗೇ ಅನುಕೂಲವಾಗುತ್ತದೆಂದು ಚೆನ್ನಾಗಿ ಮಾಡುತ್ತಾರೆ. ಆದುದರಿಂದ ಅವರಿಗೇ ಕೊಡುವುದಕ್ಕೆ ಅವಕಾಶ ಮಾಡಬೇಕೆಂದು ನಾನು ಹೇಳುತ್ತೇನೆ.

## 5. ಭೂಮಿ ಇಲ್ಲದ ಕೃಷಿಕರಿಗೆ ಭೂಮಿ ನೀಡುವ ಕುರಿತು

(ದಿನಾಂಕ 4.4.55)

ಶ್ರೀ ಡಿ. ದೇವರಾಜ ಅರಸ್(ಹುಣಸೂರು).- ಸ್ವಾಮಿ, ಈ ನಿರ್ಣಯದಲ್ಲಿ, "This Assembly is of the opinion that Government lands throughout the State be given freely for cultivation to poor people of all communities who are having agriculture as their main occupation and whose main stay is agriculture" ಎಂದಿದೆ. ಇದರ ಬಗ್ಗೆ ನನಗೊಂದು ಅನುಮಾನ ಬಂದಿದೆ. 'Government lands' ಎಂದರೆ ಅರಣ್ಯದ ಜಮೀನುಗಳು, ಗೋಮಾಳಗಳು, ಅಮೃತ ಮಹಲ್ ಕಾವಲುಗಳು ಎಲ್ಲಾ ಸೇರುತ್ತವೆಯೇ! ಹಿಡುವಳಿಯಲ್ಲಿಲ್ಲದಿರುವ ಜಮೀನುಗಳೆಲ್ಲವೂ ಸರ್ಕಾರಿ ಜಮೀನುಗಳನ್ನೂ ತೆಗೆದುಕೊಳ್ಳಬೇಕೆಂದು ಈ ನಿರ್ಣಯದ ಸೂಚಕರ ಅಭಿಪ್ರಾಯವೇ! ತಿಳಿಸಬೇಕು.

ಶ್ರೀ ಆರ್. ಅನಂತರಾಮನ್- ಹಿಡುವಳಿಯಲ್ಲಿರುವುದನ್ನೂ, ಅರಣ್ಯ, ಅಮೃತಮಹಲ್, ಗೋಮಾಳ ಇವುಗಳಿಗೆ ಸೇರಿರುವುದನ್ನೂ ಬಿಟ್ಟು, ಉಳಿದದ್ದನ್ನು ಹಂಚ ಬೇಕೆಂಬುದೇ ನನ್ನ ಉದ್ದೇಶ.

ಶ್ರೀ ಡಿ. ದೇವರಾಜ ಅರಸ್.- ಉದ್ದೇಶ ಹೀಗಿರುವಾಗ ಬರವಣಿಗೆಯಲ್ಲಿ ಹಾಗಿಲ್ಲವಲ್ಲ 'Can' ಎಂದು ಇಲ್ಲಿಲ್ಲವಲ್ಲ !

ಶ್ರೀ ಎ. ಭೀಮಪ್ಪನಾಯಕ್(ಮೊಳಕಾಲ್ಮೂರು).-'All lands' ಎಂದು ಇಲ್ಲಿ ಹೇಳಿಲ್ಲ.

ಶ್ರೀ ಡಿ. ದೇವರಾಜ ಅರಸ್.- ನನಗೆ ಅದು ಬೇಕಾಗಿಲ್ಲ.'Government lands be given' ಎಂದು ಹೇಳಿದೆ. ಇದೇ ರೀತಿಯಲ್ಲಿ ಈ ನಿರ್ಣಯವನ್ನು ಒಪ್ಪಿಕೊಂಡರೆ 'ಸರ್ಕಾರಿ ಜಮೀನುಗಳು ಯಾವ ಯಾವುವು ಇವೆಯೋ ಅವೆಲ್ಲವನ್ನೂ ಕೊಡಬೇಕಾಗುತ್ತದೆ. ನಿರ್ಣಯದ ಉದ್ದೇಶವೇನೋ ಸರಿಯೇ. ಅದನ್ನು ಒಪ್ಪಲೂ ಬಹುದು. ಆದರೆ ನಿರ್ಣಯ ಇರುವ ರೀತಿಯಲ್ಲಿ ಒಪ್ಪುವುದು ಕಷ್ಟ ಆಗುತ್ತದೆ. ಬೇಕಾದರೆ ಸರ್ಕಾರಿ ಜಮೀನುಗಳಲ್ಲಿ ಗೋಮಾಳ, ಅರಣ್ಯಗಳನ್ನು ಬಿಟ್ಟು ಸಾಗುವಳಿಗೆ ಲಾಯಕ್ಕಾದ ಸರ್ಕಾರಿ ಜಮೀನುಗಳು ಯಾವ ಯಾವುವು ಇವೆಯೋ ಅವನ್ನು ಕೊಡುವುದಕ್ಕೆ ತಿದ್ದುಪಡಿಯ ರೂಪದಲ್ಲಿ ಏನಾದರೂ ತರಬಹುದು.

**Mr. SPEAKER.**- Government will reply to that ತಾವು ಹೇಳಿ ಇಂಥ ಜಮೀನು ಕೊಡಬೇಕು ಎಂದು.

ಶ್ರೀ ಡಿ. ದೇವರಾಜ ಅರಸ್.- ನನ್ನ ಅಭಿಪ್ರಾಯ ಹೀಗಿದೆ. ಬಡವರಿಗೆ, ಅವರು ಯಾವ ಕೋಮಿನವರೇ ಆಗಿರಲಿ ವ್ಯವಸಾಯವನ್ನು ಮೂಲ ಕಸುಬಾಗಿ ಅವಲಂಬಿಸತಕ್ಕವರಿಗೆ, ಉಚಿತವಾಗಿ ಜಮೀನು ಕೊಡಬೇಕು ಎಂದು. ಈಗ ಹಾಲಿ ಇರುವ ಪದ್ಧತಿ, ದರಖಾಸ್ತಿನ ಅರ್ಜಿಗಳು ಬಂದರೆ, ಆ ಜಮೀನುಗಳನ್ನು ಹರಾಜು ಮಾಡಿ ಯಾರು ಹೆಚ್ಚಿನ ಮೊಬಲಗಿಗೆ bid

ಮಾಡುತ್ತಾರೋ ಅವರಿಗೆ ಕೊಡುವುದು ಎಂಬುದು. ಈಚೀಗೆ ಅದು ಹೋಗಿ ಅಪ್ಸೆಟ್ ಪ್ರೈಸ್ ಮೇಲೆ ಬಡವರಿಗೆ ಕೊಡಬೇಕೆಂದು ಸರ್ಕಾರದವರು ಒಂದು ಆಜ್ಞೆ ಹೊರಡಿಸಿದರು. ಇದರ ಪ್ರಕಾರ ಒಂದು ಎಕರೆಯೂ ಜಮೀನಿಲ್ಲದ ರೈತನಿಗೆ ಜಮೀನು ಕೊಡಬೇಕೆಂದಿದೆ. ಇದರಲ್ಲಿ ಎರಡು ರೀತಿಯಾಗಿದೆ. ಅಪ್ಸೆಟ್ ಪ್ರೈಸ್ ಎಂದು ಹೇಳಿ ತೆಗೆದುಕೊಳ್ಳುವುದು ಒಂದು; ಇನ್ನೊಂದು ಉಚಿತವಾಗಿ ಕೊಡುವುದು. ಉಚಿತವಾಗಿ ಕೊಡುತ್ತಿರುವುದು ನಿಮ್ನತರಗತಿಯವರೆಂಬ ಒಂದೇ ಒಂದು ಜನಾಂಗಕ್ಕೆ ಸರ್ಕಾರದವರು ಒದಗಿಸಿಕೊಟ್ಟಿರತಕ್ಕ ಒಂದು ಅನುಕೂಲ. Depressed Class Rules ಪ್ರಕಾರ ಎರಡು ಎಕರೆಗಳನ್ನು ಅವರಿಗೆ ಉಚಿತವಾಗಿ ಕೊಡಬಹುದೆಂದಿದೆ, ಬಾಕಿ ಜನರಿಗೆ ಈ ಅನುಕೂಲ ಕಲ್ಪಿಸಿಕೊಟ್ಟಿಲ್ಲ. ಮಿಕ್ಕಬಡ ಜನರಿಗೆ ಈ ಅನುಕೂಲವಿಲ್ಲ. ಅನೇಕ ಜನರಿಗೆ ಅಪ್ಸೆಟ್ ಪ್ರೈಸನ್ನು ಕಟ್ಟುವುದೂ ಬಹಳ ಕಷ್ಟವಾಗಿದೆ. ಇನ್ನೊಂದು ತೊಂದರೆಯೂ ಇದೆ. ಸರ್ಕಾರಿ ಅಧಿಕಾರಿಗಳು ನಿಬಂಧನೆಗಳನ್ನು interpret ಮಾಡುವುದರಲ್ಲಿ ಬಹಳ ತೊಂದರೆ ಕೊಡುತ್ತಾರೆ. ಹೇಗೆಂದರೆ, ಹಿಂದೆ ರೆವಿನ್ಯೂ ಕಮೀಷನರ್ ಆಫೀಸಿನಿಂದ ಒಂದು ಆಜ್ಞೆ ಹೊರಟಿತ್ತು. ಅಪ್ಸೆಟ್ ಪ್ರೈಸ್ ಎಂದರೆ 50 ರೂಪಾಯಿ ಎಂದು ನಿಗದಿ ಮಾಡಬೇಕೆಂದಿತ್ತು. ಐದು ರೂಪಾಯಿ ಕೂಡ ಬೆಲೆಬಾಳದ ಜಮೀನಿಗೆ 50 ರೂಪಾಯಿ ಕೊಡಬೇಕೆಂದು ಹೇಳಿದ್ದರಿಂದ ಕೊನೆಗೆ ಜಮೀನು ತೆಗೆದುಕೊಳ್ಳಬೇಕೆನ್ನುವವರೂ ಬಿಟ್ಟು ಬಿಟ್ಟರು. ಜಮೀನು ತೆಗೆದುಕೊಳ್ಳುವುದೇ ತೊಂದರೆಯಾಗಿಬಿಟ್ಟಿತು. ಇದನ್ನು ಮಾನ್ಯ ರೆವಿನ್ಯೂ ಮಂತ್ರಿಗಳ ಗಮನಕ್ಕೆ ತರಲಾಗಿ ಅವರು ಹೇಳಿದರು, ಸರ್ಕಾರದವರು ಆ ರೀತಿ ಮಾಡಿರಲಿಲ್ಲ; ರೆವಿನ್ಯೂ ಕಮೀಷನರಿಂದ ಕೈತಪ್ಪಿ.......

ಶ್ರೀ ಕಡಿದಾಳ್ ಮಂಜಪ್ಪ.- 'ಕೈ ತಪ್ಪಿ' ಎಂದು ನಾನು ಹೇಳಲಿಲ್ಲ, ರೆವಿನ್ಯೂ ಕಮೀಷನರು ಆ ಆಜ್ಞೆ ಹೊರಡಿಸಿದ್ದರು ಎಂದು ಹೇಳಿದೆ.

ಶ್ರೀ ಡಿ. ದೇವರಾಜ ಅರಸ್.- ಅದೇನೇ ಇರಲಿ, ಇಂಥ ಆಜ್ಞೆ ಹೊರಡಿಸಿದ್ದರು. ಈಗ 50 ರೂಪಾಯಿ ತೆಗೆದುಕೊಳ್ಳುತ್ತಿಲ್ಲವೆಂದು ಹೇಳುತ್ತಿದ್ದಾರೆ. ಅದೂ official ಆಗಿ ಹೇಳುತ್ತಿದ್ದಾರೋ un-official ಆಗಿ ಹೇಳುತ್ತಿದ್ದಾರೋ ಗೊತ್ತಿಲ್ಲ. ಇಪ್ಪತ್ತೈದು ರೂಪಾಯಿಗಳನ್ನಾದರೂ ಕನಿಷ್ಠ ರೂಪವಾಗಿ ತೆಗೆದುಕೊಳ್ಳಬೇಕೆಂದು ಮಾಡಿದ್ದಾರಂತೆ.

ಆ ಮೇಲೆ ಜಮೀನು ಕೊಡುವುದರಲ್ಲೂ ಅಮಲ್ದಾರರಿಗೆ, ಏನೂ ಅಧಿಕಾರ ಕೊಟ್ಟಿಲ್ಲ. ಸಬ್ ಡಿವಿಜನ್ ಆಫೀಸರೇ ಮೊದಲನೆಯ ಹಂತ. ಅವರಿಗೆ ನಾಲ್ಕು ಎಕರೆ, ಎರಡು ಎಕರೆ ಕೊಡುವುದಕ್ಕೆ ಅಧಿಕಾರವಿದೆ. ಎರಡನೆಯ ಹಂತವಾದ ಡೆಪ್ಯುಟಿ ಕಮೀಷನರಿಗೆ 10 ಎಕರೆಗಳ ಒಳಪಟ್ಟು ಕೊಡಬೇಕೆಂದಿದೆ. ಅದರ ಮೇಲ್ಪಟ್ಟು 10-15 ಎಕರೆಗಳವರೆಗೆ ಕೊಡಬೇಕಾದರೆ ರೆವಿನ್ಯೂ ಕಮೀಷನರಿಗೆ ಅಧಿಕಾರವಿದೆ. ಅದರ ಮೇಲೆ ಕೊಡಬೇಕಾದರೆ ಸರ್ಕಾರಕ್ಕೆ ಬರಬೇಕೆಂದಿದೆ.

ಈಗ ಹಾಲಿ ಇರತಕ್ಕ ವ್ಯವಸ್ಥೆಯ ಪ್ರಕಾರ ಅಮಲ್ದಾರರಿಗೆ ಯಾವ ಅಧಿಕಾರವನ್ನೂ ಕೊಟ್ಟಿಲ್ಲ. ಡಿಪ್ರೆಸ್ಡ್ ಕ್ಲಾಸಿನವರಿಗೆ ಮಾತ್ರ ಎರಡು ಎಕರೆಗಳನ್ನು ಕೊಡಬಹುದು ಅಷ್ಟೆ. ಇದರಿಂದೇನಾಗಿದೆಯೆಂದರೆ, ಅಮಲ್ದಾರರು ಜಮೀನು ಬಂಜರು ಪ್ರದೇಶ, ಕಾಡು ಪ್ರದೇಶ ಎಂದು ಹೇಳಿ ಸುಲಭ ಬೆಲೆಗೆ ಕೊಡಬಹುದೆಂದು ಶಿಫಾರಸ್ಸು ಮಾಡಿ ಸಬ್ ಡಿವಿಜನ್ ಆಫೀಸರಿಗೆ ಕಳುಹಿಸಿದರೆ, ಅಲ್ಲಿ ಫೈಲ್ ಜೊತೆಯಲ್ಲೇ ಯಾವನು ಅರ್ಜಿ ಕೊಟ್ಟಿರುತ್ತಾನೋ ಅವನು ಹೋಗಿ

ಅಲ್ಲಿನ ಅಧಿದೇವತೆಗಳಿಗೆ ತೃಪ್ತಿಯಾಗುವ ಹಾಗೆ ಪೂಜೆ ಮಾಡಿ ಬಂದರೆ, ಅಮಲ್ದಾರರು ಶಿಫಾರಸ್ಸು ಮಾಡಿರತಕ್ಕ 10-15 ರೂಪಾಯಿಗಳಿಗೇ ಒಪ್ಪಿಕೊಂಡು ಸಬ್ ಡಿವಿಜನ್ ಆಫೀಸರು ಮಂಜೂರು ಮಾಡುತ್ತಾರೆ. ಒಂದು ವೇಳೆ ಅರ್ಜಿದಾರನು, ಅವನು ಬಡವ, ಅವಿದ್ಯಾವಂತನಾಗಿರುವುದರಿಂದ ತನ್ನ ಅರ್ಜಿಯನ್ನು ಹಿಂಬಾಲಿಸುವುದಕ್ಕೆ ತಿಳಿವಳಿಕೆಯಿಲ್ಲದೆ ಮನೆಯಲ್ಲೇ ಇದ್ದರೆ "ಅಮಲ್ದಾರರು ಮಾಡಿರುವ ಶಿಫಾರಸ್ಸು, 10 ರೂಪಾಯಿ ಬಹಳ ಕಡಿಮೆ, ಅದನ್ನು ಜಾಸ್ತಿ ಮಾಡಬೇಕು" ಎಂದು ಹೇಳಿ ಪುನಃ ಅಮಲ್ದಾರರಿಗೆ ಬಂದೇ ಬಿಡುತ್ತದೆ. ಹೀಗಾಗಿ ಮೇಲಕ್ಕೂ ಕೆಳಕ್ಕೂ ಫೈಲ್ ಓಡಾಡುತ್ತ ಕಾಲಹರಣವಾಗುತ್ತದೆ. ಈ ಕಾರಣದಿಂದ ಅನೇಕರಿಗೆ ಬಹಳ ಕಷ್ಟವಾಗಿದೆ. ಆದ್ದರಿಂದ, ಸರ್ಕಾರದವರಿಗೆ ನಾನು ಸಲಹೆ ಮಾಡುವುದೇನೆಂದರೆ; ಉಚಿತವಾಗಿ ಸರ್ಕಾರದವರು ಬಡವರಿಗೂ ಜಮೀನಿಲ್ಲದವರಿಗೂ ಹೇಗೂ ಕೊಡಬೇಕೆಂದಿದೆ; ವ್ಯವಸಾಯವೇ ಮುಖ್ಯ ಕಸುಬಾಗಿರುವವರಿಗೆ ಮಾತ್ರ ಕೊಡೋಣ. ಅಂಥವರಿಗೆ free ಯಾಗಿ ಕೊಡಬಹುದೆಂದ ಮೇಲೆ, ಅಮಲ್ದಾರರಿಗೇ ಈ ಅಧಿಕಾರ ಏಕೆ ಕೊಡಕೂಡದು!

ಇನ್ನೊಂದು ತೊಂದರೆಯಿರುವುದನ್ನು ನಾನು ಈ ಸಂದರ್ಭದಲ್ಲಿ ತರಬೇಕಾಗಿದೆ. ಪೋಡಿಂಗ್ ಫೀಜೆಂದು ಹಿಂದೆ ಆರು ರೂಪಾಯಿ ಮಾಡಿದ್ದಾರೆ. ಹತ್ತು ರೂಪಾಯಿನ ಜಮೀನಿಗೆ 20 ರೂಪಾಯಿ ಪೋಡಿಂಗ್ ಫೀ!! ಇದು ಅನೇಕ ಬಡಜನರಿಗೆ ತೊಂದರೆಯಾಗಿ ಪರಿಣಮಿಸಿದೆ. ಇದನ್ನು ಸರಿಪಡಿಸಬೇಕು. ಜೊತೆಗೆ ಜಮೀನು ಕೊಡತಕ್ಕ ಅಧಿಕಾರವನ್ನು ಸೆಂಟ್ರಲೈಸ್ ಮಾಡಿಕೊಂಡಿರಕೂಡದು. ಸರ್ಕಾರದ ದೃಷ್ಟಿಯಿಂದ ಒಂದು ಸಂಸಾರಕ್ಕೆ ಕನಿಷ್ಠ ಪಕ್ಷ ಐದು ಎಕರೆ ಖುಷ್ಕಿ ಜಮೀನು ಕೊಡಬೇಕೆಂದಿದೆ. ತರಿ ಜಮೀನಾದರೆ ಎರಡು ಎಕರೆಯಾದರೂ ಕೊಡಬೇಕೆಂದಿದೆ. ನನ್ನ ಅಭಿಪ್ರಾಯದಲ್ಲಿ ಐದು ಎಕರೆ ಜಮೀನು ಕೊಡುವುದನ್ನು ಅಮಲ್ದಾರರಿಗೇ ವಹಿಸುವುದು ಸೂಕ್ತ. ಅಧಿಕಾರ ಕೊಡುವುದಾದರೆ ನೇರವಾಗಿ ಅಮಲ್ದಾರರೇ ಕೊಡುವುದಕ್ಕೆ ಸಹಾಯಕವಾಗುತ್ತದೆ.

ಶ್ರೀ ಎಸ್. ಸಿದ್ದಪ್ಪ(ಮಾಗಡಿ).- ಕೊಡುವುದಕ್ಕಾಗುವುದಿಲ್ಲ.

ಶ್ರೀ ಡಿ. ದೇವರಾಜ ಅರಸ್.- ಮಾನ್ಯ ಸ್ನೇಹಿತರು 'ಆಗುವುದಿಲ್ಲ' ಎಂದು ಹೇಳುತ್ತಾರೆ. ಅವರ ಅಭಿಪ್ರಾಯದಲ್ಲಿ ತಮಗೊಬ್ಬರಿಗೇ 100 ಎಕರೆ ಜಮೀನಿದ್ದ ಮೇಲೆ ಇನ್ಯಾರಿಗೂ ಕೊಡಬಾರದು ಎಂದು. ಮುಖ್ಯವಾಗಿ ಬಡವರಿಗೆ, ವ್ಯವಸಾಯಗಾರರಿಗೆ ಜಾಗ್ರತೆ ಜಮೀನು ಸಿಕ್ಕಬೇಕಾದರೆ ಅಮಲ್ದಾರರಿಗೆ ಈ ಅಧಿಕಾರವನ್ನು ಕೊಡಬೇಕು. ಡಿಪ್ರೆಸ್ಡ್ ಕ್ಲಾಸ್‌ನವರ ವಿಷಯದಲ್ಲೂ, ಈಗ ಅವರಿಗೆ ಎರಡು ಎಕರೆಗೆ ಜಾಸ್ತಿ ಕೊಡಬೇಕಾದರೆ ಸಬ್‌ಡಿವಿಜನ್ ಆಫೀಸರಿಗೆ ಹೋಗಬೇಕೆಂದಿದೆ. ಎರಡು ಎಕರೆ ಜಮೀನು ಕೊಡುವ ಅಧಿಕಾರವುಳ್ಳ ಅಮಲ್ದಾರರಿಗೆ ಐದು ಎಕರೆ ಕೊಡುವ ಅಧಿಕಾರವನ್ನೂ ಕೊಟ್ಟರೆ ನಷ್ಟವಾಗುವುದು ಏನು? ಯಾರಿಗೂ ನಿಜವಾಗಿ ಸಹಾಯ ಮಾಡಬೇಕೆಂದು ಹೇಳುತ್ತಾರೋ ಅವರನ್ನು ಆಫೀಸಿನಿಂದ ಆಫೀಸಿಗೆ ತಿರುಗಿಸುವುದೂ, ಅವರು ಅಲ್ಲಿನವರನ್ನು ತೃಪ್ತಿಪಡಿಸುವುದಕ್ಕೆ ಹೋಗುವುದೂ ತಪ್ಪುತ್ತದೆ. ಆದ್ದರಿಂದ ಇದನ್ನು ಸರ್ಕಾರದವರು ಪರಿಶೀಲನೆ ಮಾಡಬೇಕೆಂದು ನನ್ನ ವಿನಂತಿ.

# 6. ಕೃಷಿ ಆದಾಯ ತೆರಿಗೆ ಮಸೂದೆ, 1955

(ದಿನಾಂಕ 14-4-1955)

ಶ್ರೀ ಡಿ. ದೇವರಾಜ ಅರಸ್(ಹುಣಸೂರು):- ಅಧ್ಯಕ್ಷರೆ, ಈಗ ನಮ್ಮ ಮುಂದೆ ಮಂಡಿಸಿರತಕ್ಕ ಈ ವ್ಯವಸಾಯದ Income-tax bill 2 ನ್ನು ನಾನು ಸ್ವಾಗತಿಸುತ್ತಾ ಕೆಲವು ಮಾತುಗಳನ್ನು ಹೇಳಬೇಕೆಂದು ಅಪೇಕ್ಷೆ ಪಡುತ್ತೇನೆ. ಅಗ್ರಿಕಲ್ಚರಲ್ ಇನ್‌ಕಂಟ್ಯಾಕ್ಸ್ ಎಂದು ಈ ಮಸೂದೆಯ ಮೂಲಕ ನಮ್ಮ ಸರ್ಕಾರದವರು ಯಾರ ತೆರಿಗೆಯನ್ನು ವಸೂಲು ಮಾಡಬೇಕೆಂದಿದ್ದಾರೋ ಅದು ಒಂದು ವಿಧದಲ್ಲಿ ಸರಿಯಲ್ಲವೆನ್ನಬೇಕು. ವ್ಯವಸಾಯಗಾರನಿಂದ ತೆರಿಗೆಯ ರೂಪದಲ್ಲಿ ವಸೂಲು ಮಾಡುವುದು, the method of getting tax from the ryot on his income- ಇದು ಸರಿಯಲ್ಲ. ಹೋದ ಸಾರಿ ಮಾನ್ಯ ಹಣಕಾಸಿನ ಸಚಿವರು Land ಮೇಲೆ ಸರ್‌ಚಾರ್ಜ್ ಮಾಡಬೇಕೆಂದು ಹೇಳಿ ಒಂದು ಮಸೂದೆಯನ್ನು ತಂದು ಅದು ಹಾಗೆಯೇ ವಾಪಸ್ಸು ಹೊರಟುಹೋಯಿತು. ಈಗ ಮಾನ್ಯ ಸದಸ್ಯರು ಮಾತನಾಡುತ್ತಾ ಯಾವ ರೀತಿ ರೈತರಿಗೆ ಲೆಕ್ಕವಿಡುವುದಕ್ಕೆ ತೊಂದರೆಯಾಗುತ್ತಿದೆ, ಅವರು ಯಾವ ರೀತಿ ವಿದ್ಯಾವಂತರ ಮೇಲೆ ಆಧಾರವಾಗಿ ನಿಲ್ಲಬೇಕಾಗುತ್ತಿದೆ, ಹಳ್ಳಿಯಲ್ಲಿರತಕ್ಕ ಕರಣಿಕರ ಅಥವಾ ಗುಮಾಸ್ತರ ಸಹಾಯವನ್ನು ಅಪೇಕ್ಷಿಸಬೇಕಾಗುತ್ತದೆಂದು ಹೇಳಿದ್ದಾರೆ. ವ್ಯವಸಾಯ ಮಾಡತಕ್ಕಂಥವನು ದಿನಚರಿ ಕೂಲಿಕಾರರಿಗೆ, ಗೊಬ್ಬರಕ್ಕೆ ಬೀಜಕ್ಕೆ ಇತ್ಯಾದಿ, ಇತ್ಯಾದಿಯಾಗಿ ಯಾವ ಯಾವ ಬಾಬ್ತಿಗೆ ಖರ್ಚು ಮಾಡುತ್ತಾನೆಯೋ ಅದಕ್ಕೆಲ್ಲಾ ಲೆಕ್ಕವಿಡಬೇಕೆಂದರೆ ಬಹಳ ಕಷ್ಟವಾಗುತ್ತದೆ. ಆದ್ದರಿಂದ ಎಕರೆಗೆ ಇಷ್ಟು ಎಂದು ಹೇಳಿ, ತರಿ ಆದರ ಇಷ್ಟು ಬಾಗಾಯಿತು ಜಮೀನಾದರೆ ಇಷ್ಟು ಖುಷ್ಕಿಯಾದರೆ ಇಷ್ಟು ಎಂದು ಆಯಾ ಜಮೀನಿನಲ್ಲಿ ಬೆಳೆಯತಕ್ಕ ಶಕ್ತಿಯ ಮೇಲೆ ಒಂದು ಸರ್‌ಚಾರ್ಜ್ ಹಾಕಿ ತೆರಿಗೆಯನ್ನು ವಸೂಲು ಮಾಡುವುದೇ ಒಳ್ಳೆಯದೆಂದು ನನಗೆ ತೋರುತ್ತದೆ.

ಶ್ರೀ ಎನ್. ಹುಚ್ಚಮಾಸ್ತಿಗೌಡ (ಹುಲಿಯೂರುದುರ್ಗ).- ಬೆಳೆ ಆಗದೆ ಇದ್ದರೆ!

ಶ್ರೀ ಡಿ. ದೇವರಾಜ ಅರಸ್.- ಆಗ ರಿಮಿಷನ್ ಇದ್ದೇ ಇದೆ. ಆದ್ದರಿಂದ ಈ ರೀತಿ ಅಗ್ರಿಕಲ್ಚರಲ್ ಇನ್‌ಕಂಟ್ಯಾಕ್ಸ್ ಎಂದು ಹೇಳಿ ವ್ಯವಸಾಯಗಾರನಿಗೆ ಬರತಕ್ಕ ನಿವ್ವಳ ಆದಾಯದ ಮೇಲೆ ತೆರಿಗೆ ಹಾಕುವುದು ಹೆಚ್ಚಿಗೆ ಶಾಸ್ತ್ರೀಯವಾದ ವಿಧಾನವೆಂದು ಅನೇಕರು ಒಪ್ಪುವುದಾದರೂ, ನಮ್ಮ ದೇಶದಲ್ಲಿ ಹೆಚ್ಚಿಗೆ ರೈತರು ಅವಿದ್ಯಾವಂತರಾಗಿದ್ದು ಲೆಕ್ಕಪತ್ರಗಳನ್ನಿಡುವುದು ಕಷ್ಟವಾಗಿ ಇತರರ ಕೈಗೆ ಸಿಕ್ಕಿ ತೊಂದರೆಯಾಗುತ್ತದೆಂದು ಹೇಳಿ, ಈ ರೀತಿ ಸರ್‌ಚಾರ್ಜ್ ಹಾಕಿದರೆ ಚೆನ್ನಾಗಿರುತ್ತದೆ ಎಂದೆನಿಸುತ್ತದೆ. ಮಾನ್ಯ ಮುಖ್ಯಮಂತ್ರಿಗಳು 63ನೆಯ ಸೆಕ್ಷನನ್ನು ಪ್ರಸ್ತಾಪಮಾಡುತ್ತಾ 'Composition of Agricultural income-tax' ಎಂದು ಒಂದು ಅವಕಾಶವನ್ನು ಕಲ್ಪಿಸಿಕೊಟ್ಟು ಹೇಳಿ ಒಂದು ಅವಕಾಶ ಕಲ್ಪಿಸಿದ್ದಾರೆ. ಇದು ಬಹುಮಟ್ಟಿಗೆ ಶ್ರೀ ಕರಿಗೌಡರು ಮತ್ತು ಚಂದ್ರಶೇಖರಯ್ಯನವರು ಹೇಳಿದ ತೊಂದರೆಗಳನ್ನು ನಿವಾರಣೆ ಮಾಡುವುದಾಗಿರುವುದರಿಂದ ಈ ಮಸೂದೆಯನ್ನು ಸ್ವಾಗತಿಸುವುದರಿಂದೇನೂ ತಪ್ಪಾಗಲಾರದು.

ಇನ್ನೊಂದು ವಿಚಾರ: ಮಾನ್ಯ ಸ್ನೇಹಿತರಾದ ಶ್ರೀ ಕರಿಗೌಡರು ಹೇಳಿದ ಹಾಗೆ, ಹಣಕಾಸಿನ ಸಚಿವರು ಈ ಮಸೂದೆಯನ್ನು ಮಂಡಿಸತಕ್ಕ ಕಾಲದಲ್ಲಿ ಈ ಬಿಲ್ಲಿಗೆ ಸಂಬಂಧಪಟ್ಟಂತೆ ಕೆಲವು ಅಂಕಿ ಅಂಶಗಳನ್ನು ಶೇಖರಿಸಿ ಮಾತನಾಡಿದ್ದರೆ ಉತ್ತಮವಾಗುತ್ತಿತ್ತು. ಏನೇ ಆಗಲಿ, ಹಾಲಿ ಇರತಕ್ಕ ಅಂಕಿ ಅಂಶಗಳ ಆಧಾರದ ಮೇಲೆ ಹೇಳುವುದಾದರೆ, ಬಳ್ಳಾರಿಯೂ ಸೇರಿ ನಮ್ಮ ದೇಶದಲ್ಲಿ ಸುಮಾರು 14 ಲಕ್ಷ ಚಿಲ್ಲರೆ ಹೋಲ್ಡಿಂಗ್‌ಗಳಿವೆ. ಅಂದರೆ ಜಮೀನು ಪಡೆದಿರತಕ್ಕ ಹಿಡುವಳಿದಾರರ ಸಂಖ್ಯೆ ಇಷ್ಟಿದೆ. 25 ಎಕರೆಗೆ ಒಳಪಟ್ಟಿರುವವರು ಪಡೆದಿರುವ ಹೋಲ್ಡಿಂಗ್ ಸುಮಾರು 12 ಅಥವಾ 11 ಲಕ್ಷ ಚಿಲ್ಲರೆ ಇರಬಹುದು. ಬಾಕಿಯಾದುದು 25 ಎಕರೆ ಮೇಲ್ಪಟ್ಟಿರುವುದು. ಈ ರೀತಿಯಾಗಿ ಬಹುಭಾಗದ ಜನರು ಎಂದರೆ ಸುಮಾರು, 55 ಅಥವಾ 60 ಲಕ್ಷ ಜನರು ಹೋಲ್ಡರ್ಸ್ ಈ ಮಸೂದೆಯನ್ನು ಜಾರಿಗೆ ತರುವಾಗ ಇವರು ಯಾವ ರೀತಿ ಕಮರ್ಷಿಯಲ್ ಕ್ರಾಪ್ಸ್ ಬೆಳೆಯುತ್ತಾರೆ, ಇವರಿಗೆ ಯಾವ ದಾಮಾಷಾ ಪ್ರಕಾರ ತೆರಿಗೆ ಹಾಕಬೇಕು ಎಂಬುದನ್ನು ಯೋಚನೆ ಮಾಡಬೇಕು. ಈ ಕಾನೂನಿನ ಪ್ರಕಾರ 6 ಎಕರೆಗೆ ಒಳಪಟ್ಟಿರುವವರು ಯಾವ ಕಮರ್ಷಿಯಲ್ ಕ್ರಾಪ್ಸ್ ಹಾಕಿದರೂ ಕೂಡ ಈ ತೆರಿಗೆ ಕೊಡಬೇಕಾಗಿಲ್ಲ. ಆಲೂಗೆಡ್ಡೆಯಾಗಲಿ ಅಥವಾ ಈರುಳ್ಳಿಯಾಗಲಿ ಅಥವಾ ಮೆಣಸಿನಕಾಯಿ ಆಗಲಿ 6 ಎಕರೆ ಮೇಲ್ಪಟ್ಟ ಹಿಡುವಳಿಯಲ್ಲಿ ಹಾಕಿರುವವರು ಸುಮಾರು 25 ಎಕರೆ ಜಮೀನುಳ್ಳ 11-12 ಲಕ್ಷ ಜನರ ಪೈಕಿ 50 ಸಾವಿರ ಜನರು ಸಿಕ್ಕುತ್ತಾರೋ ಇಲ್ಲವೋ ಎಂಬ ಭಾವನೆಯಿದೆ. 25 ಎಕರೆ ಪೈಕಿ ಎಲ್ಲವೂ ಖುಷ್ಕೀ ಜಮೀನಾಗಿರುವುದಿಲ್ಲ. ನೀರಾವರಿ ವ್ಯವಸಾಯ ಮಾಡುವ ಪ್ರದೇಶ ಕೂಡಾ ಇರುತ್ತದೆ. ನಾಲೆಯಿಂದ ಅಥವಾ ನಾಲೆಗಳಿಂದ ಕಪಿಲೆ ಹೊಡೆದು ವ್ಯವಸಾಯ ಮಾಡುವ ಪ್ರದೇಶ ಕೂಡಾ ಇರುತ್ತದೆ. ಭಾವಿಗಳಿಂದ ಕಪಿಲೆ ಹೊಡೆದು ಮತ್ತು ಎಲೆಕ್ಟ್ರಿಕ್ ಪಂಪ್ ಮೂಲಕ ನೀರನ್ನೆತ್ತಿ ವ್ಯವಸಾಯ ಮಾಡುವ ಬೇಸಾಯಗಾರರು 7-8 ಎಕರೆ ಪ್ರದೇಶದಲ್ಲಿ ಕಮರ್ಷಿಯಲ್ ಕ್ರಾಪ್ಸ್ ಬೆಳೆಯಬಹುದೇ ಹೊರತು ಖುಷ್ಕಿ ಜಮೀನು ಇರುವವರು 25 ಎಕರೆ ಇದ್ದರೂ 6 ಎಕರೆಗಿಂತ ಹೆಚ್ಚು ಪ್ರದೇಶದಲ್ಲಿ ಕಮರ್ಷಿಯಲ್ ಕ್ರಾಪ್ಸ್ ಬೆಳೆಯುವುದು ತೀರ ಅಸಂಭವ, ಸಾಧ್ಯವಿಲ್ಲ ಏಕೆಂದರೆ ಕೆಲವು ಭಾಗ ರಾಗಿಗೆ, ಕೆಲವು ಭಾಗ ಜೋಳಕ್ಕೆ, ದನ ಮೇಯಿಸುವುದಕ್ಕೆ ಇಟ್ಟುಕೊಳ್ಳಬೇಕಾಗುತ್ತದೆ. ಇತರ ಬೆಳೆಗೆ ಮತ್ತು ಉಪಯೋಗಕ್ಕೆ ಎಷ್ಟು ಜಮೀನು ಬೇಕೋ ಅಷ್ಟನ್ನು ಇಟ್ಟುಕೊಂಡು ಬಾಕಿ ಪ್ರದೇಶದಲ್ಲಿ ಕಮರ್ಷಿಯಲ್ ಕ್ರಾಪ್ಸ್ ಬೆಳೆಯಬಹುದು. ಹಾಗಿರುವಾಗ ಎಲ್ಲ ರೈತರಿಗೂ ಈ ಬಿಲ್ಲು ಇರುವ ರೀತಿಯಲ್ಲಿ ಕಷ್ಟವಾಗುತ್ತದೆ. ಎಲ್ಲರೂ ಕೂಡ ಲೆಖ್ಖ ಪತ್ರ ಇಡಬೇಕಾಗುತ್ತದೆ ಎಂದು ಶಂಕೆಪಡುವುದಕ್ಕೆ ಅವಕಾಶವಿಲ್ಲ.

ಆಮೇಲೆ ಕಾಫಿ ಬೆಳೆಯ ವಿಚಾರವನ್ನು ಕೆಲವರು ಪ್ರಸ್ತಾಪ ಮಾಡಿದ್ದಾರೆ. ಮೈಸೂರಿನ ಅಕ್ಕಪಕ್ಕದಲ್ಲಿ ಕೊಡಗು ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿ ಕಾಫಿ ಬೆಳೆಯುವ ಪ್ರದೇಶಗಳಿಗೆ ನಮ್ಮ ದೇಶದ ಕಾಫಿ ಬೆಳೆಯುವ ಪ್ರದೇಶಗಳನ್ನು ಹೋಲಿಸಿನೋಡಿದರೆ ಈ ಬೆಳೆ ಅಲ್ಲಿರುವಷ್ಟು ಆಶಾದಾಯಕವಾಗಿಲ್ಲ, ಅಲ್ಲಿನ ಬೆಳೆಗೆ ಹೋಲಿಸಿದರೆ ಸರಿಹೊಂದುವುದಿಲ್ಲ ಎಂದು ಕೆಲವು ಅಂಕಿ ಅಂಶಗಳ ಆಧಾರದ ಮೇಲೆ ನಿಪುಣರು ಮತ್ತು ಅನುಭವಶಾಲಿಗಳು ಹೇಳುತ್ತಿದ್ದಾರೆ.

ಇದಕ್ಕೆ ಮುಖ್ಯ ಕಾರಣವೇನೆಂದರೆ, ನಮ್ಮ ದೇಶದಲ್ಲಿರುವ ಕಾಫಿ ತೋಟಗಾರರಿಗೆ ಮುತುವರ್ಜಿ ಕಡಿಮೆ ಎಂದು ಹೇಳಬಹುದು. ಇದಕ್ಕಿಂತ ಹೆಚ್ಚಾಗಿ ಹೇಳುವುದು, ಒಂದು ಕಾಫಿ ಗಿಡ 30 40 ವರ್ಷಗಳವರೆಗೆ ಇರುತ್ತದೆ. ನಮ್ಮ ದೇಶದ ಕಾಫಿ ಗಿಡಗಳು ಬಹಳ ಹಳೆಯದಾಗಿವೆ, ಇದರಿಂದ ಒಂದು ಎಕರೆಗೆ ಬರುವ ಉತ್ಪತ್ತಿ ಕೊಡುಗು ಮತ್ತು ಮದ್ರಾಸುಗಳಲ್ಲಿರುವುದಕ್ಕಿಂತಲೂ ಕಡಿಮೆಯಾಗಿದೆ. ಹೀಗೆ ಉತ್ಪತ್ತಿ ಕಡಿಮೆಯಾಗಿರುವುದರಿಂದ ಕಾಫಿ ಬೆಳೆಯುವವರು ಕೆಲವು ರಿಯಾಯಿತಿಗಳನ್ನು ಕೊಟ್ಟಿದ್ದಾರೆ. ಕೊಡಗಿನಲ್ಲಿರುವ 1951ನೇ ಇಸವಿಯ ಅಗ್ರಿಕಲ್ಚರಲ್ ಇನ್‌ಕಂಟ್ಯಾಕ್ಸ್ ಆಕ್ಟ್ ಪ್ರಕಾರ ಪರಮಾವಧಿಯ ದರ 4ರ ಅಣೆ ಮೇಲೆ ಇಲ್ಲ. ಅದೇ ಇಲ್ಲಿ ಈಗ 5 ಅಣೆ 6 ಕಾಸು ಹಾಕಿದೆ, ಅಂದರೆ 1 ರೂಪಾಯಿಸಲ್ಲಿ 1/3ನೇ ಭಾಗವನ್ನು ತೆಗೆದುಕೊಂಡರೆ ಬಹಳ ತೊಂದರೆಯಾಗುತ್ತದೆ. ಇದನ್ನು ಕಡಿಮೆಮಾಡಿ ಕೊಡಗಿನಲ್ಲಿರುವಂತೆ ರೂಪಾಯಿನಲ್ಲಿ $^1/_4$ ಭಾಗವನ್ನಾದರೂ ವಸೂಲು ಮಾಡಿದರೆ ಸ್ವಲ್ಪ ಸಹಾಯವಾಗುತ್ತದೆ, ಸ್ವಲ್ಪ ಆದಾಯ ಉಳಿದರೆ ಮುಂದಿನ ವ್ಯವಸಾಯಕ್ಕೆ ಆ ಹಣವನ್ನು ಬಂಡವಾಳವನ್ನಾಗಿ ಇಟ್ಟುಕೊಂಡು ಉಪಯೋಗಿಸುವುದಕ್ಕೆ ಅವಕಾಶವಾಗುತ್ತದೆ. ಆ ರೀತಿ 5 ಅಣೆ 6 ಕಾಸು ಎಂದು ನಿಗದಿ ಮಾಡಿರುವ ದರವನ್ನು ಸ್ವಲ್ಪ ಕಡಿಮೆ ಮಾಡಬೇಕು ಎಂಬುದು ಒಂದು ವಿಚಾರ.

ಇದರ ಜೊತೆಗೆ ಷೆಡ್ಯೂಲಿನ ಎರಡನೆಯ ಭಾಗದಲ್ಲಿ 63ನೇ ಸೆಕ್ಷೆನ್‌ಗೆ ಸಂಬಂಧಪಟ್ಟ ಹಾಗೆ 36 ಎಕರೆಗೆ ಮೇಲ್ಪಟ್ಟು 54 ಎಕರೆಗಿಂತ ಜಾಸ್ತಿಯಾಗಿಲ್ಲದಿರುವುದಕ್ಕೆ 5 ರೂಪಾಯಿ ಎಂದಿದೆ. ಕಾಫಿ ಬೆಳೆಯುವವರಿಗೆ 36 ಎಕರೆ ಮೇಲ್ಪಟ್ಟು 51 ಎಕರೆ ಒಳಗೆ ಇರುವ ಪ್ರದೇಶಕ್ಕೆ 5 ರೂಪಾಯಿ ದರವಿದೆ. 18 ಎಕರೆ ಒಳಪಟ್ಟಿರುವವರಿಗೆ ವಿನಾಯಿತಿ ಇದೆ. 54 ಎಕರೆ ಮೇಲ್ಪಟ್ಟು ಕಾಫಿತೋಟ ಇಟ್ಟುಕೊಂಡಿರುವವರಿಗೆ 63ನೇ ಸೆಕ್ಷೆನ್‌ನಲ್ಲಿ ರಿಯಾಯಿತಿ ಏನು ಕೊಟ್ಟಿದ್ದೀರೋ, ಒಂದು ಸೌಕರ್ಯವೇನು ಕೊಟ್ಟಿದ್ದಿರೋ ಅದು ಅನ್ವಯಿಸುವುದಿಲ್ಲ, ಅವರು ಎಲ್ಲಿದ್ದರೂ ಲೆಖ್ಖವಿಡಲೇ ಬೇಕು, ತೆರಿಗೆ ಆ ಲೆಖ್ಖದ ಪ್ರಕಾರ ಕೊಡಲೇಬೇಕು. 54 ಎಕರೆ ಮೇಲ್ಪಟ್ಟವರಿಗೆ ಕೂಡಾ 54 ಎಕರೆ ಒಳಪಟ್ಟಿರುವವರಿಗೆ ಏನು ರಿಯಾಯಿತಿ ಕೊಡುತ್ತೀರೋ ಅದನ್ನು ಕೊಡಬೇಕು, ಈ ಲಿಮಿಟ್ ತೆಗೆದು ಒಂದು (slab) ಸ್ಲ್ಯಾಬ್ ರೇಟ್ ಪ್ರಕಾರ 54ರಿಂದ 75 ಎಕರೆಯವರೆಗೆ, 75 ರಿಂದ 100 ಎಕರೆಯವರೆಗೆ 5 ರೂಪಾಯಿ ಅಥವಾ ದಾಮಾಷಾ ಪ್ರಕಾರ ಒಂದು ದರ ನಿಗದಿ ಮಾಡುವುದು ಸೂಕ್ತ ಹಾಗೆ ಮಾಡುವುದರಿಂದ ಈಗಿರುವ ಇನ್‌ಕಂಟ್ಯಾಕ್ಸ್ ರೀತಿಯಲ್ಲಿ ಲೆಖ್ಖ ಪತ್ರ ಕೊಡಲು ಅವಕಾಶವಾಗುತ್ತದೆ. ಹಾಗಿಲ್ಲದಿದ್ದರೆ ಎಕರೆವಾರು ಹಣ ಕೊಡಲು ಒಂದು ಅವಕಾಶ ಕಲ್ಪಿಸಿಕೊಟ್ಟ ಹಾಗಾಗುತ್ತದೆ. ಈ ರೀತಿಯಾಗಿ ಒಂದು ಬದಲಾವಣೆ ಮಾಡಬೇಕು ಎಂದು ನಾನು ಅಭಿಪ್ರಾಯ ಪಡುತ್ತೇನೆ.

ಆಮೇಲೆ ಗೋಪಾಲಗೌಡರು ಸಮಾಜವಾದದ ವಿಚಾರವಾಗಿ ಒಂದೆರಡು ಮಾತನ್ನು ಪ್ರಸ್ತಾಪಿಸಿದರು. ಸಮಾಜವಾದದ ತಳಹದಿಯ ಮೇಲೆ ನಾವು ದೇಶವನ್ನು ಕಟ್ಟಬೇಕಾದರೆ ಈ ತೆರಿಗೆಗಳಿಂದ ಅಷ್ಟೇನೂ ಸಹಾಯವಾಗುತ್ತದೆಯೋ ಇಲ್ಲವೋ ಎಂಬುದಾಗಿ ಹೇಳಿ, ನಮ್ಮ ದೇಶದಲ್ಲಿ ಈಗಿರುವ ಸಮಾಜವಾದದ ತತ್ವದ ಮೇಲೆ ದೇಶ ಕಟ್ಟಲು ಸರಿಯಾಗಿಲ್ಲ, ಆ ರೀತಿಯ

ವಾತಾವರಣ ಕಲ್ಪಿಸುತ್ತಿಲ್ಲ ಎಂದು ಆಕ್ಷೇಪಿಸಿದರು. ಅವರು ಹೇಳುವುದರಲ್ಲಿ ಸ್ವಲ್ಪ ಅರ್ಥವಿದೆಯೆಂದು ಹೇಳುತ್ತೇನೆ. ಆದರೆ ನಮ್ಮ ಮಾನ್ಯಮಿತ್ರರು ಒಂದು ವಿಚಾರವನ್ನು ಮರೆತಹಾಗೆ ಕಾಣುತ್ತದೆ. ಪ್ರಪಂಚದಲ್ಲಿ ಸಮಾಜವಾದ ಸ್ಥಾಪನೆಯಾಗಿರುವ ರಷ್ಯಾ ಮತ್ತು ಚೈನಾ ದೇಶಗಳನ್ನು ತೆಗೆದುಕೊಂಡರೆ ಅಲ್ಲಿ ಪ್ರಜಾಪ್ರಭುತ್ವವಿದ್ದಾಗ ಸೋಷಿಯಲಿಸ್ಟಿಕ್ ಪ್ಯಾಟ್ರನ್ ಆಫ್ ಸೊಸೈಟಿ ಕ್ರಿಯೇಟ್ ಮಾಡಲು ಪ್ರಯತ್ನ ಮಾಡಿಲ್ಲ. ಪ್ರಜಾಪ್ರಭುತ್ವದ ಆಧಾರದ ಮೇಲೆ ಸರ್ಕಾರ ನಡೆಸುತ್ತಿರುವಾಗ, ಗೋಪಾಲಗೌಡರು ಹೇಳುವ ಹಾಗೆ, ಒಂದೇ ಸಾರಿ ಅದಕ್ಕೆ ಬೇಕಾದ ವಾತಾವರಣ ಕಲ್ಪಿಸಲು ಸಾಧ್ಯವಾಗುವುದಿಲ್ಲವೆಂಬುದನ್ನು ಅವರು ಜ್ಞಾಪಕದಲ್ಲಿಡಬೇಕು. ಏಕೆಂದರೆ, ಈಗಾಗಲೇ ಈ ತೆರಿಗೆಯನ್ನು ಈಗಿರುವ ಪರಿಮಿತಿಯಲ್ಲೂ ಕೊಡಲು ಕಷ್ಟವಾಗುತ್ತದೆ. ವಿನಾಯತಿ ಕೊಡಬೇಕು ಎಂದು ಹೇಳಿದ್ದರೆ ಅಡಕೆತೋಟಗಳ ವಿಚಾರ ಹೇಳಿದ್ದಾರೆ. ಆರು ಎಕರೆಗಳಿಗೆ ಅಡಕೆತೋಟದಲ್ಲಿ ವಿನಾಯತಿ ಇದೆ. ಅದಕ್ಕೆ ಮೇಲ್ಪಟ್ಟಿದ್ದರೆ ತೆರಿಗೆ ಕೊಡಬೇಕು, ಅದು ಜಾಸ್ತಿ ಎಂದು ವಾದ ಮಾಡಿದರು. ಒಂದು ಮಣ ಅಡಿಕೆ ಬೆಳೆಯಲು ಸುಮಾರು 40 ರೂಪಾಯಿ ಖರ್ಚಾಗುತ್ತದೆಂದು ಬಲ್ಲವರು ಹೇಳುತ್ತಾರೆ. ಒಂದು ಎಕರೆಗೆ 20 ಮಣ ಅಡಿಕೆಯಾಗುತ್ತದೆ. ಒಂದು ಲಕ್ಷ ಅಡಿಕೆ ಬೆಳೆಯಲು 700ರೂಪಾಯಿ ಖರ್ಚಾಗುತ್ತದೆಂದು ಹೇಳಿದರು. ಒಂದು ಲಕ್ಷ ಅಡಿಕೆ ಅಂದರೆ ಸಿಪ್ಪೆ ಸಮೇತ ಇರುವ ಅಡಿಕೆ. ಹದಮಾಡಿದ ಮೇಲೆ 16 ರಿಂದ 20 ಮಣ ಅಡಿಕೆ ಅದರಿಂದ ದೊರೆಯುತ್ತದೆ. ಹಸೀ ಅಡಿಕೆಗೆ ಲೆಕ್ಕ ಇಡಬೇಕು. ಅದಕ್ಕೆ 500-600 ರೂಪಾಯಿ ಸಹ ಇದೆ. ಕೆಲವು ಕಡೆ 400 ರೂಪಾಯಿ ಸಹ ಇದೆ. ಒಂದು ಲಕ್ಷ ಅಡಿಕೆ ಬೆಳೆದು ಹದಮಾಡಲು 800 ರೂಪಾಯಿ ಖರ್ಚಾಗುತ್ತದೆ ಎಂದು ಹೇಳಿದರು. ಅಷ್ಟು ಖರ್ಚಾಗುವುದಿಲ್ಲ. ಮುಖ್ಯಮಂತ್ರಿಗಳು, ವಿನಾಯಿತಿ ತೋರಿಸಬೇಕೆಂದು ಹೇಳಿದರೆ ತೋರಿಸುವುದಾಗಿ ಹೇಳಿದ್ದಾರೆ. ಒಂದು ವೇಳೆ ಹಾಗೆ ಮಾಡುವುದಾದರೆ ನನ್ನದೇನೂ ಅಭ್ಯಂತರವಿಲ್ಲ, 15 ಎಕರೆಗೆ ಬೇಕಾದರೂ ತೋರಿಸಲಿ, ಕಾನೂನಿನಲ್ಲಿ ಈ ಷೆಡ್ಯೂಲ್‌ನಲ್ಲಿರುವುದು ಸರಿಯಾದ ಆಧಾರದ ಮೇಲೆ ನಿಗದಿ ಮಾಡಿರತಕ್ಕದ್ದಲ್ಲವೆಂದು ನಾನು ಭಾವಿಸುತ್ತೇನೆ. ಈಗಿರುವ ವಿನಾಯಿತಿಗಳು ಸಾಲದು ಇನ್ನೂ ಹೆಚ್ಚಿಗೆ ಬೇಕು ಎಂದು ಕೇಳುವ ಗೊಂದಲದಲ್ಲಿ ಸಿಕ್ಕಿ ನಾವು ತೆರಿಗೆ ಹಾಕಬೇಕಾದರೆ, ಒಂದು ವೇಳೆ ಸಮಾಜವಾದ ಪದ್ಧತಿಯನ್ನು ಅನುಸರಿಸಿ ಬೆಳೆಸಬೇಕಾದರೆ, ದೇಶಕ್ಕೆ ಹಣ ಹೆಚ್ಚಾಗಿ ಬರಬೇಕೆಂದು ಹೇಳುವಾಗ ಸರ್ಕಾರಕ್ಕೆ ಹೆಚ್ಚು ಹಣಬೇಕು, ದೊಡ್ಡ ದೊಡ್ಡ ಕೆಲಸಕಾರ್ಯ ಮತ್ತು ಯೋಜನೆಗಳನ್ನು ಕೈಗೊಳ್ಳಬೇಕು ಎನ್ನುವ ಕಾಲದಲ್ಲಿ ವಿನಾಯಿತಿಗೆ ತೀರ ಹೊಡೆದಾಡುತ್ತ ಕುಳಿತಿರುವಾಗ ಈ ಪ್ರಜಾಪ್ರಭುತ್ವದ ಒಂದು ಸನ್ನಿವೇಶದಲ್ಲಿ ನಾವು ಬಯಸುವುದೆಲ್ಲವನ್ನು ಕೂಡ ಏಕಕಾಲದಲ್ಲಿ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಒಂದು ವೇಳೆ ಒಂದು ಪಾರ್ಟಿ ಗವರ್ನಮೆಂಟ್ ಆಗಿದ್ದ ಪಕ್ಷದಲ್ಲಿ ಪೂರ್ವಭಾವಿಯಾಗಿ ಒಂದು ತೀರ್ಮಾನಮಾಡಿ ಬಾಕಿಯವರು ಯಾರು ಏನೇ ಹೇಳಲಿ ಅದಕ್ಕೆ, ಒಪ್ಪದೇ ಇರಲಿ ಆ ಪಾರ್ಟಿ ಏನು ಹೇಳುತ್ತದೆಯೋ ಅದನ್ನೇ ದೇಶವೆಲ್ಲಾ ಕೇಳಬೇಕು ಎಂದು ಹೇಳಿ ಮಾಡಬಹುದಿತ್ತು; ಎಲ್ಲಾ ಸುಧಾರಣೆಗಳನ್ನೂ ಒಂದೇ ಸಾರಿ ತರಬಹುದಿತ್ತು. ಶ್ರೀ ಇಮಾಂರವರು ಹೇಳುವ, ಹಾಗೆ, ಈಗಿನ ಸನ್ನಿವೇಶದಲ್ಲಿ ಸರ್ಕಾರಿ ಅಧಿಕಾರಿಗಳ ಸಂಬಳದಲ್ಲೂ

ಕೂಡ 1,000 ರೂಪಾಯಿಗೆ ಮೇಲ್ಪಟ್ಟಿರುವುದರಲ್ಲಿ ಶೇಕಡ 20-25ರಷ್ಟು ಖೋತಾಮಾಡಿ ಆ ಹಣವನ್ನು ಉಪಯೋಗಿಸಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಳ್ಳಬಹುದು. ಆದ್ದರಿಂದ ಎಲ್ಲವನ್ನೂ ಏಕಕಾಲದಲ್ಲಿ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಆದರೇನು ಸರ್ಕಾರದವರು ಒಬ್ಬ ವ್ಯವಸಾಯಗಾರರ ಮೇಲೆ ಒಂದು ಟ್ಯಾಕ್ಸೇಷನ್ ಬಿಲ್ ತಂದು, ಟೆನೆನ್ಸಿ ಬಿಲ್ ಮೂಲಕ ಅವರಿಗೆ ಎಲ್ಲೆಲ್ಲಿ ಜಮೀನು ಹಂಚಿಕೆ ಮಾಡಿಸಬಹುದು ಅಥವಾ ಸೀಲಿಂಗ್ ಲಿಮಿಟ್, ನಿಗದಿಮಾಡಬೇಕು ಎಂದು ಹೇಳುತ್ತಾ ಇದ್ದೇವೆಯೋ ಅಷ್ಟು ಮಾಡಿದರೆ ಸಾಲದು. ಎಲ್ಲಾ ವಿಧವಾದ ಐಶ್ವರ್ಯಕ್ಕೂ, ಟ್ಯಾಕ್ಸೇಷನ್ ಎನ್‌ಕ್ವೈರಿ ಕಮಿಟಿಯವರು ಹೇಳಿರುವ ಹಾಗೆ, ಸೀಲಿಂಗ್ ಲಿಮಿಟ್ ನಿಗದಿಮಾಡಿದರೆ ಸರಿಹೋಗುತ್ತದೆ. ದೇಶದಲ್ಲಿ ಆರ್ಥಿಕ ಸ್ಥಿತಿ ಬದಲಾವಣೆ ಮಾಡುವುದಕ್ಕೆ ಇದು ಒಂದು ಬುನಾದಿಯನ್ನು ಹಾಕಿದ ಹಾಗಾಗುತ್ತದೆ ಎಂದು ಹೇಳಿ ಈ ಮಸೂದೆಯನ್ನು ಸಮರ್ಥಿಸುತ್ತೇನೆ.

# 7. ಮೈಸೂರು ಟೆನನ್ಸಿ ಕಾಯಿದೆಗಳ (ತಿದ್ದುಪಡಿ) ವಿಧೇಯಕ 1962

(11-3-1962)

ಶ್ರೀ ಡಿ. ದೇವರಾಜ ಅರಸ್‌-. ಈ ತಿದ್ದುಪಡಿಯಲ್ಲಿ ಸರ್ಕಾರದವರು 1962ನೆಯ ಮಾರ್ಚಿ ಆರರವರೆಗೆ ಕಾಲಾವಕಾಶ ಕೇಳಿದ್ದರೂ ಸಹ ಅವರು ಅಲ್ಲಿಯವರೆಗೂ ಭೂ ಸುಧಾರಣೆ ಶಾಸನವನ್ನು ಜಾರಿಗೆ ತರದೆ ನಿಧಾನ ಮಾಡುತ್ತಾರೆಂಬುದಕ್ಕೆ ಯಾವ ಆಧಾರವೂ ಇಲ್ಲ. ಆದರೆ ಆ ಭೂ ಸುಧಾರಣೆ ಶಾಸನವನ್ನು ಆದಷ್ಟು ಜಾಗ್ರತೆಯಿಂದ ಜಾರಿಗೆ ತರಬೇಕೆಂದು ಒತ್ತಾಯ ಮಾಡುತ್ತೇನೆ. ಈಗ ಸರ್ಕಾರದವರು ಮುಂದಿನ ಬಡ್ಜೆಟ್ ಅಧಿವೇಶನದೊಳಗೆ ಆ ತಿದ್ದುಪಡಿಗಳನ್ನು ತರುವುದಾಗಿ ಒಂದು ಭರವಸೆ ಕೊಟ್ಟರೆ ನಾನಿನ್ನು ಹಾಲಿ ಜಾರಿಯಲ್ಲಿರತಕ್ಕ ಗೇಣೀದಾರರ ಶಾಸನದ ಬಗ್ಗೆ ಹೇಳಬೇಕಾದ ಒಂದು ಎರಡು ವಿಷಯಗಳಿಗೆ, ಅವುಗಳನ್ನು ಈ ಮಾನ್ಯ ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ.

ಮೈಸೂರು ಗೇಣಿದಾರರ ಶಾಸನದಲ್ಲಿರತಕ್ಕ ಮುಖ್ಯವಾದ ಎರಡು ಮೂರು ಅಂಶಗಳೇನೆಂದರೆ: ನಮ್ಮ ಹಳೇ ಮೈಸೂರು ಭಾಗದಲ್ಲಿ ಗೇಣಿದಾರರಿಗೆ ಇರತಕ್ಕ ಮೊದಲನೆಯ ರಕ್ಷಣೆ ಒಂದು ಏನೆಂದರೆ- ಐದು ವರ್ಷಗಳ ತನಕ ಜಮೀನ್ದಾರರು ಗೇಣಿದಾರರನ್ನು ಬಿಡಿಸಬಾರದು ಎಂಬುದು. ಎರಡನೆಯದು ಗೇಣಿಪರಿಮಿತಿಯ ನಿರ್ಧಾರ. ಮೂರನೆಯದು-ಭೂಮಿಯನ್ನು ಮಾರಾಟ ಮಾಡುವಾಗ ಮೊದಲನೆಯ ಅವಕಾಶವನ್ನು ಗೇಣಿದಾರನಿಗೇ ಕೊಡಬೇಕೆಂಬ ನಿರ್ಬಂಧ ಇಷ್ಟು ಮಾತ್ರ ಗೇಣಿದಾರರಿಗೆ ಇರತಕ್ಕ ರಕ್ಷಣೆಗಳು. ಈ ಸಂಬಂಧದಲ್ಲಿ ನಾನು ನನ್ನ ಸ್ವಂತ ಅನುಭವಕ್ಕೆ ಬಂದಿರತಕ್ಕ ವಿಚಾರವನ್ನು ಮಾತ್ರ ಈಗ ಪ್ರಸ್ತಾಪ ಮಾಡಲಿಚ್ಛಿಸ್ತೇನೆ. ಬೊಂಬಾಯಿ ಕರ್ನಾಟಕ ಪ್ರಾಂತ್ಯಾದಿಂದ ಬಂದಿರತಕ್ಕ ನಮ್ಮ ಸ್ನೇಹಿತರುಗಳು ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಗೇಣಿದಾರರಿಗೆ ಈ ಶಾಸನದ ರಕ್ಷಣೆಗಳು ಸಾಕಷ್ಟು ದೊರೆಯುತ್ತಿವೆ ಎಂದು ಹೇಳುತ್ತಿದ್ದಾರೆ. ಆದರೆ ಹಳೇ ಮೈಸೂರು (ಭಾಗದಲ್ಲಿರತಕ್ಕ) ಗೇಣಿದಾರರಿಗೆ ಇದರಿಂದ ಯಾವ ರಕ್ಷಣೆಯೂ ದೊರೆಯುತ್ತಿಲ್ಲ. ಹೆಸರಿಗೆ ಮಾತ್ರ ಕಾನೂನಿರುತ್ತದೆ. ಇಂಥ ಹೆಸರಿಗೆ ಮಾತ್ರ ಇರತಕ್ಕ ಕಾನೂನನ್ನು ನಾವು ಇಲ್ಲಿಗೆ ಮುರ್ನಾಲ್ಕು ವರ್ಷಗಳಿಂದಲೂ ಮುಂದುವರಿಸಿಕೊಂಡು ಬರುತ್ತಿದ್ದೇವೆ, ಆದರೆ ರಕ್ಷಣೆ ಮಾತ್ರ ದೊರೆಯುತ್ತಿಲ್ಲ ಇಂಥ ಒಂದು ಕಾನೂನು ಜಾರಿಯಲ್ಲಿ ಇಲ್ಲದಿದ್ದರೆ ಏನು ತೊಂದರೆಗಳು ಇರುತ್ತಿದ್ದವೋ ಆ ಎಲ್ಲ ತೊಂದರೆಗಳೂ ಈ ಕಾನೂನಿದ್ದರೂ ಇದ್ದೇ ಇದೆ. ಇದಕ್ಕೆ ಮೂಲ ಕಾರಣವೇನೆಂದರೆ: ಇದನ್ನು ನಾನು ಈ ಹಿಂದೆ ಸಹ ಆಗಲೇ ಒಂದಾವರ್ತಿ ಹೇಳಿದ್ದೇನೆ. ಆಗ ನಾನು ಈ ಕಾರಣವನ್ನು ಹೇಳಿದ ಮೇಲೆ ಆಗಿದ್ದ ರೆವಿನ್ಯೂ ಮಂತ್ರಿಗಳಾದ ಶ್ರೀ ಎಂ.ಪಿ.ಪಾಟೀಲ್‌ರವರು ಒಂದು ಸರ್ಕಾರಿ ಆಜ್ಞೆಯನ್ನು ಹೊರಡಿಸಿ ಪ್ರತಿಯೊಂದು ತಾಲ್ಲೂಕಿನಲ್ಲೂ ಆಯಾಯ ತಾಲ್ಲೂಕಿನಲ್ಲಿರತಕ್ಕ ಪ್ರತಿಯೊಂದು ಹಳ್ಳಿಯಲ್ಲೂ ಎಷ್ಟು ಜನ ಗೇಣಿದಾರರು- ಗಳಿದ್ದಾರೆಂಬುದರ ಬಗ್ಗೆ ಒಂದು ರಿಜಿಷ್ಟರನ್ನು ಇಡಬೇಕೆಂದು ತಿಳಿಸಿದ್ದರು. ಆ ಗೇಣಿದಾರರ ಹೆಸರುಗಳನ್ನು ಆ ರಿಜಿಷ್ಟರಿನಲ್ಲಿ ಬರೆದಿಡಬೇಕೆಂದು ತಿಳಿಸಿದ್ದರು. ಆ ಬಗ್ಗೆ ಪ್ರೋಫಾರ್ಮ

ಸಹ ಪ್ರಿಂಟ್ ಮಾಡಿಸಿ ಎಲ್ಲ ಕಡೆಗೂ ಹಂಚಿಸಲಾಗಿತ್ತು. ಆದರೆ ಯಾವ ದಿವಸ ಮಂತ್ರಿಗಳಾಗಿದ್ದ ಎಂ. ಪಿ. ಪಾಟೀಲರು ಅಧಿಕಾರವನ್ನು ಕೈಬಿಟ್ಟರೋ ಅಂದೇ ಅವರು ಮಾಡಿದ್ದ ಆರ್ಡರು ಮೂಲೆಗೆ ಬಿತ್ತು.

ಶ್ರೀ ಕಡಿದಾಳ್‌ಮಂಜಪ್ಪ- ಈಗಲೂ ಅದು ಜಾರಿಯಲ್ಲಿದೆ; ಬರೆದಿಡುತ್ತಿದ್ದಾರೆ.

ಶ್ರೀ ಡಿ. ದೇವರಾಜ ಅರಸ್- ಶ್ರೀಮಾನ್ ಮಂಜಪ್ಪನವರು ಈಗ ಈ ವಿಚಾರವನ್ನು ಎತ್ತದಿದ್ದರೆ ಬಹಳ ಚೆನ್ನಾಗಿತ್ತು. ಅವರು ಈ ವಿಚಾರವನ್ನು ಅವರ ಮನಸ್ಸಿನಲ್ಲೇ ಇಟ್ಟುಕೊಂಡಿದ್ದರೆ ಚೆನ್ನಾಗಿತ್ತು. ಇತ್ತೀಚೆಗೆ ಶ್ರೀಮಾನ್ ಮಂಜಪ್ಪನವರಿಗೆ ಅಷ್ಟಾಗಿ ತಾಲ್ಲೂಕ್ ಕಛೇರಿಗಳ ವಿಚಾರ ಗೊತ್ತಿಲ್ಲ. ಏಕೆಂದರೆ ಅವರು ಮಂತ್ರಿಪದವಿಯಲ್ಲಿದ್ದರು. ಆ ಮಂತ್ರಿಪದವಿಯಲ್ಲಿ ಇದ್ದೂ ಅಧಿಕಾರಿಗಳನ್ನು ಮುಚ್ಚಿಟ್ಟುಕೊಳ್ಳತಕ್ಕ ಆ ಒಂದು ಧಾಟಿಯಲ್ಲೇ ಈಗಲೂ ಅವರು ಮಾತನಾಡುತ್ತಿದ್ದಾರೆ. ಪ್ರತಿ ದಿವಸವೂ ಕಚೇರಿಗೆ ತಿರುಗತಕ್ಕ ನಮಗೆ ಗೊತ್ತು ಶೇಕದಾರರು-ಶ್ಯಾನುಭೋಗರು ಏನು ಕೆಲಸ ಮಾಡುತ್ತಾರೆ ಎನ್ನುವುದು.

ಈ ದಿವಸ ಯಾವ ತಾಲ್ಲೂಕ್ ಕಛೇರಿಯಲ್ಲೂ ಈ ರಿಜಿಷ್ಟರುಗಳನ್ನಿಟ್ಟಿಲ್ಲ. ಯಾವ ಯಾವ ತಾಲ್ಲೂಕಿನಲ್ಲಿ ಎಷ್ಟೆಷ್ಟು ಜನ ಗೇಣಿದಾರರಿದ್ದಾರೆ, ಅವರ ಹೆಸರೇನು ಎಂಬುದು ಯಾರಿಗೂ ಗೊತ್ತಿಲ್ಲ, ನನ್ನ ಭಾಗದ ತಾಲ್ಲೂಕ್‌ಗಳ ವಿಚಾರ ಹೇಳುವುದಾದರೆ ಅಲ್ಲಿ ಯಾರಿಗೂ ಈ ವಿಚಾರ ಗೊತ್ತೇ ಇಲ್ಲ. ಬೊಂಬಾಯಿ ಕರ್ನಾಟಕ ಪ್ರಾಂತ್ಯದಲ್ಲೇನೋ ಈ ವಿಚಾರ ಸರಿಯಾಗಿ ನಡೆಯುತ್ತಿದೆಯೆಂದು ನನ್ನ ಆ ಭಾಗದ ಸ್ನೇಹಿತರು ಹೇಳುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ವಿಚಾರ ನನಗೆ ಗೊತ್ತಿಲ್ಲ. ನಮ್ಮ ಹಳೇ ಮೈಸೂರು ಭಾಗದ ವಿಚಾರದಲ್ಲಿ ಹೇಳುವುದಾದರೆ ಕೆಲವು ತಾಲ್ಲೂಕುಗಳಲ್ಲಿ ತಹಶೀಲ್‌ದಾರರೇ ಈ ರಿಜಿಷ್ಟರನ್ನು ಮೈನ್‌ಟೇನ್ ಮಾಡದಿರಲು ಏನೇನು ಕಾರ್ಯಗಳನ್ನು ಮಾಡಬೇಕೋ ಅದೆಲ್ಲವನ್ನು ಮಾಡಿದ್ದಾರೆ. ಈ ವಿಚಾರವನ್ನು ರೆಕಾರ್ಡಿನಲ್ಲಿಟ್ಟರೆ ಮುಂದೆ ಗೇಣೀದಾರರಿಂದ ತಮಗೂ ಧಕ್ಕೆಬರುತ್ತದಲ್ಲ ಎಂದು ತಹಶೀಲ್‌ದಾರರೇ ಈ ರಿಜಿಷ್ಟರುಗಳನ್ನಿಡುವುದನ್ನು ತಪ್ಪಿಸುತ್ತಿದ್ದಾರೆ.

ಶ್ರೀ ಎಚ್. ಆರ್. ಕೇಶವಮೂರ್ತಿ.- ಪಾಯಿಂಟ್ ಆಫ್ ಆರ್ಡರ್ ಸಾರ್ ಅವರು ಹೇಳುತ್ತಿರುವುದು ಸರಿಯಲ್ಲ. ಈಗ ಎಷ್ಟೋ ಕಡೆ ಆ ರಿಜಿಷ್ಟರ್‌ಗಳನ್ನು ಇಟ್ಟಿದ್ದಾರೆ.

**Mr. SPEAKER**- The Hon'ble members must know that request for information can never be a point of order.

ಶ್ರೀ ಡಿ. ದೇವರಾಜ ಅರಸ್- ಈ ರಿಜಿಸ್ಟಾರ್‌ಗಳನ್ನು ಒತ್ತಾಯವಾಗಿ ಇಡಲೇಬೇಕೆಂಬ ಆಜ್ಞೆ ಇನ್ನೂ ಜಾರಿಯಲಿರುವುದಾದರೆ ಎಲ್ಲ ಕಡೆಗಳಲ್ಲೂ ಆ ರಿಜಿಸ್ಟಾರ್‌ಗಳನ್ನು ಇಡುವಂತೆ ಮಾಡಲಿ. ಇಲ್ಲವೇ ಆ ಆಜ್ಞೆ ರದ್ದಾಗಿದ್ದರೆ ಮತ್ತೆ ಅದನ್ನು ಹೊಸದಾಗಿ ಜಾರಿಗೆ ಕೊಡಲಿ.

**Sri. V. S. PATIL (Belgaum).**- On a point of order, Sir, the debate is going on this Bill. My friend is arguing on the merits of the proposed Bill which is to come into force. Is it relevant to this debate and how can it be allowed by the chair?

**Sri D. DEVARAJURS.-** If I am permitted to explain and clear the doubt in the mind of my friend Sri Patil.

**Mr. SPEAKER-** I Would like the member to finish his speech and leave the point of order to me.

ಶ್ರೀ ಡಿ. ದೇವರಾಜ ಅರಸ್.- ಸರ್ಕಾರದವರು ವಿಲೇಜ್ ಲೆವಲ್‌ನಲ್ಲಿ ಗ್ರಾಮ ಪಂಚಾಯಿತಿಗಳವರ ಸಲಹೆಯ ಮೇರೆಗೂ ಮತ್ತು ತಾಲ್ಲೂಕ್ ಲೆವಲ್‌ನಲ್ಲಿ ತಾಲ್ಲೂಕ್ ಬೋರ್ಡ್‌ಗಳವರ ಸಲಹೆಯ ಮೇರೆಗೂ ಈ ಗೇಣೀದಾರರು ಯಾರಾರು ಎಲ್ಲೆಲ್ಲಿ ಎಷ್ಟು ಜನಗಳಿದ್ದಾರೆಂಬುದನ್ನು ಪತ್ತೆ ಮಾಡಿ ರೆಕಾರ್ಡಿನಲ್ಲಿಟ್ಟರೆ ಮುಂದೆ ಅವರಿಗೆ ಇದರಿಂದ ಸ್ವಲ್ಪ ಮಟ್ಟಿಗೆ ಅನುಕೂಲವಾಗುತ್ತದೆ. ಇಲ್ಲದಿದ್ದರೆ ನಾವೀಗ ಈ ತಿದ್ದು ಪಡಿಯನ್ನು ಅಂಗೀಕರಿಸಿದರೂ ಕೂಡ ಈ ಕಾನೂನು ಜಾರಿಯಲ್ಲಿಲ್ಲದಿದ್ದರೆ ಆ ಗೇಣೀದಾರರು ಏನೇನು ತೊಂದರೆಗಳನ್ನು ಅನುಭವಿಸುತ್ತಿದ್ದರೋ ಆ ಎಲ್ಲ ತೊಂದರೆಗಳನ್ನು ಸಹ ಈ ತಿದ್ದುಪಡಿ ಅಂಗೀಕೃತವಾದರೂ ಅನುಭವಿಸುತ್ತಲೇ ಹೋಗುತ್ತಾರೆ. ಆದುದರಿಂದ ಈ ದಿವಸ ಈ ರಿಜಿಸ್ಟರ್‌ನ್ನು ಇಟ್ಟಿದ್ದರೆ ನಾಳೆ ಒಂದು ವೇಳೆ ಯಾರಾದರೂ ಎವಿಕ್ಟ್ ಆದ ಪಕ್ಷದಲ್ಲಿ ಈ ರಿಜಿಸ್ಟರ್ ಅವರಿಗೆ ರಕ್ಷಣೆಯನ್ನು ಕೊಡುತ್ತದೆ. ನಾಳೆ ಆ ಎವಿಕ್ಟ್ ಆದ ಮನುಷ್ಯ ಮತ್ತೆ ಜಮೀನು ಪಡೆಯಲು ಅವಕಾಶ ಸಿಕ್ಕಬಹುದು ಇಷ್ಟು ಮಾತನ್ನು ಹೇಳಿ ನಾನು ಈ ತಿದ್ದುಪಡಿ ಮಸೂದೆಗೆ ನನ್ನ ಬೆಂಬಲವನ್ನು ನೀಡಿ ನನ್ನ ಮಾತನ್ನು ಮುಗಿಸುತ್ತೇನೆ.

# 8 ಮೈಸೂರು ಮೋಟಾರು ವಾಹನಗಳ (ತಿದ್ದುಪಡಿ) ಮಸೂದೆ 1955

(ದಿನಾಂಕ 17-4-1955)

ಶ್ರೀ ಡಿ. ದೇವರಾಜ ಅರಸ್.- ಸ್ವಾಮಿ ಈಗಾಗಲೇ ಮಾನ್ಯ ಸಚಿವರು ಶ್ರೀ ಎ. ಭೀಮಪ್ಪನಾಯಕರು ತಂದಿರತಕ್ಕಂಥ ತಿದ್ದುಪಡಿಯನ್ನು ಒಪ್ಪಿಕೊಳ್ಳುತ್ತೇವೆಂದು ಒಂದು ಸೂಚನೆಯನ್ನು ಕೊಟ್ಟಿರುವುದರಿಂದ ಅವರು ಈ ತಿದ್ದುಪಡಿಯನ್ನು ಒಪ್ಪಿಕೊಂಡ ಹಾಗೆಯೇ ಆಯಿತು. ಅಂದ ಮೇಲೆ ಅವರನ್ನು ಬಾಕಿ ವಿಚಾರಕ್ಕೆ ಅಷ್ಟು ಒತ್ತಾಯ ಮಾಡಬೇಕಾದಂಥ ಅಗತ್ಯವೇನೂ ಇದ್ದ ಹಾಗೆ ಕಂಡು ಬರುವುದಿಲ್ಲ. ಮಾನ್ಯ ಸಚಿವರು ಈ ಬಿಲ್ಲನ್ನು ಸಭೆಯ ಮುಂದೆ ಮಂಡಿಸುವಾಗಲೂ ಮತ್ತು ಈಗ ತಾನೆ ಅವರು ಅಪ್ಪಣೆ ಕೊಡಿಸಿರತಕ್ಕಂಥ ಉತ್ತರದ ಪ್ರಕಾರ 'ಮತ್ತೆ ಮತ್ತೆ ಈ ಹಂಗಾಮಿ ಪರ್ಮಿಟ್‌ಗಳನ್ನು ಕೊಡತಕ್ಕಂಥ ಅವಶ್ಯಕತೆಯಿದೆ; ಆದುದರಿಂದ ಈ ಒಂದು ಅಧಿಕಾರ ಸರ್ಕಾರಕ್ಕೆ ಬೇಕಾಗಿದೆ' ಎಂದು ಹೇಳಿದ್ದಾರೆ. ಹೀಗೆ ವಿಧಿಯಿಲ್ಲದೆ ಇದನ್ನು ತರಬೇಕಾಯಿತು ಎಂದು ಹೇಳಿದರು. ಆದರೆ ಈಗಾಗಲೇ ಅನೇಕ ಮಾನ್ಯ ಸದಸ್ಯರುಗಳು ಏನು ಹೇಳಿದ್ದಾರೋ ಆ ಭಾಷಣದಲ್ಲಿ ಕೂಡ ಸ್ವಲ್ಪ ಅರ್ಥವಿದೆ. 'ಈಗ ಒಬ್ಬರಿಗೆ ಪರ್ಮನೆಂಟ್ ಪರ್ಮಿಟ್‌ಗಳನ್ನು ಕೊಡತಕ್ಕದ್ದು ರೂಢಿಯಲ್ಲಿದೆ. ಹಾಗೆ ಮಾಡದೆ ಹೋದರೆ ಈಗ ಹಾಲಿ ರನ್ ಮಾಡುತ್ತಿರುವ ಬಸ್‌ಮಾಲೀಕರುಗಳಿಗೆ ತೊಂದರೆ ಕೊಟ್ಟ ಹಾಗೆ ಆಗುತ್ತದೆಂದು ನನಗೆ ತಿಳಿದು ಬಂದುದರಿಂದ ನಾನು ಇದಕ್ಕೆ ಒಪ್ಪಿಕೊಳ್ಳಬೇಕಾಯಿತು' ಎಂದು ಅಪ್ಪಣೆ ಕೊಡಿಸಿದರು. ಈಗ ಶ್ರೀ ಭೀಮಪ್ಪ ನಾಯಕರು ತಂದಿರತಕ್ಕಂಥ ತಿದ್ದುಪಡಿಯಲ್ಲಿ ಸರ್ಕಾರದವರೇನು ಒಂದು ತಿದ್ದುಪಡಿಯನ್ನು ತಂದಿದ್ದರೋ ಅದು ಇದರಲ್ಲಿ ಸೇರಿಸಲ್ಪಟ್ಟಿದೆ. ಸರ್ಕಾರದವರು ತಂದಿರುವ ತಿದ್ದುಪಡಿಯಲ್ಲಿ ಹೀಗೆ ಹೇಳಿದೆ.

"Pending the decision on an application for the grant or renewal.....? ಎಂದು ಇತ್ತು. ಈಗ 'ಗ್ರಾಂಟ್ ಅನ್ನುವುದನ್ನು ತೆಗೆದು ಹಾಕಿ ಬರಿ ರಿನ್ಯೂ ಅನ್ನತಕ್ಕಂಥ ಪದ ಒಂದಕ್ಕೆ ಮಾತ್ರ ಅವಕಾಶವಿರುವ ಹಾಗೆ ಈಗ ಶ್ರೀ ಭೀಮಪ್ಪ ನಾಯಕರು ತಮ್ಮ ಒಂದು ತಿದ್ದುಪಡಿಯನ್ನು ತಂದಿದ್ದಾರೆ. ಆದರೆ ನಾನು ಈ ಸಂದರ್ಭದಲ್ಲಿ ಸಲಹೆ ಮಾಡುವುದೇನೆಂದರೆ. ತಾವು ಮೊದಲು ಹಾಕಿದ್ದಂಥ For the grant of ಅನ್ನತಕ್ಕಂಥ ಪದವನ್ನು ಬಿಟ್ಟು ಬಿಡುವುದಕ್ಕೆ ಒಪ್ಪಿಕೊಂಡ ಮೇಲೆ ಈ ಇಡೀ ತಿದ್ದುಪಡಿಯನ್ನು ತಾವು ಕೈ ಬಿಟ್ಟು ಬಿಡುವುದರಿಂದ ತಮಗೇನೂ ತೊಂದರೆಯಾಗುವುದಿಲ್ಲ. ಈಗ ಯಾವುದಾದರೊಂದು ಪರ್ಮಿಟ್ಟನ್ನು ರಿನ್ಯೂ ಮಾಡಬೇಕಾದ ಕಾಲದಲ್ಲಿ ಅದನ್ನು ಈ ಆರ್. ಟಿ. ಎ. ಮತ್ತು ಎಸ್. ಟಿ. ಎ. ಅವು ಮಾಡಲಿಲ್ಲ ಎಂದು ಇಟ್ಟು ಕೊಳ್ಳೋಣ. ಅದು ಆ ಕಾರಣವೇ ಆಗಿರಲಿ ಅಥವಾ ಸಕಾರಣವೇ ಆಗಿರಲಿ, ಹಾಗೆ ಅವರು ಆ ಪರ್ಮಿಟ್‌ನ್ನು ರಿನ್ಯೂ ಮಾಡುವುದಕ್ಕಾಗುವುದಿಲ್ಲವೆಂದು ಹೇಳಿದ ಕಾಲದಲ್ಲಿ ಅದನ್ನು ಸರ್ಕಾರಕ್ಕಾಗಲಿ ಅಥವಾ ಎಸ್.ಟಿ. ಎ. ಗಾಗಲಿ ತಾತ್ಕಾಲಿಕವಾಗಿ ಒಂದು ಪರ್ಮಿಟ್ಟನ್ನು ಕೊಡಬೇಕೆಂದು ಹೇಳಿದೆ. ಇದನ್ನು ತಾವು ಒಪ್ಪಿಕೊಳ್ಳುತ್ತೇನೆಂದು ಹೇಳಿದ್ದೀರಿ. ಈಗ ಈ ಟೆಂಪೊರೆರಿ ಪರ್ಮಿಟ್ಟನ್ನು ಕೊಡತಕ್ಕಂಥ ಸಂದರ್ಭವೇ ಏಳುವುದಿಲ್ಲ. ಈಗ ಈ ಆರ್.ಟಿ.ಎ ಅವರು ಆಯಾ ಜಿಲ್ಲೆಗಳ ಸರಹದ್ದಿನಲ್ಲಿ ಅವರ ಅಧಿಕಾರಕ್ಕೊಳಪಟ್ಟಿರುವ ಸರಹದ್ದಿನೊಳಗೆ

ಅವರು ಟೆಂಪೊರೆರಿ ಪರ್ಮಿಟ್ಟುಗಳನ್ನು ಕೊಡುತ್ತಲೇ ಇದ್ದಾರೆ. ತಮಗೆಲ್ಲಾ ಗೊತ್ತಿರುವ ಹಾಗೆ ಈ ನಮ್ಮ ಶಾಸನ ಸಭೆಯ ಮುಂದೆ ಈ ಎರಡು ಮೂರು ವರ್ಷಗಳಿಗೊಂದಾವರ್ತಿ ರಿನ್ಯೂ ಮಾಡತಕ್ಕಂಥ ಪದ್ಧತಿಯನ್ನು ತಪ್ಪಿಸಿ-ಇದನ್ನು ಮೂರು ತಿಂಗಳಿಗೊಂದಾವರ್ತಿ ರಿನ್ಯೂ ಮಾಡಬೇಕೆಂಬುದಾಗಿ ತಿದ್ದುಪಡಿ ಕೂಡ ತಂದು ಅದನ್ನು ಅಂಗೀಕಾರ ಮಾಡಲಾಗಿದೆ. ಈಗ ಎಲ್ಲಾ ಕಡೆಗಳಲ್ಲೂ ಈ ಪರ್ಮಿಟ್ಟುಗಳು ಮೂರು ತಿಂಗಳಿಗೊಂದಾವರ್ತಿಯಂತೆ ರಿನ್ಯೂ ಮಾಡಲ್ಪಡುತ್ತಿವೆ. ಸೆಕ್ಷನ್ 58ರ ಪ್ರಕಾರ ರಿನ್ಯೂ ಮಾಡತಕ್ಕದ್ದೂ ಕೂಡ ಪರ್ಮನೆಂಟ್ ಎಂದೇ ಇದೆ. ಹಾಗೊಂದು ವೇಳೆ ಕೆಲವು ಕಾರಣಗಳ ಮೇಲೆ ಆರ್. ಟಿ. ಎ ಅವರು ನಾವು ರಿನ್ಯೂ ಮಾಡುವುದಕ್ಕಾಗುವುದಿಲ್ಲವೆಂದು ಹೇಳಿದರೆ ಮುಂದೆ ಎಸ್. ಟಿ.ಎ. ಗೆ ಅಪೀಲ್ ಹೋಗುವುದಕ್ಕೆ ಅವಕಾಶವಿದೆ. ಆಗ ಅವರು ಆ ಅಪೀಲಿನ ಕಾಲದಲ್ಲಿ ಸ್ಟೇ ಮಾಡಿದ ಪಕ್ಷದಲ್ಲಿ the status quo will be restored till that appeal is heard and disposed of. ಇದುವರೆಗೂ ಹಾಗೆ ಭಾವಿಸಬೇಕೆಂದು ಹೇಳಿರುವಾಗ ತಾವು ಈ ಬಸ್ ಮಾಲೀಕರುಗಳಿಗೆ ಟೆಂಪೊರೆರಿ ಪರ್ಮಿಟ್ ಕೊಡಬೇಕೆಂದು ಈಗ ಹೇಳುತ್ತಿರುವುದರ ಅರ್ಥವೇ ನನಗೆ ಗೊತ್ತಾಗುತ್ತಿಲ್ಲ.

ಶ್ರೀ ಎಚ್. ಸಿದ್ದವೀರಪ್ಪ.- ತಮ್ಮದು ಬಹಳ ದೊಡ್ಡ ಲಾಜಿಕ್.

ಶ್ರೀ ಡಿ. ದೇವರಾಜ ಅರಸ್.- ಈ ವಿಲೇಜ್ ಸ್ಕೂಲ್ ಮಾಸ್ಟರ್ ಎನ್ನತಕ್ಕ ಒಂದು ಪದ್ಯದಲ್ಲಿ ಒಂದು ಕಡೆ ಈ ರೀತಿ ಒಂದು ಡಿಸ್ಕ್ರಿಪ್ಷನ್ ಕೊಟ್ಟಿದ್ದಾರೆ.

" Though vanquished, he continued to argue"

ಇದರಂತೆ ಈಗ ನಮ್ಮ ಮಾನ್ಯ ಮಂತ್ರಿಗಳು ತಂದಿರತಕ್ಕಂಥ ತಿದ್ದುಪಡಿಯಲ್ಲಿ ಯಾವ ಜೀವಾಳವೂ ಇಲ್ಲದೆ ಅದು ಸಂಪೂರ್ಣವಾಗಿ ಸತ್ತು ಹೋಗಿದ್ದರೂ ಕೂಡ ಅವರು ಇನ್ನೂ ಈ ಒಂದು ಅಮೆಂಡ್‌ಮೆಂಟ್ ಇರಲೆಂದು ಒತ್ತಾಯಪಡಿಸುತ್ತಿರುವುದು ಆ ಡಿಸ್ಕ್ರಿಪ್ಷನಲ್ಲಿ ಹೇಳಿದಂತೆಯೇ ಇದೆ. ಶ್ರೀ ಭೀಮಪ್ಪ ನಾಯಕರ ತಿದ್ದುಪಡಿ ಅಸ್ತಿಪಂಜರವಿದ್ದ ಹಾಗೆ ಇದೆ.

**Sri H. SIDDAVEERAPPA-** All right assuming for the sake of argument that your statement is correct, it becomes superpluous and redundant, according to you. ನಾನು ಹೇಳುವ ಪ್ರಕಾರ ಇದರಲ್ಲಿ ಜೀವನವಿದೆ ಎಂದು. it only becomes superlous and redundant, it won't be harmful to you.

ಶ್ರೀ ಡಿ. ದೇವರಾಜ ಅರಸ್.- ಹಾಗೊಂದು ವೇಳೆ ಇದು ಅಷ್ಟು ಸೂಪರ್ ಫ್ಲೂಯಸ್ ಆಗಿದ್ದಾಗ್ಯೂ ಮತ್ತು ರಿಡಂಡೆಂಟ್ ಆಗಿದ್ದಾಗ್ಯೂ ಇದನ್ನು ನಾವು ಒಪ್ಪಿಕೊಳ್ಳುತ್ತೇವೆ, ಇದು ಇರಲೇ ಬೇಕು ಎಂದು ಹೇಳುವುದಾಗಿದ್ದರೆ ಅದಕ್ಕೆ ನನ್ನ ಅಭ್ಯಂತರವೇನೂ ಇಲ್ಲ.

ಈಗಾಗಲೇ ಶ್ರೀಮಾನ್ ರಾಜಶೇಖರಮೂರ್ತಿಗಳು ಇದು ಹೇಗೆ redundant ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅದರ ಜೊತೆಗೆ ಇದರಲ್ಲಿ redundant ಹೇಗಾಗಿದೆ, ಈ amendment ನಲ್ಲಿ It is doubly redundant ಹೇಗೆ ಎಂದರೆ, ಶ್ರೀಮಾನ್ ಭೀಮಪ್ಪನಾಯಕರ ತಿದ್ದುಪಡಿ ಹೀಗೆ ಇದೆ:

" (d) pending the decision on an application for the renewal of a stage carriage permit or pending the decision of an appellate authority on any appeal under section 64 other than an appeal under clause (a) of sub-section (1) of the said section."

ಸೆಕ್ಷನ್ 64 ತೆಗೆದು ನೋಡೋಣ. ಇವರಲ್ಲಿ subclause (c)ನಲ್ಲಿ ಏನಿದೆ ಎಂದರೆ, "aggrieved by the refusal of renewal of a permit" ಎಂದು ಇದೆ. ಶ್ರೀಮಾನ್ ಭೀಮಪ್ಪನಾಯಕರು ತಿದ್ದುಪಡಿಯನ್ನು ಸೂಚಿಸುತ್ತ permit renewal ಮಾಡುವಾಗ refuse ಮಾಡಿದ ಕಾಲದಲ್ಲಿ ಅಂಥವರು ಯಾರೂ ಅಪೀಲ್ ಹೋದರೂ ಅವರಿಗೆ temporary relief ಕೊಡುವುದಕ್ಕೆ ಮಾತ್ರ ಈ ತಿದ್ದುಪಡಿಯನ್ನು ತರಬೇಕೇ ಹೊರತು permanent permit ಕೊಡುವ ಕಾಲದಲ್ಲಿ ಈ temporary permit ಕೊಡುವುದಕ್ಕೆ ಅವಕಾಶವಿರಬಾರದು ಎಂದು ತಿದ್ದುಪಡಿಯನ್ನು ತಂದಿದ್ದೇನೆಂದು ಹೇಳಿದ್ದಾರೆ. ಅದನ್ನೇ ಒಪ್ಪಿಕೊಳ್ಳುವುದಾದರೆ temporary ಎಂದು ಹೇಳಿದರೆ ಸಾಕಾಗುತ್ತದೆ.

" Pending the decision of an appellate authority on any appeal under Section 64 other than an appeal under clause (a), etc."

ಎಂದು ಹೇಳಿದರೆ ಮಾತ್ರ ಸಾಕು, ಮತ್ತು ಅವರು ಯಾವ ಉದ್ದೇಶದಿಂದ ಈ ತಿದ್ದುಪಡಿಯನ್ನು ತಂದಿದ್ದಾರೆಯೋ ಆ ಉದ್ದೇಶ ಸಾರ್ಥಕವಾಗುತ್ತದೆ. ಇದರಲ್ಲಿ ಇನ್ನೊಂದು ವಾದವಿದೆ "pending the decision on an application for the renewal of.." ಎನ್ನುವಾಗ ಅದು ಬರೀ ಅಪೀಲ್ Authorities ಅಲ್ಲ Regional Transport Authorities ಕೂಡ ಒಂದು ಅಧಿಕಾರವನ್ನು temporary ಯಾಗಿ ಕೊಡುವುದಕ್ಕೋಸ್ಕರ ಈ sentence ಸೇರಿಸಿದೆ ಎಂದು ಹೇಳಬಹುದು. ಇದು ಎಷ್ಟು anomalous ಆಗಿದೆ ಎಂಬುದನ್ನು ನೋಡಬೇಕಾಗಿದೆ. ಮೊದಲು refuse ಮಾಡುವಾಗ ಯಾರು either the state Transport Authority or the Regional Transport Authority, ಯಾವ permit S.T.A. ಅಧಿಕಾರದಲ್ಲಿ ಕೊಟ್ಟಿದ್ದಾರೋ ಅಂಥಾದ್ದು ಅವರ ಕೈಗೆ renewal ಗೆ ಹೋಗಬೇಕಾಗುತ್ತದೆ. ಇಂಥಹ ಸಂದರ್ಭದಲ್ಲಿ ಅವರು refuse ಮಾಡಬಹುದು. ಅಥವಾ Regional Transport Authority ತಮ್ಮ ಅಧಿಕಾರದಲ್ಲಿರುವ Permit ನ್ನು renew ಮಾಡುವ ಕಾಲದಲ್ಲಿ refuse ಮಾಡುತ್ತಾರೆ. "pending the decision on an application" ಎಂದರೆ ಅರ್ಥವೇನು? Regional Transport Authority renew ಮಾಡುತ್ತಾರೆಯೇ ಅಥವಾ ಇಲ್ಲವೆಂದು ಹೇಳುತ್ತಾರೆಯೇ? ಮಾಡುವ ಉದ್ದೇಶವಿರುವುದಾದರೆ appeal allow ಮಾಡಬೇಕೇ ಬಿಡಬೇಕೇ? ತಕ್ಷಣವೇ ಯೋಚನೆಮಾಡುತ್ತ ಕುಳಿತುಕೊಳ್ಳುವ ಸಂದರ್ಭ ಬರುವುದಿಲ್ಲ. ಒಂದು ವೇಳೆ ಸಂಬಂಧ ಪಟ್ಟ Permit holder ಏನಾದರೂ ತಪ್ಪು ಮಾಡಿದ ಪಕ್ಷದಲ್ಲಿ, ತಪ್ಪು ಮಾಡಿದಾಗ Permit renew ಮಾಡುವುದಿಲ್ಲ ಎಂದು ಒಂದೇ ಮಾತಿನಲ್ಲಿ ಹೇಳಬಹುದು. ಈಗ ಯಾವ ರೀತಿ Procedure ಇದೆ ಎಂಬುದನ್ನು ಕೂಡ ಸ್ವಲ್ಪ ವಿಶದಪಡಿಸಬೇಕಾದರೆ, ಮೂರು ತಿಂಗಳಿಗೆ ಒಂದು ಸಾರಿ Permit renew ಆಗುತ್ತದೆ.

Renewal application Regional Transport Authority renew ಮಾಡುವುದಕ್ಕೆ ಕಾಲಾವಕಾಶ ಜಾಸ್ತಿಯಾಗಬಹುದು ಎಂದು ಸಂಬಂಧಪಟ್ಟ executive officer ಗೆ ಅಥವಾ ಡೆಪ್ಯುಟಿಕಮೀಷನರಿಗೆ ಅಧಿಕಾರ ಕೊಟ್ಟಿದ್ದಾರೆ. ಅವರು Application ಬಂದಕೂಡಲೇ ಮಾಮೂಲಾಗಿ renew ಮಾಡುತ್ತಾರೆ. ಅಂಥದ್ದು ಎಷ್ಟು ಕೇಸು ಬಂದಿದೆ ಎಂದು ಸರ್ಕಾರದವರು ನಮಗೆ ಹೇಳಲಿ. ಬಹುಶಃ ಒಂದೂ ಇದೆಯೋ ಇಲ್ಲವೋ ?

**Sri H. SIDDAVEERAPPA.-** I have got one astrounding case of R.T.A Where you have the privilege of being the member and where such situation has arisen.

**Sri. D. DEVARAJA URS.-** It must be for valid ground. Anyway, in thousand and odd cases he is able to cite only one such case.

ಹೀಗೆ renew ಮಾಡುವಾಗ Pending the decision, Regional Transport authority temporary ಯಾಗಿ Permit ಕೊಡತಕ್ಕದ್ದೇನಿದೆಯೋ ಅದು that is doubly redundant ಎಂದು ಹೇಳಿದ ಹಾಗಾಗುತ್ತದೆ. Rigional Transport Authority ಅಧಿಕಾರ ಕೊಡಬೇಕಾದ ಅವಶ್ಯಕತೆಯೇ ಇಲ್ಲ. ಇದ್ದರೆ renew ಮಾಡುತ್ತಾನೆ. ಇಲ್ಲದಿದ್ದರೆ ಇಲ್ಲವೆಂದು ಹೇಳುತ್ತಾನೆ. ಇಲ್ಲದೆ ಇದ್ದ ಪಕ್ಷದಲ್ಲಿ ಇದೆ S. T.A. appellate authority ಅವರ ಮುಂದೆ ಅಪ್ಲಿಕೇಷನ್ ಬರುತ್ತದೆ. ಅವರು temporary ಯಾಗಿ grant ಮಾಡಬಹುದು; ಆಮೇಲೆ ಅಪೀಲ್ hear ಮಾಡಿ grant ಮಾಡಬಹುದು. R.T.A.ಆಗ ಅನಗತ್ಯ ಸುಮ್ಮನೆ ಇದು ಶಿರೋಭಾರವೆಂದು ಹೇಳುವಹಾಗೆ ಇರಬೇಕಾಗುತ್ತದೆ.

under section 64 "pending the decision of an appellate authority under section 64..." ಮಾತ್ರ ಉಳಿಸಿಕೊಂಡರೆ ಸಾಕು ಎಂದು ಹೇಳಿದೆ. ಇದರಲ್ಲಿಯೂ ಕೂಡ appeal under clause (a) ಒಂದು ಮಾತ್ರ ಇರಬೇಕು ಎಂದು ಹೇಳಿದ್ದಾರೆ. ಇದನ್ನು ಕೂಲಂಕುಷವಾಗಿ ಯೋಚನೆ ಮಾಡೋಣ. ಇದನ್ನು ಕೂಡ redundancy ಎಂದು ಹೇಳುತ್ತೇನೆ. 64ನೇ ಸೆಕ್ಷನ್‌ನಲ್ಲಿ ಅಪೀಲ್‌ಗಳಿಗಾಗಿ ಕೆಲವು sub-clauses ಇವೆ. ಇಂಥಿಂಥ ಕಾರಣಗಳ ಮೇಲೆ ಅಪೀಲುಗಳು ಹಾಕಬಹುದು ಎಂದು ಇದೆ. Temporary permit ಕೊಡುವ ಅವಶ್ಯಕತೆ ಇದ್ದಲ್ಲಿ ಯಾವ sub-claues ನಿಂದ ಉತ್ಪತ್ತಿಯಾಗುತ್ತದೆ ಎಂಬುದನ್ನು ಮಾತ್ರ ನಾವು ನಿಗಾ ಇಟ್ಟುಕೊಂಡರೆ ಬಹುಶಃ sub-clause (e) ಮಾತ್ರ ಇಟ್ಟುಕೊಳ್ಳಬಹುದು; ಬಾಕಿ ಎಲ್ಲವೂ ಕೂಡ 64 ಸೆಕ್ಷನ್‌ನಲ್ಲಿ ತೀರ ಅನಗತ್ಯ.ಈ ತಿದ್ದುಪಡಿಗಳನ್ನು ನೋಡಿದರೆ sub-clause (a) ಅವರೇ ಬಿಡುವುದಕ್ಕೆ ಒಪ್ಪಿಕೊಂಡಿದ್ದಾರೆ. ನಮ್ಮ ಉದ್ದೇಶ ಸಾಧನೆಯಾಗಬೇಕಾದರೆ sub-clause (a) ಬಿಡಬಹುದು.

Sub-clause (b)

"(b) Aggrieved by the revocation or suspension of the permit or by any variation of the conditions there of;"

suspend ಮಾಡಿದ್ದನ್ನು restore ಮಾಡುವಾಗ Pending the dicision of an appeal, the S.T.A. or any other appellate authority or Government can restore the permit temporarily. Here the question arises only with regards to the restoration of a permit suspended for temporary period. During the appeal period, you can restore the permit by suspending the order of the lower authorities. Why do you require powers for giving a temporary permit? where does that necessity arise, I want to know. That does not arise at all. ಆದ್ದರಿಂದ Sub-clause (b)ಅನಗತ್ಯ.

" (c) Aggrieved by the refusal to transfer the permit to the person succeeding on the death of the holder of a permit, or".

ಇದು ಕೂಡ ಅನಗತ್ಯ. ಹೀಗೆ ಅಗತ್ಯತೆ ಉಳಿದಿರತಕ್ಕದ್ದು sub-section(e) ಮಾತ್ರ. ನಾವು ಈ ರೀತಿಯಾಗಿ ಒಂದು amendment ಮಾಡಿದರೆ ಅದು ಸರಿಹೋಗುತ್ತದೆ, redundancy ಆಗುವುದಿಲ್ಲ. ಏನು ಉದ್ದೇಶದಿಂದ ಅವಶ್ಯಕತೆ ಇದೆ ಎಂಬುವುದನ್ನು ಹೇಳುತ್ತೇನೆ. ಅದು ಸಂಪೂರ್ಣವಾಗಿ support ಆಗುತ್ತದೆ."Other than appeal under clause (a) ಎನ್ನುವ ಬದಲು "Other than appeal under clauses (a),(b),(c), (d), (f), except (e)" ಎಂದು ಹಾಕಬಹುದು.

ಶ್ರೀ ಎಚ್. ಸಿದ್ಧವೀರಪ್ಪ - ಇನ್ನೂ ಸ್ವಲ್ಪ ಹೊತ್ತು ಕೇಳಿಬಿಟ್ಟರೆ ಇನ್ನೂ ಏನೇನು confuse ಮಾಡಿಬಿಡುತ್ತಾರೆಯೋ ಗೊತ್ತಿಲ್ಲ.

**Sri. DEVARAJAURS.-** I am afraid that Hon'ble Minister has a confusing brain and less is he in a position to confuse the House.

Clause (f) ನಲ್ಲಿ ಶ್ರೀಮಾನ್ ರಾಜಶೇಖರಮೂರ್ತಿಗಳು ಒಂದು ವಿಚಾರ ಹೇಳಿದರು. clause(a)ನಲ್ಲಿ ಯಾವ power ತೆಗೆದುಹಾಕಿದರೋ ಅದನ್ನು clause (f) ನಲ್ಲಿ ಅದನ್ನು ಸೇರಿಸಿದ್ದಾರೆ ಎಂದು ಹೇಳಿದರು. ಅವರ ಒಂದು apprehension ಕಾರಣವಲ್ಲ. ಈ ನಾನಾ ವಾದದ ಪ್ರಕಾರ ಅದು ಅನಗತ್ಯವೆಂದು ಹೇಳುತ್ತೇನೆ. ಶ್ರೀಮಾನ್ ರಾಜಶೇಖರಮೂರ್ತಿಗಳು ಹೇಳುವ ಅಭಿಪ್ರಾಯದಲ್ಲಿ ಅನಗತ್ಯವಲ್ಲ. ನಾವು power ಒಂದು ಕಡೆ ತೆಗೆದುಕೊಂಡು ಇನ್ನೊಂದು ಕಡೆ ತೆಗೆಯುವ ಅವಶ್ಯಕತೆ ಇಲ್ಲ. ಯಾಕೆಂದರೆ sub-section(a)

"(a) Aggrived by the refusal of the state or a Regional Transport authority to grant a permit."

The question here is the refusal to grant a permit. In subsection (f), it is about granting a permit. it is not a question of refusal, it is simply granting a permit over which any person of authority who is aggrieved goes in appeal. ಆದರಲ್ಲಿ temporary permit ಕೊಡಬೇಕಾದ ಪ್ರಶ್ನೆ

ಬರುವುದಿಲ್ಲ. ಇದರಲ್ಲಿ ಒಂದಕ್ಕೊಂದಕ್ಕೆ ವ್ಯತ್ಯಾಸವಿರುವುದರಿಂದ different sections ಇವೆಯೇ ವಿನಾ ಶ್ರೀಮಾನ್ ರಾಜಶೇಖರಮೂರ್ತಿಗಳು ಹೇಳಿದ ಹಾಗೆ ಈ section ನಲ್ಲಿ ಏನು power ಇಟ್ಟುಕೊಂಡಿದ್ದಾರೋ section (f) ನಲ್ಲಿ ಆ power ಬರುತ್ತದೆ ಎಂದು ಹೇಳುವ ವಾದದಲ್ಲಿ ತಿರುಳಿಲ್ಲ. ಆದರೂ clause (f) ನಲ್ಲಿ ಅನಗತ್ಯವೆಂದು ಹೇಳುತ್ತೇನೆ. ಶ್ರೀಮಾನ್ ಸಿದ್ಧವೀರಪ್ಪನವರು ಅದು ಇರಲೇಬೇಕು ಎಂದು ಹೇಳುವುದಾದರೆ ಅವರಿಗೆ ಇದನ್ನು ಎಲ್ಲಿ ತೆಗೆದುಹಾಕುತ್ತಾರೆಯೋ ಎಂಬ ಹೆದರಿಕೆ, confusion ಉಂಟಾಗಿದೆ. ಅವರು confusion ಇಟ್ಟುಕೊಳ್ಳುವುದರಿಂದ allay ಆಗುವುದಾದರೆ ನನ್ನ ಅಭ್ಯಂತರವಿಲ್ಲ. ಅಸ್ಥಿಪಂಜರವಿಟ್ಟುಕೊಂಡ ಹಾಗಾಗುತ್ತದೆಂದು ಮಾತ್ರ ಹೇಳುತ್ತೇನೆ.

ಶ್ರೀ ಎಚ್. ಸಿದ್ಧವೀರಪ್ಪ.- confuse ಮಾಡಿಬಿಡುತ್ತಾರೆಯೋ ಏನೋ ಎಂಬ ಭಯ. ಇನ್ನೂ confuse ಆಗಿಲ್ಲ.

ಶ್ರೀ ಡಿ. ದೇವರಾಜ ಅರಸ್. - Learned lawyer confuse ಆಗುವುದಾದರೆ ಲಾಯರ್ ಕೆಲಸ ಮಾಡದೆ ಇರುವ ನಾವು ಎಷ್ಟು confuse ಆಗಬೇಕು? ನಾನು ಧೈರ್ಯವಾಗಿ, ಖಚಿತವಾಗಿ ಹೇಳುತ್ತೇನೆ, ನಾನೇನೂ confuse ಆಗಿಲ್ಲ. ಅವರು confuse ಆದರೆ, I am sorry for it; ಇಷ್ಟು ಮಾತ್ರ ಹೇಳುತ್ತೇನೆ.

# 9. ಭೂಮಿ ಸ್ವಾಧೀನ ಪಡಿಸಿಕೊಳ್ಳುವುದರ ಮತ್ತು ಭೂ ಸಂರಕ್ಷಣೆ ಕುರಿತು (12-12-1972)

ಶ್ರೀ ಡಿ. ದೇವರಾಜ ಅರಸ್.- ನಾನು ಈ ಹಿಂದೆಯೇ ಹೇಳಿದಂತೆ ಈ ಸಾಯಿಲ್ ಕನ್‌ಸರ್ವೇಷನ್ ಕೆಲಸದಲ್ಲಿ ಸ್ವಲ್ಪ ನಿಧಾನವಾಗಿದೆ. ಅದನ್ನು ಒಪ್ಪಿಕೊಂಡಿದ್ದೇನೆ, ಇನ್ನು ಮುಂದೆ ಎಲ್ಲಾ ಕಡೆಗಳಲ್ಲೂ ಸಾಯಿಲ್ ಕನ್‌ಸರ್ವೇಷನ್ ಕೆಲಸವನ್ನು ಹೆಚ್ಚು ಹೆಚ್ಚು ಮಟ್ಟದಲ್ಲಿ ತೆಗೆದುಕೊಳ್ಳಬೇಕೆಂದು ಅಧಿಕಾರಿಗಳಿಗೆ ತಿಳಿಸಲಾಗಿದೆ. ಆದಕ್ಕಾಗಿ ಅಲ್ಲಿ ಅಧಿಕಾರಿಗಳ ಅಭಾವ ಇದ್ದ ಕಾರಣ ಅದಕ್ಕೆ ಕೆಲವರನ್ನು ಅಲ್ಲಿಗೆ ವರ್ಗಮಾಡಲಾಗಿದೆ. ಇನ್ನು ಕೆಲವರನ್ನು ಕೆಲಸಕ್ಕೆ ಹೊಸದಾಗಿ ನೇಮಕ ಮಾಡಿಕೊಳ್ಳಲಾಗಿದೆ. ಇದಕ್ಕನುಸಾರವಾಗಿ ಈಗ ಹೊಸದಾಗಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ. ಮಾನ್ಯ ಸದಸ್ಯರು ಹೇಳುತ್ತಿರುವುದನ್ನು ನೋಡಿದರೆ ಅವರಿಗೆ ಎಲ್ಲಾ ವಿಚಾರಗಳಲ್ಲೂ ಎಕ್ಸ್‌ಪರ್ಟ್ ನಾಲೆಡ್ಜ್ ಇದ್ದ ಹಾಗೆ ಹೇಳುತ್ತಿದ್ದಾರೆ. ಅವರು ಒಂದು ಸಂಪೂರ್ಣ ವರದಿಯನ್ನು ಬರೆದುಕೊಡಲಿ. ನಾವು ಅವರು ಬರೆದಿರುವುದನ್ನೇ ನೋಡಿಕೊಂಡು ಕೆಲಸಗಳನ್ನು ನಡೆಸುತ್ತೇವೆ. ಹಿಂದೆ ಆ ಗುಲ್ಬರ್ಗ ಜಿಲ್ಲೆಯಲ್ಲಿ ಒಂದು ಲಕ್ಷ 5 ಸಾವಿರ ಜನರಿಗೆ ಕೆಲಸ ಒದಗಿಸಲಾಗಿತ್ತು. ಈಗ ಅಲ್ಲಿ ಒಂದು ಲಕ್ಷ ಐವತ್ತು ಸಾವಿರ ಜನರಿಗೆ ಕೆಲಸ ಒದಗಿಸಲಾಗಿದೆ ಮತ್ತು ಅಪ್ಪರ್ ಕೃಷ್ಣ ನಾಲಾ ಎಲ್ಲೆಲ್ಲಿ ಹೋಗುತ್ತದೋ ಅಲ್ಲಿ ಏಕಕಾಲಕ್ಕೆ ನಾಲ್ಕು ಕಡೆಗಳಲ್ಲಿ ಕೆಲಸ ತೆಗೆದುಕೊಳ್ಳಬೇಕೆಂದು ತಿಳಿಸಿದ್ದೇವೆ. ಆದರೆ ನಮಗೆ ಕೆಲವು ಇನ್‌ಹರೆಂಟ್ ತೊಂದರೆಗಳಿವೆ. ಅಂದರೆ ಕಾಲಕ್ಕೆ ಸರಿಯಾಗಿ ಕೆಲವು ಕಡೆ ಜಮೀನುಗಳನ್ನು ಅಕ್ವಯರ್ ಮಾಡುವುದಕ್ಕೆ ಜನ ಒಪ್ಪುತ್ತಿಲ್ಲ. ವಿರೋಧ ಪಕ್ಷದಲ್ಲಿ ರತಕ್ಕ ಮಾನ್ಯ ಸದಸ್ಯರುಗಳು ಬಹಳ ಪ್ರಭಾವಶಾಲಿಗಳೆಂದು ಹೇಳಿಕೊಳ್ಳುತ್ತಿದ್ದಾರೆ. ದಯಮಾಡಿ ಅವರು ಆ ಸ್ಥಳಕ್ಕೆ ಬಂದು ಜಮೀನನ್ನು ಒಂದು ಒಪ್ಪಂದದ ಪ್ರಕಾರ ಬಿಡಿಸಿಕೊಟ್ಟರೆ ಅವರಿಂದ ದೇಶಕ್ಕೆ ಬಹಳ ಉಪಕಾರ ಮಾಡಿದಂತಾಗುತ್ತದೆ. ಇನ್ನು ಇಂಡಿಗಿ, ಸಿಂಧಿಗಿ, ಗುಲ್ಬರ್ಗಾ ಈ ಪ್ರದೇಶಗಳಲ್ಲಿ ಇಂಜಿನಿಯರುಗಳಿಗೆ ಅಭಾವವಿತ್ತು. ಅಲ್ಲಿಗೆ ಅವರನ್ನು ಈಗ ಹಾಕಲಾಗಿದೆ. ಶ್ರೀ ವಾಟಾಳ್ ನಾಗರಾಜ್ ಅವರು ಅಲ್ಲಿಗೆ ಹೋಗಿ ಸತ್ಯಾಗ್ರಹ ಹೂಡಿ ಏಕೆ ಅನುಕೂಲ ಕಲ್ಪಿಸಿಕೊಡಬಾರದು?

ಶ್ರೀ ವಾಟಾಳ್‌ನಾಗರಾಜ್.- ತಾವು ತಮ್ಮ ಪ್ರಭಾವ ಜಾಸ್ತಿ ಇದೆ ಎಂದು ತಮಟೆ ಹೊಡೆದುಕೊಳ್ಳುತ್ತಿದ್ದೀರಿ.......

ಶ್ರೀ ಡಿ. ದೇವರಾಜ ಅರಸ್.- ನಾನು ಎಲೆಕ್ಷನ್ ಕಾಲದಲ್ಲಿ ತಮಟೆ ಹೊಡೆದಿದ್ದಾಯಿತು. ಯಾವಾಗಲೂ ತಮಟೆ ಹೊಡೆಯುವುದು ಅನವಶ್ಯಕ. ತಾವು ಈಗ ತಮಟೆ ಹೊಡೆಯಬೇಕಾಗಿದೆ, ಆದರೆ ನಾವು ಸದ್ಯದಲ್ಲೇ ಈ ಸಭೆಯ ಮುಂದೆ ಒಂದು ಮಸೂದೆಯನ್ನು ತರುವವರಿದ್ದೇವೆ. ಅದನ್ನು ತರತಕ್ಕ ಉದ್ದೇಶ ಈ ದಿವಸ ಅಕ್ವಿಜಿಷನ್ ಪ್ರೊಸೀಡಿಂಗ್ಸ್ ಪ್ರಕಾರ ಭೂಮಿಯನ್ನು ಜನರಿಂದ ಅಕ್ವೈಯರ್ ಮಾಡುವುದಕ್ಕೆ ಬಹಳ ನಿಧಾನವಾಗುತ್ತಿದೆ. ಅದನ್ನು ತಪ್ಪಿಸಿ ಭೂಮಿಯನ್ನು 30 ದಿನದೊಳಗೆ ಅಕ್ವಯರ್ ಮಾಡತಕ್ಕ ರೀತಿಯಲ್ಲಿ ಸಭೆಯ ಒಪ್ಪಿಗೆಗಾಗಿ ಮಸೂದೆಯನ್ನು ತಯಾರಿಸಲಾಗಿದೆ. ಅದು ಸದ್ಯದಲ್ಲೆ ಇಲ್ಲಿ ಬರುವುದರಲ್ಲಿದೆ.

# 10. ಸಭೆಯ ಸತ್ಸಂಪ್ರದಾಯಗಳನ್ನು ಕಾಪಾಡುವ ಕುರಿತು ಚರ್ಚೆ
(12-4-1972)

ಶ್ರೀ ಹೆಚ್. ಡಿ. ದೇವೇಗೌಡ.- ಮಾನ್ಯ ಸಭಾನಾಯಕರಲ್ಲಿ ಕಳಕಳಿಯಿಂದ ಪ್ರಾರ್ಥನೆ ಮಾಡುತ್ತೇನೆ. ನಾವು ಸೌಹಾರ್ದವನ್ನು ಅಪೇಕ್ಷೆ ಮಾಡುತ್ತೇವೆ. ಯಾವುದೇ ಸನ್ನಿವೇಶದಲ್ಲಿ ಈ ಸಭೆಯ ಕಾರ್ಯಕಲಾಪಗಳಲ್ಲಿ ನಮ್ಮಗಳನ್ನು ತಮ್ಮ ಜೊತೆಗೆ ತೆಗೆದುಕೊಂಡು ಹೋಗುವ ಸಂಪ್ರದಾಯವನ್ನು ಬೆಳೆಸಬೇಕು ಎಂದು ಹೇಳುತ್ತೇನೆ.

ಶ್ರೀ ಡಿ. ದೇವರಾಜ ಅರಸ್.- ಮಾನ್ಯ ಅಧ್ಯಕ್ಷರೇ, ಎದುರುಪಕ್ಷದ ನಾಯಕರು ಹೇಳುವುದನ್ನು ಕೇಳಿದ್ದೇನೆ. ನನ್ನ ಅಭಿಪ್ರಾಯ ಏನೆಂದರೆ ಅವರು ಎಷ್ಟು ಸೌಹಾರ್ದದಿಂದ ಕಾರ್ಯಕಲಾಪಗಳನ್ನು ನಡೆಸಿಕೊಂಡು ಹೋಗಬೇಕು ಎಂದು ಹೇಳುತ್ತಾರೋ, ಸಭೆಯ ಕಾರ್ಯಕಲಾಪಗಳು ಕಾನೂನು ಬದ್ಧವಾಗಿ ನಡೆಯಬೇಕು ಎಂದು ಅಪೇಕ್ಷೆ ಪಡುತ್ತಾರೋ ನಾವೂ ಅದೇ ರೀತಿಯ ಅಭಿಪ್ರಾಯ ಉಳ್ಳವರು. ಅವರು ಅನೇಕ ವಿಷಯಗಳನ್ನು ಪ್ರಸ್ತಾಪ ಮಾಡಿ ನಮಗೆ ಕಾನೂನಿಗೆ ಅನುಗುಣವಾಗಿ ನಡೆಯಿರಿ ಎಂದು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಹೆಚ್. ಡಿ. ದೇವೇಗೌಡ.- ನೈತಿಕ ಮಟ್ಟ ಇಲ್ಲ ಎಂದು ಹೇಳಿದೆ.

ಶ್ರೀ ಡಿ. ದೇವರಾಜ ಅರಸ್.- ನಿಮಗೆ ಬಲ ಇಲ್ಲದೇ ಹೋದ ಮೇಲೆ ತಾವು ಮೈನಾರಿಟಿಯಲ್ಲಿ ಇದ್ದೇವೆಂದು ಮೈನಾರಿಟಿ ಅಗ್ರೆಷನ್ ನಮ್ಮ ಮೇಲೆ ಮಾಡುವುದಕ್ಕೆ ಪ್ರಯತ್ನ ಪಡಬೇಡಿ. ನಿಮ್ಮನ್ನು ಕಳಕಳಿಯಿಂದ ಪ್ರಾರ್ಥನೆ ಮಾಡುತ್ತೇನೆ. ಡೆಮಾಕ್ರಸಿ ತತ್ವ ತಿಳಿದುಕೊಂಡು ಅದರಂತೆ ಹೋಗೋಣ. ಎಲ್ಲರಿಗೂ ರಕ್ಷಣೆ ಕೊಡತಕ್ಕಂಥವರು ಮಾನ್ಯ ಅಧ್ಯಕ್ಷರು ಇದ್ದಾರೆ.

ಕಾನೂನು ಮುರಿಯುವುದಕ್ಕೆ ನಮಗೂ ಅವಕಾಶವಿಲ್ಲ, ನಿಮಗೂ ಇಲ್ಲ. ನಾವು ಮೆಜಾರಿಟಿಯಲ್ಲಿರಬಹುದು, ನೀವು ಮೈನಾರಿಟಿಯಲ್ಲಿರಬಹುದು. ಹಾಗಿದ್ದ ಮಾತ್ರಕ್ಕೆ ಯಾರಿಗೂ ಕಾನೂನಿಗೆ ವಿರೋಧವಾಗಿ ನಡೆಯಲು ಅವಕಾಶವಿಲ್ಲ. ಇದನ್ನು ಪ್ರಜಾಪ್ರಭುತ್ವದಲ್ಲಿ ತಿಳಿದುಕೊಳ್ಳಬೇಕು. ಎಲ್ಲರಿಗೂ ರಕ್ಷಣೆ ಕೊಡುವವರು ಮಾನ್ಯ ಅಧ್ಯಕ್ಷರು ಮತ್ತು ಪುಸ್ತಕದಲ್ಲಿರುವ ರೂಲ್ಸ್ ಮತ್ತು ರೆಗ್ಯುಲೇಷನ್ಸ್‌ಗಳನ್ನು ನಾವು ತಪ್ಪು ಮಾಡಿದಾಗ ಅದನ್ನು ತೋರಿಸಲು ತಮಗೆ ಅವಕಾಶವಿದೆ. ಅಧ್ಯಕ್ಷರು ಅದನ್ನು ನೋಡಿ ವಿಮರ್ಶೆಮಾಡಿ ರೂಲಿಂಗ್ ಕೊಡಲು ಅವರಿಗೆ ಅಧಿಕಾರವಿದೆ. ಯಾರಾದರೂ ತಪ್ಪು ಮಾಡಿದಾಗ ಅವರು ನಮ್ಮ ಕಡೆಯವರೇ ಆಗಲಿ ಅಥವಾ ಬೇರೆ ಕಡೆಯವರೇ ಆಗಲಿ ಅದನ್ನು ತೋರಿಸಲು ಅವಕಾಶವಿದೆ. ಕಾನೂನುಬದ್ಧವಾಗಿ ಸಭೆಯ ಕಾರ್ಯಕಲಾಪಗಳನ್ನು ನಡಸಲು ಎಲ್ಲರೂ ಸಹಕರಿಸಬೇಕು. ಹಾಗೆ ಮಾಡಿ ಸರಿಯಾದ ಕೆಲಸ ಮಾಡೋಣ. ನಮ್ಮ ಪಕ್ಷದವರಿಗಾಗಲಿ ಅಥವಾ ವಿರೋಧ ಪಕ್ಷದವರಿಗಾಗಲಿ ಕಾನೂನಿನ ವಿರುದ್ಧವಾಗಿ ನಡೆಯುವುದಕ್ಕಾಗುವುದಿಲ್ಲ. ಯಾರೇ ಆಗಲಿ ನಿಯಮಗಳಿಗೆ ವಿರೋಧವಾಗಿ ನಡೆಯುವುದು ಯೋಗ್ಯವಲ್ಲ. ಅಧ್ಯಕ್ಷರು ಒಂದು ರೂಲಿಂಗ್ ಕೊಟ್ಟರೆ ನಾವೆಲ್ಲರೂ ಅದಕ್ಕೆ ತಲೆಬಾಗಬೇಕು, ಉದ್ವೇಗದಿಂದ ಕೋಪದಿಂದ ಅದರ ಮೇಲೆ ಚರ್ಚೆ ಮಾಡುವುದು ಸರಿಯಲ್ಲ, ಹಾಗೆ ಮುಂದುವರೆಯುವುದು ಬೇಡ. ಒಂದು ಸತ್ಸಂಪ್ರದಾಯವನ್ನು ನಾವು ಬೆಳೆಸೋಣ.

ಹಿಂದಿನವರೇನೇ ಮಾಡಿದ್ದರೂ ಅದನ್ನು ಅಲ್ಲಿಗೆ ಬಿಡೋಣ. ಹಿಂದಿನ ಜನ್ಮದಲ್ಲಿ ನಾನಾ ರೀತಿಯ ಅವತಾರವಿರಬಹುದು, ಅದನ್ನು ಎತ್ತಿ ಆರೋಪ ಮಾಡುವುದು ಬೇಡ, ಅದೆಲ್ಲವೂ ಪ್ರೊಸೀಡಿಂಗ್ಸ್ ಆಗಬಾರದು.

ಶ್ರೀ ಎಚ್. ಡಿ. ದೇವೇಗೌಡ.- ಹೊಸ ಅವತಾರಕ್ಕೆ ಹೊಂದಿಕೊಳ್ಳಬೇಕು.

ಶ್ರೀ ಡಿ. ದೇವರಾಜ ಅರಸ್.- ನೀವು 5 ವರ್ಷ ನೋಡಿರಬಹುದು. ನಾನು 30 ವರ್ಷದಿಂದ ಅನುಭವ ಪಡೆದಿದ್ದೇನೆ. ಹಿಂದಿನದನ್ನು ತೆಗೆದು ಆರೋಪ ಮಾಡುವುದು ಬೇಡ.

**Sri. B. B. SAYANAK.-** We are not blaming you. what about Sri Siddaveerappa, Sri Mallikarjunaswamy and Sri Azeez sait? They were gheraoing sri kothavale.

ಶ್ರೀ ಡಿ. ದೇವರಾಜ ಅರಸ್.- ಆ ಕಥೆ ಅಲ್ಲಿಗೇ ಬಿಡೋಣ. ಹೊಸದಾಗಿ ಸಂತ್ಸಂಪ್ರದಾಯ ಬೆಳೆಸೋಣ. ಕಾನೂನಿನ ಪ್ರಕಾರ ಇರುವ ರೂಲ್ಸ್ ಮತ್ತು ರೆಗ್ಯುಲೇಷನ್ಸ್ ಪ್ರಕಾರ ಅದರ ಚೌಕಟ್ಟಿನೊಳಗೆ ಈ ಸಭೆ ನಡೆಯಲು ಎಲ್ಲರೂ ಸಹಕರಿಸಬೇಕು ಎಂದು ಅಧ್ಯಕ್ಷರ ಮೂಲಕ ಮಾನ್ಯ ಸದಸ್ಯರಲ್ಲಿ ಪ್ರಾರ್ಥನೆ ಮಾಡುತ್ತೇನೆ.

# 11. ಮೈಸೂರು ಭೂ ಸುಧಾರಣೆ (ತಿದ್ದುಪಡಿ ಮತ್ತು ಇತರೆ ಅವಕಾಶಗಳು) ವಿಧೇಯಕ,1972

(ದಿನಾಂಕ 15-4-1972)

ಶ್ರೀ ಬಿ. ವಿ. ಕಕ್ಕಿಲ್ಲಾಯ (ಬೈಂದೂರು).- ಸ್ವಾಮಿ, ಈಗ ಮಾನ್ಯ ಮಂತ್ರಿಗಳು ಸಭೆಯ ಮುಂದೆ ಏನು ಒಂದು ಮಸೂದೆಯನ್ನು ಮಂಡಿಸಿದ್ದಾರೆ ಅದರ ಬಗ್ಗೆ ನನಗೆ ತಿಳಿದಮಟ್ಟಿಗೆ ಹೇಳುವುದಾದರೆ, ಕೆಲವು ಭೂಮಾಲೀಕರು ಗೇಣೀಬಾಕಿಗಾಗಿ ಗೇಣೀದಾರರ ಮೇಲೆ ಕೋರ್ಟುಗಳಲ್ಲಿ ಖಟ್ಲೆಹಾಕಿದ್ದಾರೆ, ಆ ಸಂದರ್ಭದಲ್ಲಿ ಗೇಣಿ ಕೊಡದೆ ತಪ್ಪಿತಸ್ಥರಾಗಿರತಕ್ಕ ಗೇಣೀದಾರರಿಂದ ಸಂಪೂರ್ಣವಾಗಿ ಜಮೀನನ್ನು ಕಿತ್ತುಕೊಂಡು ಅವರನ್ನು ಹೊರಗೆ ಹಾಕುವುದಕ್ಕೆ ಅವಕಾಶವಾಗದಿರಲಿ, ಆ ಗೇಣೀದಾರರಿಗೆ ಒಂದು ತಾತ್ಕಾಲಿಕ ಪರಿಹಾರ ನೀಡೋಣ ಎಂಬ ದೃಷ್ಟಿಯಿಂದ, ಆ ಒಂದು ರಕ್ಷಣೆ ನೀಡಲು, ಇದನ್ನು ತಂದಿದ್ದಾರೆಂದು ನನಗೆನಿಸುತ್ತಿದೆ. ಆದರೆ ಆ ವಿಚಾರದಲ್ಲಿ ಸರ್ಕಾರದವರ ಉದ್ದೇಶ ಏನೇ ಇರಲಿ ಆ ಗೇಣೀದಾರರಿಗೆ ಇದರಿಂದ ಏನೂ ಹಿತಸಾಧನೆ ಆಗುವ ಹಾಗೆ ನನಗನ್ನಿಸುವುದಿಲ್ಲ. ಈ ದಿವಸ ನಮ್ಮ ಭೂಸುಧಾರಣೆಯ ಶಾಸನದ 139ನೇ ಸೆಕ್ಷನ್ ಪ್ರಕಾರ ರೆಂಟ್ ರಿಕವರಿಗೆ ಸರ್ಕಾರದವರು ಒಂದು ಎಗ್ಜಿಕ್ಯುಟಿವ್ ಆರ್ಡರನ್ನು ಹೊರಡಿಸಿರುವುದಕ್ಕೆ ಅವಕಾಶವಿದೆ, ಆ ಆರ್ಡರ್ ಮೂಲಕ ಕೋರ್ಟಿನವರು ಕೊಡತಕ್ಕ ಇವಿಕ್ಷನ್ ಆರ್ಡರನ್ನು ತಡೆಗಟ್ಟುವುದಕ್ಕೆ ಸಾಧ್ಯವಾಗುತ್ತದೆಯೇ ಎಂಬುದನ್ನು ಸರ್ಕಾರದವರು ಇನ್ನೊಮ್ಮೆ ಪರಿಶೀಲಿಸಿ ನೋಡಬೇಕಾಗಿದೆ. ಬರುವ ಜೂನ್ ತಿಂಗಳಲ್ಲಿ ಇದರ ಬಗ್ಗೆ ಸರ್ಕಾರದವರು ಒಂದು ಕಾಂಪ್ರಹೆನ್‌ಸೀವ್ ಬಿಲ್ಲನ್ನು ತಂದು ಶಾಸನದಲ್ಲಿರತಕ್ಕ ಲೋಪದೋಷಗಳನ್ನು ಸರಿಪಡಿಸಬೇಕೇ ವಿನಾ ಹೀಗೆ ತಾತ್ಕಾಲಿಕವಾಗಿ ರಕ್ಷಣೆ ಕೊಡತಕ್ಕದ್ದು ಅಸಗತ್ಯ. ಇಂಥ ಒಂದು ಬಿಲ್ಲಿನಿಂದ ತಾತ್ಕಾಲಿಕ ರಕ್ಷಣೆ ಅಸಾಧ್ಯ ಎಂದು ನನಗನಿಸುತ್ತದೆ.

ಶ್ರೀ ಡಿ. ದೇವರಾಜ ಅರಸ್ (ಮುಖ್ಯ ಮಂತ್ರಿಗಳು).- ಮಾನ್ಯ ಅಧ್ಯಕ್ಷರೇ, ಶ್ರೀ ಕಕ್ಕಿಲ್ಲಾಯ ಅವರು ಕೋಟ್ ಮಾಡುತ್ತಿರುವ ಸೆಕ್ಷೆನ್ ಪ್ರಕಾರ ಸರ್ಕಾರ ಆ ಡಿಫಿಕಲ್ಟೀಸನ್ನು ರಿಮೂವ್ ಮಾಡುವುದಕ್ಕಾಗಿ ಇದನ್ನು ತಂದಿಲ್ಲ. ಮಾನ್ಯ ಸದಸ್ಯರು ದಕ್ಷಿಣ ಕನ್ನಡ ಜಿಲ್ಲೆಯಿಂದ ಬರತಕ್ಕವರು, ಅವರಿಗೆ ಇದರ ವಿಚಾರ ಚೆನ್ನಾಗಿ ಗೊತ್ತಿದೆ. ಈ ದಿವಸ ಈ ಗೇಣೀ ಕೊಡದೆ ಕೋರ್ಟ್‌ಗಳಲ್ಲಿ ಹೆಚ್ಚಿಗೆ ಕೇಸುಗಳು ನಡೆಯುತ್ತಿರುವುದೆಲ್ಲಾ ಆ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ. ಅಂಥ ಸಂದರ್ಭದಲ್ಲಿ ಗೇಣೀದಾರರಿಗ ಸ್ವಲ್ಪ ರಿಲೀಫ್ ಕೊಡೋಣ ಎಂದು ನಾವು ಇದನ್ನು ತಂದಿದ್ದೇವೆ. ಅವರೇ ಬೇಡ ಎಂದರೆ ನಾವಿನ್ನೇನು ಮಾಡೋಣ? ಈ ದಿವಸ ಏನು ಜಾರಿಯಲ್ಲಿದೆ ಅದನ್ನು ಹೀಗೇ ಮುಂದುವರಿಸಬೇಕು ಎನ್ನುವಂಥ ಉದ್ದೇಶದಿಂದೇನೂ ನಾವು ಇದನ್ನು ತಂದಿಲ್ಲ. ಸರ್ಕಾರದವರು ಎಲ್ಲಾ ಲೀಗಲ್ ಆಸ್ಪೆಕ್ಟುಗಳನ್ನೂ ಎಗ್ಜಾಮಿನ್ ಮಾಡಿಸಿ ಒಂದು ಕಾಂಪ್ರಹೆನ್‌ಸೀವ್ ಮೆಷರನ್ನು ಏಕೆ ತರಲಿಲ್ಲ ಎಂದು ಕೇಳುತ್ತಾರೆ. ಅದನ್ನು ಜೂನ್ ತಿಂಗಳಲ್ಲಿ ಮಾಡಬೇಕೆಂದಿದೆ. ಅದಕ್ಕೆ ಈಗ ಕಾಲಾವಕಾಶವಿರಲಿಲ್ಲ, ಇದನ್ನು ತಾತ್ಕಾಲಿಕವಾಗಿ ಈಗ ಯಾವ ಟೆನೆಂಟನ್ನು ಭೂಮಿಯಿಂದ ಹೊರಹಾಕಲು ಕ್ರಮಗಳನ್ನು ನಡೆಸಲಾಗುತ್ತದೋ ಅಂಥ ಸಂದರ್ಭಗಳಲ್ಲಿ ಮಾತ್ರ ಇದರಿಂದ ಅನುಕೂಲವಾಗಲೆಂದು ತರಲಾಗಿದೆ. ಇದರಿಂದ ಆ ಗೇಣೀದಾರರಿಗೆ ಇಮ್ಮೀಡಿಯೆಟ್ ರಿಲೀಫ್ ಸಿಗುತ್ತದೆ.

ಶ್ರೀ ಬಿ. ಎ. ಕಕ್ಕಿಲ್ಲಾಯ.- ನಾನೀಗ ಲೀಗಲ್ ಆಸ್ಪೆಕ್ಟ್ಸನ್ನು ಚರ್ಚೆ ಮಾಡುತ್ತಿಲ್ಲ. ಅದರ ಪ್ರಮೇಯವೂ ಈಗಿಲ್ಲ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ಈ ಭೂಸುಧಾರಣೆಯ ಕಾನೂನನ್ನು ತಂದುದು 1966ರಲ್ಲಿ. ಇಂದು ನಾವು 1972ರಲ್ಲಿ ಇದ್ದೇವೆ. ಕೆಲವು ಗೇಣೀದಾರರು ಕೊಡಬೇಕಾದ ಗೇಣೀ ಹಣ ಬಾಕಿ ನಿಂತಿದೆ. ಹಾಗೆ ಇಂದು ಬಾಕಿ ನಿಂತಿರತಕ್ಕ ಮೊಬಲಗಾದರೂ ಬಹಳ ದೊಡ್ಡದು. ಅಷ್ಟು ದೊಡ್ಡ ಮೊತ್ತವನ್ನು ಕೊಟ್ಟು ಗೇಣೀದಾರನಾಗಿ ಉಳಿಯುವುದಕ್ಕಿಂತ ಅದೇ ಹಣ ಅವನಲ್ಲಿದ್ದರೆ ಬೇರೆ ಅವನು ಎಲ್ಲಿಯಾದರೂ ಅದಕ್ಕಿಂತಲೂ ಉತ್ತಮವಾದ ಭೂಮಿಯನ್ನು ಸುಖವಾಗಿ ಖರೀದಿಗೆ ಪಡೆದುಕೊಳ್ಳಬಹುದು. ಇದರಲ್ಲಿ ಗೇಣೀದಾರನಿಗೂ ಮತ್ತು ಭೂಮಾಲೀಕನಿಗೂ ಇರತಕ್ಕ ಸಂಬಂಧ ಇನ್ನೂ ಹಾಗೇ ಮುಂದುವರಿಯತಕ್ಕ ಸಂದರ್ಭವಿದೆ. ಆ ದಿವಸ ನಾವೆಲ್ಲರೂ ಏನು "ಭೂಮಿಯನ್ನು ಉಳುವವನೇ ಹೊಲದ ಒಡೆಯನಾಗಬೇಕು" ಎಂದು ಹೇಳಿದ್ದೇವೋ ಅದು........

ಶ್ರೀ ಡಿ. ದೇವರಾಜ ಅರಸ್.- ಈ ಬಿಲ್ಲನ್ನು ತಂದ ಉದ್ದೇಶ ಏನೆಂಬುದನ್ನು ಈಗಾಗಲೇ ಮಾನ್ಯ ರೆವಿನ್ಯೂ ಮಂತ್ರಿಗಳು ತಿಳಿಸಿರಬೇಕು. ಇದುರಲ್ಲಿ ಮುಖ್ಯವಾಗಿ ಎಲ್ಲರೂ ಗಮನಿಸಬೇಕಾದಂಥ ಒಂದಂಶ ಏನೆಂದರೆ; ಹಿಂದೆ ಈ ಶಾಸನ ಸಭೆಗೆ ಚುನಾವಣೆಗಳು ನಡೆಯುವ ಮುನ್ನ ಹೈಕೋರ್ಟಿನಲ್ಲಿ ಗೇಣೀ ಕೊಡದೆ ಬಾಕಿ ನಿಲ್ಲಿಸಿಕೊಂಡಿದ್ದ ಟೆನೆಂಟುಗಳು ಎವಿಕ್ಟ್ ಮಾಡತಕ್ಕ ತೀರ್ಪನ್ನು ಆ ಕೋರ್ಟಿನಿಂದ ಕೊಡಲಾಗುತ್ತಿತ್ತು. ಅದಕ್ಕೆ ಅವಕಾಶವಿದೆ. ಅಲ್ಲದೆ ಗೇಣೀ ಕೊಡದೆ ಈ ಬಾಕಿಯನ್ನು 4-5 ವರ್ಷಗಳ ಕಾಲ ಹಾಗೇ ನಿಲ್ಲಿಸಿಕೊಂಡು ಬಂದಿದ್ದರೆ ಅಂಥವರ ಬಗ್ಗೆ ಆ ಬಾಕಿ ನಿಂತಿರತಕ್ಕ ಎಲ್ಲ ವರ್ಷಗಳ ಗೇಣೀಯನ್ನೂ ಒಂದೇ ಗಂಟಿನಲ್ಲಿ ಒತ್ತಾಯಮಾಡಿ ವಸೂಲ್ಮಾಡಿಕೊಳ್ಳತಕ್ಕ ಬಗ್ಗೆ ಕೊರ್ಟಿನಲ್ಲಿ ಕೇಸ್ ಹಾಕುವುದಕ್ಕೆ ಜಮೀನ್ದಾರನಿಗೆ ಕಾನೂನು ಪ್ರಕಾರ ಅವಕಾಶವಿದೆ. ಆಗ ಗೇಣೀದಾರನು ಬಾಕಿಯನ್ನು ಪಾವತಿ ಮಾಡಿದಿದ್ದರೆ ಅವನನ್ನು ಇವಿಕ್ಟ್ ಮಾಡಿ ಆಗಿದೆ. ಇನ್ನು ಕೆಲವರನ್ನು ಇವಿಕ್ಟ್ ಮಾಡತಕ್ಕ ಪೊಸೆಸ್ಸಿನಲ್ಲಿದ್ದಾರೆ. ಅಂಥ ಒಂದು ಸಂದರ್ಭವಿದ್ದ ಕಾರಣ ಸರ್ಕಾರಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಅನೇಕ ಮನವಿಗಳು ಬಂದಿವೆ; ಇದೇ ವಿಚಾರದಲ್ಲಿ ಹಿಂದಿದ್ದ ರಾಜ್ಯಪಾಲರಿಗೂ ಮನವಿಗಳು ಬಂದಿದ್ದವು. ಕಳೆದ ಚುನಾವಣೆಗಳ ಕಾಲದಲ್ಲಿ ಮಾನ್ಯ ಪ್ರಧಾನ ಸಚಿವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಿದ್ದ ಕಾಲದಲ್ಲೂ ಕೂಡಾ ಅನೇಕರು ಅವರಿಗೆ ಈ ಸಂಬಂಧವಾದ ಮನವಿಗಳನ್ನು ಅರ್ಪಿಸಿದ್ದರು. ಹಾಗೆ ಹೊರಗೆ ಹಾಕತಕ್ಕ ಟೆನೆಂಟಗಳನ್ನು ತಡೆಗಟ್ಟುವುದಕ್ಕೆ ಕ್ರಮ ಕೈಗೊಳ್ಳಲು ಚುನಾವಣೆಗಳು ನಡೆಯುವುದಕ್ಕೆ ಸ್ವಲ್ಪವೇ ಕಾಲ ಉಳಿದಿತ್ತು. ಆಗ ಒಂದು ಆರ್ಡಿನೆನ್ಸ್‌ನ್ನು ಹೊರಡಿಸುವುದಕ್ಕೆ ಸಾಧ್ಯವಿಲ್ಲವೇ, ಎಂಬ ವಿಚಾರದಲ್ಲಿ ನಾನು ಕೇಂದ್ರ ಸರ್ಕಾರಕ್ಕೆ ಒಂದು ಸಲಹೆ ಕೇಳಿದ್ದೆ. ಆಗ ಕೇಂದ್ರ ಸರ್ಕಾರದಿಂದ ಚುನಾವಣೆಗಳು ಕೇವಲ ಒಂದು ತಿಂಗಳ ಕಾಲದಲ್ಲೇ ನಡೆಯತಕ್ಕವುಗಳಿದ್ದ ಕಾರಣ ಹಾಗೆ ಆರ್ಡಿನೆನ್ಸ್‌ನ್ನು ಹೊರಡಿಸುವುದು ಸೂಕ್ತವಾದ್ದಲ್ಲ ಅದರಿಂದ ಆ ಚುನಾವಣೆಗಳ ಮೇಲೆ ಪರಿಣಾಮವನ್ನು ಬೀರಬಹುದೆಂದು ಹೇಳಿದ್ದರಿಂದ ಆಗ ಅದನ್ನು ನಿಲ್ಲಿಸಿತ್ತು. ಚುನಾವಣೆಗಳು ನಡೆದ ನಂತರ ಇಂಥ ಒಂದು ಕ್ರಮವನ್ನು ಕೈಗೊಳ್ಳಬಹುದೆಂದು ಕೇಂದ್ರ ಸರ್ಕಾರ ಇದಕ್ಕೆ ಒಪ್ಪಿಗೆಯನ್ನು ನೀಡಿತ್ತು. ಆದರೆ ಸಮಗ್ರವಾಗಿ ಆಕ್ಟ್‌ನ್ನೆಲ್ಲಾ ತಿದ್ದುಪಡಿ ಮಾಡುವತನಕ ಇವರನ್ನು ಹೊರಗೆ ಹಾಕತಕ್ಕ ಕೆಲಸ ಮುಂದುವರಿಯುತ್ತಲೇ ಇರುತ್ತದಲ್ಲ ಅದನ್ನು ತಡೆಗಟ್ಟಲು ಈ ಮಸೂದೆಯನ್ನು ತರಲಾಗಿದೆ.

ಇನ್ನು ಉಳಿದ ವಿಷಯಗಳ ಬಗ್ಗೆ ಅಂದರೆ ಗೇಣೀದಾರನಿಗೂ ಭೂಮಾಲೀಕನಿಗೂ ಇರಬೇಕಾದ ಸಂಬಂಧ. ಫ್ಯಾಮಿಲಿ ಹಿಡುವಳಿ, ಸೀಲಿಂಗ್ ಲಿಮಿಟ್ ಇತ್ಯಾದಿಗಳನ್ನೆಲ್ಲಾ ಸರಿಪಡಿಸಲು ಒಂದು ಕಾಂಪ್ರಹೆನ್‌ಸೀವ್ ಬಿಲ್ಲನ್ನು ಜೂನ್ ತಿಂಗಳಲ್ಲಿ ತಂದು ಅದನ್ನೂ ಪಾಸ್ ಮಾಡೋಣ. ಆದರೆ ಹಾಲಿ ಇರತಕ್ಕ ಗೇಣೀದಾರರನ್ನು ಭೂಮಿಯಿಂದ ಹೊರ ಅಟ್ಟುತ್ತಿರುವುದನ್ನು ಮೊದಲು ತಡೆಗಟ್ಟ ಬೇಡವೆ? ಒಂದು ಉದ್ದೇಶದಿಂದ ಇದನ್ನು ತಂದಿದ್ದೇವೆ. ಅಷ್ಟೇ ಶಿವಾಯಿ ಇರತಕ್ಕ ಮಾಮೂಲನ್ನೇ ಮುಂದುವರಿಸುವುದಕ್ಕಾಗಿ ಇದನ್ನು ತಂದಿಲ್ಲ. ಉಳುವವನು ಹೊಲದ ಒಡೆಯನನ್ನಾಗಿ ಮಾಡುತ್ತೇವೆಂದು ಚುನಾವಣಾ ಪ್ರಣಾಳಿಕೆಯಲ್ಲಿ ಬೇರೆ ನಮೂದಿಸಲಾಗಿತ್ತು. ಅದನ್ನು ತಾವೆಲ್ಲರೂ ಪತ್ರಿಕೆಗಳಲ್ಲಿ ಓದಿರಬಹುದು. ಈಗ ತಕ್ಷಣ ಭೂಮಿ ಕಿತ್ತುಕೊಳ್ಳುವುದನ್ನು ತಪ್ಪಿಸುವುದಕ್ಕಾಗಿ ಇದನ್ನು ತರಲಾಗಿದೆ.

ಶ್ರೀ ಬಿ. ವಿ. **ಕಕ್ಕಿಲ್ಲಾಯ.**– ಸರ್ಕಾರದವರು ಇನ್ನು ಒಂದು ತಿಂಗಳ ಅವಧಿಯಲ್ಲೇ ಕಾಂಪ್ರಹೆನ್‌ಸೀವ್ ಮೆಷರನ್ನು ತರುವವರಿದ್ದಾರೆ, ಎಂದು ಮಾನ್ಯ ಮಂತ್ರಿಗಳು ಹೇಳುತ್ತಿದ್ದಾರೆ. ಇದರಲ್ಲಿ ಈಗ 2 ವರ್ಷಗಳ ಗೇಣಿಯನ್ನು ಕೊಟ್ಟರೆ ಒಕ್ಕಲನ್ನು ಎಬ್ಬಿಸಬಾರದು ಎಂದು ಹೇಳಿದೆ. ನಾನು ಹೇಳುತ್ತಿರುವುದು ಈ ಎರಡು ವರ್ಷಗಳ ಗೇಣಿಯನ್ನು ಕೊಡದಿದ್ದರೂ ಗೇಣೀದಾರರನ್ನು ಕಿತ್ತುಹಾಕಬಾರದು. ಆ ರೀತಿ ಒಂದು ಆಜ್ಞೆ ಹೊರಡಿಸಿ ಎಂದು ಹೇಳುತ್ತಿದ್ದೇನೆ.

ಶ್ರೀ **ಡಿ. ದೇವರಾಜ ಅರಸ್.**– ಡಿಫಿಕಲ್ಟೀಸ್ ಏನು ಬರಬಹುದೋ ಅವನ್ನು ಪರಿಶೀಲಿಸೋಣ, ಈಗ ಗೇಣೀ ಕೊಡುವವರು ಯಾರು ಇದ್ದಾರೆ ಅವರು ಹಿಂದಿನ ಬಾಕಿಯನ್ನು ಕೊಡದಿದ್ದರೆ ಎವಿಕ್ಟ್ ಮಾಡಲು ಹೋದಾಗ ಈ ಪಾಯಿಂಟ್ ಬರುತ್ತದೆ. ನಾಳೆ ಕೊಡುವವರು ಕೊಡುವುದಿಲ್ಲ, ಯಾರು ಕೊಟ್ಟಿಲ್ಲ ಅವರು ಕೊಡುವ ಹಾಗಿಲ್ಲ. ಅದು ಸರಿಯೆಂದು ಕಂಡರೆ ಮುಂದೆ ಯೋಚನೆ ಮಾಡೋಣ.

ಶ್ರೀ ಬಿ. ವಿ. **ಕಕ್ಕಿಲ್ಲಾಯ.**– ಇದು ಕೆಲವೇ ದಿವಸಗಳ ವಿಚಾರ. ಗೇಣಿ ಬಾಕಿ ಕೊಡುವುದನ್ನು ಸ್ವಲ್ಪ ಹಿಂದಕ್ಕೆ ಹಾಕಿದರೆ ರೈತರಿಗೆ ಅನುಕೂಲವಾಗಬಹುದು. ನೋಟಿಫಿಕೇಷನ್ ಬಗ್ಗೆ ತೀರ್ಮಾನ ಆಗದೆ ಇರುವ ಬಗ್ಗೆ ಆಜ್ಞೆ ಹೊರಡಿಸುವ ಹಾಗೆ ಇಲ್ಲ ಎಂದು ಅಮೆಂಡ್‌ಮೆಂಟಿನಲ್ಲಿ ಹೇಳಿದ್ದಾರೆ. ಎರಡನೆ ಕ್ಲಾಸ್‌ನಲ್ಲಿ ತೀರ್ಮಾನ ಆಗಿರುವ ಬಗ್ಗೆ ಏನು ಮಾಡಬೇಕು ಎಂದು ಹೇಳಿದ್ದಾರೆ. ತಹಶೀಲ್ದಾರರು ಹೊರಡಿಸಿದಂಥ ನೋಟಿಫೀಕೇಷನ್ ಮೇಲೆ ಡೆಪ್ಯೂಟಿ ಕಮೀಷನರವರಿಗೆ ಅಪೀಲು ಮಾಡಿದ್ದಾರೆ. ಅಪೀಲು ಮಾಡಿದ ರೈತರಿಗೆ ಸ್ಟೇ ಕೊಟ್ಟಿದ್ದಾರೆ. ಉಳಿದವರಿಗೆ ಸ್ಟೇ ಇಲ್ಲ. ಉಳಿದ ರೈತರು ದಾವೆಗಳು ಸಿವಿಲ್ ಕೋರ್ಟುಗಳಲ್ಲಿ ಇವೆ. ಒಂದು ವೇಳೆ ಡಿಕ್ರಿ ಆಯಿತು ಎಂದು ಇಟ್ಟುಕೊಳ್ಳೋಣ. ಅವರು ಎವಿಕ್ಟ್ ಮಾಡುತ್ತಾರೆ ಅಥವಾ ಎರಡು ವರ್ಷದ ಗೇಣಿ ಕೊಡಬೇಕು. ಈಗಿರುವ ನೋಟಿಫಿಕೇಷನ್ ಪ್ರಕಾರ ಎರಡು ವರ್ಷದ್ದು ಕೊಡಬೇಕು. ನಾಳೆ ಅಪೀಲಿನಲ್ಲಿ ನೋಟಿಫಿಕೇಷನ್ ಬದಲಾವಣೆ ಮಾಡಿದರೆ ಅಥವಾ ರದ್ದು ಮಾಡಿದರೆ ಮತ್ತೆ ಕೇಸುಗಳನ್ನು ಕೋರ್ಟಿಗೆ ಬರುತ್ತವೆ ಮತ್ತು ತೀರ್ಮಾನವಾಗುತ್ತವೆ. ಅವರು ಕೊಡಬೇಕಾದಂಥ ಗೇಣಿ ಪ್ರಮಾಣಕ್ಕೂ ಈಗ ಯಾರ ಕೇಸುಗಳು ಡಿಕ್ರಿ ಆಗಿದೆ ಅದರ ಗೇಣಿ ಪ್ರಮಾಣಕ್ಕೂ ಬಹಳ ವ್ಯತ್ಯಾಸ ಬರುತ್ತದೆ. ಒಂದು ವೇಳೆ ಡಿಕ್ರಿ ಆಯಿತು ಎಂದು ಇಟ್ಟುಕೊಳ್ಳೋಣ, ಅವರು ಎವಿಕ್ಟ್ ಮಾಡುತ್ತಾರೆ ಅಥವಾ ಎರಡು ವರ್ಷದ ಗೇಣಿ ಕೊಡಬೇಕು. ಈಗಿರುವ

ನೋಟಿಫೀಕೇಷನ್ ಪ್ರಕಾರ ರದ್ದು ಮಾಡಿದರೆ ಮತ್ತೆ ಕೇಸುಗಳು ಕೋರ್ಟಿಗೆ ಬರುತ್ತವೆ ಮತ್ತು ತೀರ್ಮಾನವಾಗುತ್ತವೆ. ಆದರು ಕೊಡಬೇಕಾದಂಥ ಅನಾಮಲಿಸ್ ಪೊಸಿಷನ್‌ಗೆ ಅವಕಾಶವಿದೆ. ಉದಾಹರಣೆಗೆ ಹೇಳುವುದಾದರೆ, ಬಂಟವಾಳ ತಾಲ್ಲೂಕು ತೆಗೆದುಕೊಂಡರೆ ಡೆಪ್ಯೂಟಿಕಮೀಷನರ್ ರವರಿಗೆ ಕೆಲವು ನೋಟಿಫಿಕೇಷನ್ ಬಗ್ಗೆ ಅಪೀಲು ಮಾಡಿದ್ದಾರೆ; ಕೆಲವರು ಮಾಡಿಲ್ಲ. ಡೆಪ್ಯೂಟಿ ಕಮೀಷನರ್ ರವರು ಜನರಲ್ ಸ್ಟೇ ಕೊಟ್ಟಿಲ್ಲ. ಯಾರು ಅಪೀಲು ಮಾಡಿದ್ದಾರೆ ಅವರ ವಿರುದ್ಧವಾಗಿ ಸಿವಿಲ್ ಕೋರ್ಟಿನಲ್ಲಿ ದಾವೆ ಇವೆ. ಅದನ್ನು ಸ್ಟೇ ಮಾಡಿದ್ದಾರೆ. ಉಳಿದ ದಾವೆಗಳು ನಡೆಯುತ್ತಾ ಇದೆ. ಡೆಪ್ಯೂಟಿ ಕಮೀಷನರ್‌ರವರು ಫೈನಲ್ ಡಿಸಿಷನ್‌ಗೆ ಬರುವ ಮೊದಲು ಸ್ಟೇ ಆಗಿದ್ದ ಕೇಸುಗಳಲ್ಲಿ ಡಿಕ್ರಿ ಆಗಿ ಅಂತಹ ರೈತರ ಕೈಯಿಂದ ಹಣವನ್ನು ವಸೂಲು ಮಾಡಿದರೆ ಈ ಶಾಸನ ಮೂಲಕ ಯಾವುದೇ ರೀತಿಯ ರಕ್ಷಣೆ ಸಿಕ್ಕುವುದಿಲ್ಲ. ಆ ಜನ ಒಬ್ಬೊಬ್ಬರು ಡೆಪ್ಯೂಟಿ ಕಮೀಷನರ್‌ಗೆ ಅಪೀಲು ಮಾಡಿದ್ದು ಇದೆ. ಅಪೀಲ್ಸ್ ಪೆಂಡಿಂಗ್ ಇರುವಾಗ ಈ ನೊಟಿಫೀಕೇಷನ್‌ಗೆ ಬದ್ಧವಾಗಿತಕ್ಕ ಎಲ್ಲಾ ದಾವೆಗಳು ಮುಂದುವರಿಯದ ಹಾಗೆ ಶಾಸನದಲ್ಲಿ ವ್ಯವಸ್ಥೆ ಮಾಡುವುದು ಅಗತ್ಯ. ಇದರಿಂದ ಸ್ವಲ್ಪ ಅನುಕೂಲ ಆಗಬಹುದು. ಈ ಕೆಲವು ವಿಷಯಗಳನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಈ ಬಿಲ್ಲು ತಂದಿದ್ದು ಅನಾವಶ್ಯಕ. ಇದರಿಂದ ಯಾವ ಪ್ರಯೋಜನವೂ ಇಲ್ಲ ಎನ್ನುವುದು ನಮ್ಮ ಅಭಿಪ್ರಾಯವಲ್ಲ. ಆದರೆ ಅದರಿಂದ ಪೂರ್ತಿಯಾದಂಥ ರಕ್ಷಣೆ ರೈತರಿಗೆ ಬರಬೇಕಾಗಿದ್ದರೆ ತಾವು ಏನು ಆಶ್ವಾಸನೆ ಕೊಟ್ಟಿದ್ದೀರಿ, ಆ ಅವಧಿಯೊಳಗೆ ಮೈಸೂರು ಭೂಸುಧಾರಣೆ ಶಾಸನವನ್ನು ಸಮಗ್ರ ತಿದ್ದುಪಡಿ ಮಾಡಿದರೆ ಮಾತ್ರ ಸಾಧ್ಯ ಎಂದು ಮತ್ತೊಮ್ಮೆ ತಮ್ಮ ಗಮನಕ್ಕೆ ತರುತ್ತೇನೆ.

**ಶ್ರೀ ವೀರಪ್ಪಮೊಯಿಲಿ(ಕಾರ್ಕಳ)** -ಸರ್, ಸದನದ ಮುಂದೆ ತಂದಿರುವ ಈ ನಿರ್ದಿಷ್ಟ ತಿದ್ದುಪಡಿಯ ಮೂಲ ಉದ್ದೇಶದ ಬಗ್ಗೆ ನನಗೆ ಮೆಚ್ಚಿಗೆ ಇದೆ. ರಾಜ್ಯದಲ್ಲಿ ಗೇಣಿದಾರರು ಎದುರಿಸುತ್ತಿರುವ ಸಮಸ್ಯೆಗಳ ಎಲ್ಲ ಆಯಾಮಗಳನ್ನು ಈ ಮಸೂದೆ ಒಳಗೊಂಡಿಲ್ಲವೆಂದು ನನಗೆ ಗೊತ್ತು. ಆದರೂ ಇದು ಕೆಲವು ಅಂಶಗಳನ್ನು ಒಳಗೊಂಡಿದೆ. ಮಾನ್ಯ ಕಂದಾಯ ಸಚಿವರು ಹೇಳಿದಂತೆ ಗೇಣಿದಾರರ ಕೆಲವು ಸಮಸ್ಯೆಗಳನ್ನು ಇದು ಬಗೆಹರಿಸುತ್ತದೆ. ಈ ನಿರ್ದಿಷ್ಟ ತಿದ್ದುಪಡಿಯು ಕೊಡುವ ಅನುಕೂಲಗಳ ಪರಿಧಿಯಲ್ಲಿ ಆದಷ್ಟು ಸಂಖ್ಯೆಯ ಗೇಣಿದಾರರನ್ನು ನಾವು ತರುತ್ತಿದ್ದೇವೆ.

ನನ್ನ ಸಮಸ್ಯೆಯೆಂದರೆ ಮಸೂದೆಯ ಗುರಿ ಹಾಗೂ ಉದ್ದೇಶಗಳನ್ನು ಮುಟ್ಟುವಲ್ಲಿ ಈ ತಿದ್ದುಪಡಿಯು ಸಫಲವಾಗಲಾರದು ಎನ್ನುವ ಅಂಜಿಕೆ. 1965ರಿಂದ1971ರವರೆಗೂ ಪ್ರಕಟಣೆಗೆ ಸಂಬಂಧಿಸಿದಂತೆ ಸಾಕಷ್ಟು ಗೊಂದಲವಿದೆ. ಹಲವು ಪ್ರಕಟಣೆಗಳು ಹಾಗೆಯೇ ಇವೆ ಹಾಗೂ ಮುಖ್ಯ ನ್ಯಾಯಾಲಯದಲ್ಲಿ ಹಲವಾರು ರಿಟ್ ಅರ್ಜಿಗಳನ್ನು ಸಲ್ಲಿಸಲಾಗಿದೆ. ಗೇಣಿದಾರರಿಗೆ ಈಗಿನ ಗುತ್ತಿಗೆ ಗೇಣಿಯದರ ನ್ಯಾಯವಾಗಿಲ್ಲ. ಸೆಕ್ಷನ್ 8ರ ಅಡಿಯಲ್ಲಿ ನ್ಯಾಯಯತವಾದ ಗೇಣಿಯನ್ನು ನಾವು ನಿಗದಿಪಡಿಸುತ್ತೇವೆ ಎನ್ನುವ ಭರವಸೆಯನ್ನು ನಾವು ನೀಡಿದ್ದೇವೆ. ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಥಮ ದರ್ಜೆ ನೀರಾವರಿ ಭೂಮಿಗೆ ಪ್ರತಿ ವಿತರಣೆ ರೂ 600ರಿಂದ 700 ರವರೆಗೆ ಅಥವಾ ಆದಕ್ಕಿಂತ ಹೆಚ್ಚು ಗೇಣಿಯನ್ನು ಗೇಣಿದಾರ ನೀಡುತ್ತಿದ್ದಾನೆ.

**ಶ್ರೀ ದೇವರಾಜ ಅರಸ್.-** ಮೇಡಂ, ಈ ಮಸೂದೆಯ ವ್ಯಾಪ್ತಿ ಅತ್ಯಂತ ಸೀಮಿತವಾದದ್ದು ಎನ್ನುವುದು ನನ್ನ ಅನಿಸಿಕೆ ಇದು ಎಷ್ಟು ಗೇಣಿಕೊಡಬೇಕು ಎನ್ನುವುದಕ್ಕೆ ನಿಬಂಧನೆಯಿಲ್ಲ. ಗೇಣಿ

ನಿಗದಿಪಡಿಸಲು ನಾವು ಅನುಸರಿಸುತ್ತಿರುವ ಈಗಿನ ಲೆಕ್ಕಾಚಾರ ಸರಿಯೆ ಅಲ್ಲವೆ ಎನ್ನುವುದನ್ನು ನಾವು ನಂತರ ತೆಗೆದುಕೊಳ್ಳಬಹುದು. ಇದು ಕೇವಲ ಕೆಲವು ಗೇಣಿದಾರರಿಗೆ ರಕ್ಷಣೆಯನ್ನೊದಗಿಸುವುದಕ್ಕೆ ಮಾತ್ರ ಸೀಮಿತವಾಗುತ್ತದೆ. ಈ ಕಾನೂನು ಜಾರಿಗೆ ಬಂದ ಕೆಲವು ಕಡೆಗಳಲ್ಲಿ ಮುಖ್ಯವಾಗಿ ಅಲ್ಲಿನ ಗೇಣೀದಾರರಿಗೂ ಭೂಮಾಲೀಕರಿಗೂ ನಡುವೆ ಜಗಳ ಶುರುವಾಗಿದೆ. ಸ್ಥಳೀಯ ಅಧಿಕಾರಿಗಳು ಬಂದರೆ ಉತ್ಪಾದನೆಯ ಆಧಾರದ ಮೇಲೆ ನಿಗದಿ ಪಡಿಸಿದ ಗೇಣಿಯ ಭೂಮಾಲೀಕನಿಗೆ ಒಪ್ಪಿಗೆಯಾಗಲಿಲ್ಲ. ಅವನು ನ್ಯಾಯಾಲಯದ ಮೊರೆ ಹೋದ ಅಥವಾ ಕೊನೆಗೂ ಗೇಣಿ ಎಷ್ಟು ಎಂದು ತೀರ್ಮಾನವಾದಾಗ ಅದು ಗೇಣಿದಾರನಿಗೆ ಒಪ್ಪಿಗೆಯಾಗದೆ ಅವನೂ ನ್ಯಾಯಾಲಯಕ್ಕೆ ಹೋಗುತ್ತಾನೆ. ಇವರಿಬ್ಬರಲ್ಲಿ ಯಾರಾದರೂ ಒಬ್ಬರು ನ್ಯಾಯಾಲಯಕ್ಕೆ ಹೋಗುತ್ತಲೇ ಇರುತ್ತಿದ್ದರು. ಈ ನಡುವೆ ಏನೂ ತೀರ್ಮಾನವಾಗದೆ ಉಳಿಯುತ್ತಿದೆ. ಏಕೆಂದರೆ ಭೂಮಾಲಿಕ ಎಷ್ಟು ಪಡೆಯಬೇಕೆಂದಾಗಲಿ, ಗೇಣಿದಾರ ಎಷ್ಟು ಕೊಡಬೇಕೆಂದಾಗಲಿ ತೀರ್ಮಾನವಾಗುತ್ತಲೆ ಇರಲಿಲ್ಲ. ಕೊನೆಗೂ ತೀರ್ಮಾನವಾದಾಗ ಭೂಮಾಲಿಕ 'ಕೋರ್ಟ್ ತೀರ್ಮಾನದಂತೆ ಗೇಣಿಯನ್ನು ಕೊಡು' ಎಂದು ಗೇಣಿದಾರನನ್ನು ಕೇಳುತ್ತಾನೆ. ಆದರೆ ಅಷ್ಟು ವರ್ಷಗಳದ್ದೂ ಒಟ್ಟಿಗೆ ಕೊಡಬೇಕಾದ ಪರಿಸ್ಥಿತಿಯನ್ನು ಎದುರಿಸಲು ಗೇಣಿದಾರ ಸಿದ್ಧನಿರುವುದಿಲ್ಲ. ಆದರೆ ಭೂಮಾಲೀಕ ಅವನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ತಯಾರಿರುವುದಿಲ್ಲ. 'ನನಗೆ ಡಿಕ್ರಿ ಸಿಕ್ಕದೆ ನಿನ್ನ ಜಾಗ ಖಾಲಿ ಮಾಡಿಸುತ್ತೇನೆ, ಗೇಣಿ ಕೊಡದಿದ್ದರೆ ಕಾನೂನಿನಲ್ಲಿ ಹಾಗೆ ಮಾಡುವುದಕ್ಕೆ ಅವಕಾಶವಿದೆ" ಎಂದು ಭೂಮಾಲೀಕ ಬೆದರಿಸುತ್ತಾನೆ. ಬಡ ಗೇಣಿದಾರ 3-4 ವರ್ಷಗಳ ಗೇಣಿಯನ್ನು ಒಟ್ಟಿಗೆ ಕೊಡಲು ಅಸಹಾಯಕನಾಗಿರುತ್ತಾನೆ. ಕಾನೂನಿನ ಪ್ರಕಾರ ಅಂತಹವರನ್ನು ಖಾಲಿ ಮಾಡಿಸಬಹುದು. ಕೆಲವರು ಈಗಾಗಲೇ ಉಚ್ಚಾಟಿತರಾಗಿದ್ದಾರೆ. ಇನ್ನು ಕೆಲವರನ್ನು ಉಚ್ಚಾಟಿಸುವ ಪ್ರಕ್ರಿಯೆ ಮುಂದುವರೆಯುತ್ತಿದೆ.

ಮಾನ್ಯ ಸದಸ್ಯರು ಹೇಳಿದ ಒಂದು ಅಂಶವನ್ನು ಪರಿಶೀಲಿಸಲಾಗುತ್ತದೆ. ಅದೆಂದರೆ ಎಲ್ಲ ಕಡೆಯಲ್ಲಿಯೂ ಜಿಲ್ಲಾಧಿಕಾರಿಗಳಿಗೆ ಕೇಸುಗಳನ್ನು ನೋಡುತ್ತಾರೆಯೋ ಅಥವಾ ತಹಶೀಲ್ದಾರರೆ ಎನ್ನುವುದು. ನಾವು ಒಟ್ಟಾಗಿ ಗೇಣಿಯನ್ನು ಕಡಿಮೆ ಮಾಡಲು ನಿರ್ಧಾರ ಕೈಗೊಂಡೆವೆಂದಿಟ್ಟುಕೊಳ್ಳಿ. ಆಗ ಬರುವ ಪ್ರಶ್ನೆ ನಾವು ಒಟ್ಟು ಉತ್ಪಾದನೆಯನ್ನು ಆಧಾರವಾಗಿಟ್ಟುಕೊಂಡು ಅದರ ಐದನೇ ಒಂದು ಭಾಗವನ್ನು ಗೇಣಿಯಾಗಿ ಕೊಡಬೇಕೆಂಬುದು ಈಗಿನ ಕಾನೂನು. ಮೈಸೂರು ರಾಜ್ಯದಲ್ಲಿ ಇದರ ಸಮಸ್ಯೆ ಎಂದರೆ ಇದು ನೀರಾವರಿ ಭೂಮಿಗೆ ಸಂಬಂಧಿಸಿದ್ದು. ಉದಾಹರಣೆಗೆ ನಾವು ಭೂಕಂದಾಯವನ್ನು ಆಧಾರವಾಗಿಟ್ಟುಕೊಂಡು ಗೇಣಿಯನ್ನು ನಿರ್ಧರಿಸುವ ಬಗ್ಗೆ ಯೋಚಿಸಿದೆವೋ ಅದೃಷ್ಟವೋ ದುರಾದೃಷ್ಟವೋ ಇದ್ದ ಪದ್ಧತಿಯಂತೆ ನೀರಿನ ತೆರಿಗೆಯೂ ಭೂಕಂದಾಯದ ಒಂದು ಭಾಗವಾಗಿತ್ತು. ಅದೆಲ್ಲವೂ ಭೂಕಂದಾಯದಿಂದ ನಿರ್ಣಯಿಸಲಾಗುತ್ತಿತ್ತು. ಕೆಲವು ಕಾಲದ ಹಿಂದೆ ನಾವು ಆ ಶಾಸನದ ತಿದ್ದುಪಡಿ ತಂದು ನೀರಿನ ಕರವನ್ನು ಭೂಕಂದಾಯದಿಂದ ಬೇರ್ಪಡಿಸಿದೆವು ಈಗ ನಾವು ಭೂಕಂದಾಯದ ಆಧಾರದ ಮೇಲೆ ಗೇಣಿಯನ್ನು ನಿರ್ಧರಿಸುವುದಾದರೆ ಕೆಲವೊಮ್ಮೆ ಆ ಭೂಕಂದಾಯ ನೀರಾವರಿ ಜಮೀನಿಗೂ ಸಹ ಎಕರೆಗೆ ಎಂಟಾಣೆಯಿಂದ ಒಂದು ರೂಪಾಯಿಯವರೆಗೆ ಇರುತ್ತಿತ್ತು. ನೀರಿನ ಕರವನ್ನು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಇದು ಒಂದು ರೀತಿಯಲ್ಲಿ ಭೂ ಮಾಲೀಕರಿಗೆ ಅನ್ಯಾಯ ಮಾಡಿದಂತೆ. ಆದಕ್ಕಾಗಿ ಭೂ ಕಂದಾಯವನ್ನು

ಆಧಾರವಾಗಿಟ್ಟು ಕೊಳ್ಳುವುದನ್ನು ಕೈ ಬಿಡಲಾಯಿತು. ಸಧ್ಯದಲ್ಲಿ ಪ್ರಸ್ತುತ ಕಾನೂನಿನಲ್ಲಿ ಗೇಣಿಯನ್ನು ನಿಗದಿಪಡಿಸಲು ಯಾವ ಫಾರ್ಮುಲವನ್ನು ಮಾಡಲಾಗಿದೆ ಎನ್ನುವ ವಿಷಯದ ಬಗೆಗಿನ ಚರ್ಚೆಯನ್ನು ಮುಂದೆ ಕಾಯ್ದೆಯ ರೆಗ್ಯುಲರ್ ತಿದ್ದುಪಡಿಬರುವ ಸಮಯದಲ್ಲಿ ತೆಗೆದುಕೊಳ್ಳಬಹುದು. ಸಧ್ಯಕ್ಕೆ ನಮ್ಮ ಆದ್ಯತೆ ಎಂದರೆ ಸ್ವಾಧೀನಪಡಿಸಿಕೊಳ್ಳುವುದರಿಂದ ಗೇಣಿದಾರರಿಗೆ ರಕ್ಷಣೆ ಕೊಡುವುದು. ಅವನು ಏನನ್ನೂ ಕೊಡದಿದ್ದಾಗಲೂ ಅವನಿಗೆ ರಕ್ಷಣೆಯನ್ನು ನೀಡಿದರೆ ಅದಕ್ಕೆ ಒಂದು ಸಮರ್ಥನೆ ಇರುವುದಿಲ್ಲ. ಅವನಿಗೆ ನಾವು ನಾಲ್ಕು ವರ್ಷಗಳ ಗೇಣಿಯನ್ನು ಕೊಡು ಎಂದು ಕೇಳುವುದಿಲ್ಲ. ಕನಿಷ್ಠ ಪಕ್ಷ ಪ್ರಸ್ತುತ ವರ್ಷದ ಗೇಣಿಯನ್ನು ಅವನು ಕೊಡಲಿ. ಹಿಂದಿನ ವರ್ಷಗಳ ಬಾಕಿ ಇದ್ದಲ್ಲಿ ಹಿಂದಿನ ಒಂದು ವರ್ಷದ ಬಾಕಿ ಕೊಡಲಿ. ನಾಲ್ಕು ವರ್ಷದ ಬಾಕಿ ಇದ್ದಲ್ಲಿ ಅವನು ಏನನ್ನೂ ಕೊಡುವುದು ಬೇಡ. ಸಧ್ಯಕ್ಕೆ ನಾವು ಮಾಡುತ್ತಿರುವ ತಿದ್ದುಪಡಿ ಅದೆ.

ಶ್ರೀ ಎಸ್. ಬಂಗಾರಪ್ಪ.- ವಿಶೇಷವಾಗಿ ರಿಸಮ್‌ಷನ್ ಆನ್ ದಿ ಬೇಸಿಸ್ ಆಫ್ ರೆಂಟ್‌ಗೆ ಅಪ್ಲಿಕೇಷನ್ ಬರುವುದು ಸೆಕ್ಷೆನ್ 14ರ ಪ್ರಕಾರ ಎವಿಕ್ಷನ್‌ಗೆ ಜಾಸ್ತಿ ಅಪ್ಲಿಕೇಷನ್ಸ್ ಬರುತ್ತವೆ. ಇದನ್ನು ಮುಖ್ಯವಾಗಿ ಇವರಲ್ಲಿ ಅಳವಡಿಸಬೇಕು. ಆದುದರಿಂದ ಈ ಬಿಲ್ಲನ್ನು ವಿತ್‌ಡ್ರಾ ಮಾಡಿ ಸೋಮವಾರ ತೆಗೆದುಕೊಂಡು ಬನ್ನಿ ಎಂದು ನನ್ನ ಸಲಹೆ.

**Sri VEERAPPA MOILY.-** Madam Speaker, the words" no proceedings" as shown in the amending Bill will show that prior to the determination of the rent made by the Tahsildar and notified" by him, if any proceedings are instituted before a court, such proceedings will stay. As I have contended before, right from1966 rent is in arrears and when it is in arrears he will have issued notice by june1966 . That is contemplated under section 122 (a). Thereafter he will issue notice for eviction. what happens is, by this time three notices will have been issued. From the amendment which is now introduced it will give an impression to the court that the notices, which have been issued earlier to the amendment now introduced, will remain and after the amendment is made the landlord can take action and he can file eviction petition under section 23. If this is done, it will take away the entire effect. For example if notification has been finalised in 1971-72,a tenant would not have paid rent because of the exorbitant rent prevalent and he would be cherishing the hope that the rent would be reduced. Once a matter goes to a court every litigant will have the hope that only after determination of rent he need pay. That is always the tendency. One cannot say that he has allowed rent to be accumulated and therefore the tenant must suffer. That must not be the attitude. If a landlord has

issued notice earlier it cannot be allowed to have legal force. A tenant does not know what quantum he has to pay. when a case is under adjudiction he will not be in a position to know what amount he has to pay. In such cases his interests have to be protected, simply because of a legal lacuna you cannot ask the tenants to pay arrears. Take, for instance, the case of South Canara itself. The notificatiion was finalised in 1970. Prior to that there were decrees pending against some of the tenants. As stated by the Hon'ble Member Sri Kakkilaya, some of the cases have been stayed. In fact, what has happened is that the landlords have issued notices and kept all the ground ready for filing eviction proceedings. By virtue of this amendment he will be entitled to file for eviction because the notification has been finalised in 1970 and a shrewed landlord will not be so foolish as to file for eviction first under section 22. First he will take action for attachment of crops, next attachment of moveables and after exhaustion all this to enforce the decree. So, in such cases by the time he takes to eviction proceedings the tenant will not have anything. I therefore suggest that in the proposed provison to section 22, the words "notice or" may be added before the words "no proceedings" in the provise proposed to section 22. If those words are added, I think it will help lakhs of tenants who are waiting for relief and it will give substantial relief to all the tenants. we will also be not leaving the poor tenants to the mercy of judicial officers. In fact,we are saving them from such legal lacuna now created by the legislation. So my humble suggestion is that the words "notice or" after the words "there shall be" in the first line of the proviso to section 22 should be inserted. If these words are added I feel that substantial benefit or relief could be given to tenants as narrated in the statement of objects and reasons by the Hon. Minister.

Then in clause 4 of the amending Bill mere mention to the effect that the tenant is required to pay rent of two years to the land-lord has been made. In fact in the original Act more advantageous benefit has been given than by this amendment Bill. In the original section certain discretion was given to the judicial officer. The present

amendment will take away that particular discretion and it will make the judicial officer to pass a conditional order and leave the tenant to face a big problem. so I would suggest that the original section might be retained and the proposed amendment omitted. Of course, if the Hon. minister is more particular about the payment of rent of two years by tenants he could retain this provision in section 23 itself. I think while drafting the Bill they seem to have forgotten the very effect of section 23.

**Sri D. DEVARAJAURS.-** I would like the Hon.member to go through section 23 and sub-sections there in carefully before making his observations. If there were to be any relief then there would not have been any evictions. Further the arrears are to be paid only if the court decides so. Your view seems to be that the original section 23 gives more relief than the amending clauses of the Bill. But kindly go through the section carefully and then comment.

## 12. ವಿದ್ಯುಚ್ಛಕ್ತಿ ಇಲಾಖೆಯನ್ನು ಕುರಿತು ಚರ್ಚೆ

(28-3-53)

ಶ್ರೀ ಡಿ. ದೇವರಾಜ ಅರಸ್(ಹುಣಸೂರು).- ಸ್ವಾಮಿ, ಕಾಲ ಕಡಿಮೆಯಾಗಿರುವುದರಿಂದ ನಾನು ಒಂದೆರಡು ವಿಷಯಗಳನ್ನು ಮಾತ್ರ ಬೇಗ ಬೇಗ ಹೇಳುತ್ತೇನೆ.

ವಿದ್ಯುಚ್ಛಕ್ತಿ ಇಲಾಖೆ ಒಂದು ಪ್ಲಾನ್ಡ್ ಬೇಸಿಸ್ ಮೇಲೆ ಕೆಲಸ ನಡೆಸುತ್ತಿಲ್ಲ ಎಂದು ಶ್ರೀ ಎಸ್. ಗೋಪಾಲಗೌಡರು ಹೇಳಿದರು. ಶ್ರೀ ಟಿ, ಮರಿಯಪ್ಪನವರು ಇಂದು ಪ್ಲಾನ್ ಪ್ರಕಾರ ನಡೆಯತ್ತಿದೆ ಎಂದು ಹೇಳಿದರು. ಆದರೆ ನಮ್ಮ ಮಾನ್ಯ ಗೆಳೆಯರು ಹೇಳಿದ 'ಈಪ್ಲಾನ್' ಪ್ರಕಾರ ನಡೆದರೆ ಯಾವ ಕೆಲಸವೂ ಆಗುವುದಿಲ್ಲ. ಪ್ರತಿಯೊಂದು ಕೆಲಸಕ್ಕೂ ಅಂದಾಜು, ಯೋಜನೆ, ಪ್ಲಾನ್ ಇತ್ಯಾದಿಗಳೆಲ್ಲವೂ ಈಗಿನ ಆಧುನಿಕ ಪ್ರಪಂಚಕ್ಕಂತೂ ಬಹಳ ಮುಖ್ಯವಾದುವುಗಳೆಂಬುದು ಎಲ್ಲರಿಗೂ ಗೊತ್ತೇ ಇದೆ. ಸ್ವಾಮಿ ಲೆನಿನ್ ಮಹಾಶಯನು ಹೇಳಿರತಕ್ಕಂಥ ಒಂದು ಮಾತನ್ನು ಈ ಸಂದರ್ಭದಲ್ಲಿ ಈ ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ.

ಶ್ರೀ ಜಿ. ಮಹಮದ್ ಇಮಾಂ: ಓಹೋ ತಾವು ಬಹಳ ದೂರ ಹೋಗಿಬಿಟ್ಟಿದ್ದೀರಿ!

ಶ್ರೀ ಡಿ. ದೇವರಾಜ ಅರಸ್: – ಆತನು ರೆವಲ್ಯೂಷನ್ ವಿಚಾರವಾಗಿ ಹೀಗೆ ಹೇಳಿದ್ದಾನೆ. "Electricity should be the watch word for progress" ಹೀಗೆ ಈ ವಿದ್ಯುಚ್ಛಕ್ತಿಗೆ ಎಷ್ಟು ಪ್ರಾಮುಖ್ಯತೆಯಿರುತ್ತದೆ ಎಂಬುದನ್ನು ಮತ್ತು ಇದು ಹೇಗೆ ಪ್ರಪಂಚದಲ್ಲಿ ರೆವಲ್ಯೂಷನರಿ ಬದಲಾವಣೆಗಳನ್ನು ತರುತ್ತದೆಂಬ ಅಂಶವನ್ನೂ ಆತ ಬಹಳ ಹಿಂದೆಯೇ ಹೇಳಿದ್ದಾನೆ. ಆದರೆ ನಮ್ಮ ಮೈಸೂರಿನಲ್ಲಿ ಈ ವಿದ್ಯುಚ್ಛಕ್ತಿಯನ್ನು ಒಂದು ಪ್ಲಾನ್ಡ್ ಬೇಸಿಸ್ ಮೇಲೆ ಹಂಚಬೇಕಾಗಿದೆ ಎಂದು ಹೇಳಿದರೆ, ಅದಕ್ಕೇ ಎಂದು ಪ್ಲಾನ್ ಮತ್ತು ಎಸ್ಟಿಮೇಟುಗಳನ್ನು ತಯಾರಿಸಿ ಆ ಪ್ರಕಾರ ಇದನ್ನು ಹಂಚಬೇಕೆಂದು ಹೇಳುವಂಥ ಪ್ಲಾನ್ ಇಲ್ಲ. ಈ ದಿವಸ ಈ ವಿದ್ಯುಚ್ಛಕ್ತಿ ಈ ಆಧುನಿಕ ಪ್ರಪಂಚದಲ್ಲಿ ಏನೇನು ಕೆಲಸಗಳನ್ನು ಮಾಡುತ್ತಿದೆ. ಇದರಿಂದ ಎಂಥೆಂಥ ವಿಚಿತ್ರ ಕೆಲಸಗಳು ನಡೆಯುತ್ತಿದೆ ಎಂಬುದನ್ನು ನಾವು ಆಲೋಚಿಸಿ ನಮ್ಮ ವ್ಯವಸಾಯ ಅಭಿವೃದ್ಧಿ ತರತಕ್ಕ ಬಗ್ಗೆ ನಾವೀದಿವಸ ಈ ವಿದ್ಯುಚ್ಛಕ್ತಿಯನ್ನು ಹೇಗೆ ಉಪಯೋಗ ಮಾಡಿಕೊಳ್ಳಬೇಕೆಂಬ ಬಗ್ಗೆ ಎಂದು ಖಚಿತವಾದ ತೀರ್ಮಾನಕ್ಕೆ ಬರಬೇಕಾಗಿದೆ. ಆದರೆ ಜನರು ಈ ದಿವಸ ಒಂದು ಪಾಠಶಾಲೆ ವಿಚಾರ ಬಂದರೆ ಪಾಠ ಶಾಲೆಗಳಿಗಾಗಿ ಹಣವನ್ನು ಹೆಚ್ಚಿಗೆ ಖರ್ಚು ಮಾಡಬೇಕೆಂದು ಕೇಳುತ್ತಿದ್ದಾರೆ. ಮತ್ತೆ ಕೆಲವರು ಆಸ್ಪತ್ರೆ ವಿಚಾರ ಬಂದರೆ ಆಸ್ಪತ್ರೆಗಳಿಗಾಗಿ ಹೆಚ್ಚು ಖರ್ಚು ಮಾಡಬೇಕೆಂದು ತಿಳಿಸುತ್ತಿದ್ದಾರೆ. ಕೆರೆಗಳ ವಿಚಾರ ಬಂದಾಗ ಕೆರೆಗಳಿಗೆ ಹೆಚ್ಚಿನ ಹಣ ವಿನಿಯೋಗ ಮಾಡಬೇಕೆಂದು ಹೇಳುತ್ತಿದ್ದಾರೆ. ಅದೇ ರೀತಿ ಈ ವಿದ್ಯುಚ್ಛಕ್ತಿ ವಿಚಾರ ಬಂದಿರುವಾಗಲೂ ಕೂಡ ಎಲ್ಲರೂ ಈ ಜಾಬಿಗೂ ಹೆಚ್ಚಿಗೆ ಹಣ ಖರ್ಚು ಮಾಡಬೇಕೆಂದು ಹೇಳುತ್ತಿದ್ದಾರೆ. ಇಂಥ ವಾದದಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲವೆಂದು ನಾನು ಹೇಳಬೇಕಾಗಿದೆ. ಈ ಎಲ್ಲ ಜಾಬುಗಳೂ ನಮಗೆ ಬಹಳ ಪ್ರಾಮುಖ್ಯವಾದವುಗಳೇನೋ ಹೌದು. ಆದಾಗ್ಯೂ ನಾವು ತೀರಾ ಹೆಚ್ಚಿನ ಒಂದು ಪ್ರಾಮುಖ್ಯತೆಯನ್ನು ಯಾವುದಕ್ಕೆ ಈ ದಿವಸ ಕೊಡದೆ ಹೋದರೆ, ಅದು ಮುಂದೆ ನಮಗೆ ನಾನಾ ಮುಖವಾಗಿ

ಕೊರತೆಗಳಿಗೆ ಅವಕಾಶವನ್ನುಂಟು ಮಾಡತಕ್ಕದಾಗಿದೆಯೋ ಅಂಥ ಜಾಬಿಗೆ ಎಂದರೆ ಈ ವಿದ್ಯುಚ್ಛಕ್ತಿಗೆ ನಾವು ಪ್ರಥಮ ಸ್ಥಾನದ ಪ್ರಾಮುಖ್ಯತೆ ಕೊಟ್ಟು ಕೇಂದ್ರ ಸರ್ಕಾರ ಹೇಗೆ ಇದಕ್ಕೆ ಅಲ್ಲಿ ಟಾಪ್ ಪ್ರಯೋರ್ಟಿ ಕೊಟ್ಟಿದೆಯೋ ಅದೇ ರೀತಿ ನಾವೂ ಸಹ ಇಲ್ಲಿ ಟಾಪ್‌ಪ್ರಯೋರ್ಟಿ ಕೊಡಬೇಕಾದ್ದು ಅಗತ್ಯ. ಈ ವಿಚಾರವಾಗಿ ಈಗಾಗಲೇ ಮಾನ್ಯ ಶ್ರೀ ಟಿ. ಮರಿಯಪ್ಪನವರೂ ಮತ್ತು ಶ್ರೀ ಭೀಮಪ್ಪನಾಯಕರೂ ವಿಷಯಗಳನ್ನು ಬಹಳ ಚೆನ್ನಾಗಿ ವಿವರಿಸಿರುತ್ತಾರೆ. ಈ ಹಿಂದೆ ಮಾನ್ಯ ಪಟ್ಟಾಭಿರಾಮನ್‌ರವರು ಮಾತನಾಡುತ್ತಾ ಭೂಗರ್ಭದಲ್ಲಿರತಕ್ಕ ನೀರನ್ನೆತ್ತಿ ನಮ್ಮ ವ್ಯವಸಾಯೋದ್ಯಮಗಳನ್ನು ನಾವು ಮುಂದುವರಿಸದೇ ಹೋದರೆ ನಮ್ಮ ದೇಶ ಖಂಡಿತ ಮುಂದೆಬರಲಾರದು ಎಂದು ತಿಳಿಸಿದ್ದಾರೆ. ಇತ್ತೀಚೆಗೆ ಮಳೆ ಬರ ಬರುತ್ತ ಕಡಿಮೆಯಾಗುತ್ತಿದೆ. ಈ ಕಾರಣಗಳಿಂದ ಎಲ್ಲೆಲ್ಲಿ ಅನುಕೂಲವಿದೆಯೋ ಮತ್ತು ಎಲ್ಲೆಲ್ಲಿ ಸಾಧ್ಯವಿರುತ್ತದೋ ಅಲ್ಲೆಲ್ಲಾ ಈ ವಿದ್ಯುಚ್ಛಕ್ತಿಯ ಉತ್ಪನ್ನವನ್ನು ಹೆಚ್ಚಿಸತಕ್ಕದ್ದು ಸರ್ಕಾರದವರ ಮೊದಲನೆಯ ಕರ್ತವ್ಯ. ಇದರ ಅಭ್ಯುದಯಕ್ಕೆ ತಾವು ಎಷ್ಟು ನಿಗಾಕೊಟ್ಟರೆ ಅದು ದೇಶದ ಅಭ್ಯುದಯಕ್ಕೆ ಅಷ್ಟು ಸಹಾಯ ಮಾಡುತ್ತದೆ. ಆದ್ದರಿಂದ ನನಗೆ ಅನಿಸುತ್ತಿದೆ. ತಾವು ಈ ರಸ್ತೆ, ಕೆರೆ, ಆಸ್ಪತ್ರೆ ಇತ್ಯಾದಿಗಳಿಗಾಗಿ ಖರ್ಚು ಮಾಡತಕ್ಕ ಹಣವನ್ನೆಲ್ಲಾ ಸ್ವಲ್ಪ ಕಾಲ ತಾತ್ಕಾಲಿಕವಾಗಿ ನಿಲ್ಲಿಸಿದರೂ ಪರವಾಗಿಲ್ಲ. ಮೊದಲು ಈ ಜಾಬಿಗೆ ಒಂದು ಶಾಶ್ವತವಾದ ತಳಹದಿ ಹಾಕಬೇಕೆಂದು ಹೇಳಲಿಚ್ಛಿಸುತ್ತೇನೆ. ತಮ್ಮ ಮೈಸೂರಿನ ಪ್ರಗತಿಗೋಸ್ಕರವಾಗಿ ತಾವಿದನ್ನು ತಮ್ಮ ನಿತ್ಯಮಂತ್ರವಾಗಿ ಜಪಿಸುತ್ತಿರಬೇಕು. ಈ ಜಾಬಿಗೆ ಸರ್ಕಾರ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಬೇಕು. ಈ ಬಗ್ಗೆ ನಾನು ಇನ್ನೂ ಎಷ್ಟೋ ವಿಚಾರಗಳನ್ನು ಈ ಹಿಂದೆಯೇ ತಿಳಿಸಿದ್ದೇನೆ ಆದರೆ ಹೀಗೆ ಕೋಟ್ಯಾಂತರ ರೂಪಾಯಿಗಳನ್ನು ಹಾಕತಕ್ಕ ಯೋಜನೆಯ ಬಗ್ಗೆ ಒಂದು ಖಚಿತವಾದ ಯೋಜನೆಯನ್ನು ಹಾಕಿಕೊಳ್ಳಬೇಕಾದದ್ದು ಅತ್ಯಾವಶ್ಯಕ. ಈ ಸಾಲಿನಲ್ಲಿ ಇದಕ್ಕಾಗಿ ತಾವು ಒಂದು ಕೋಟಿ ರೂಪಾಯಿಗಳನ್ನು ಒದಗಿಸಿದ್ದೀರಿ. ಅದು ಬಹಳ ಸಂತೋಷದ ವಿಚಾರ. ಇನ್ನು ಮೈಸೂರು ಜಿಲ್ಲಾ ಬೋರ್ಡಿನಿಂದ ಒಂದು ಸಲಹೆಯೋನೋ ಸರ್ಕಾರಕ್ಕೆ ಬಂದಿದೆಯೆಂದು ಗೊತ್ತಾಯಿತು. ಆದರೆ ತಾವು ಆ ಬಗ್ಗೆ ಅದನ್ನು ಸ್ಪಷ್ಟವಾಗಿ ಮತ್ತು ಕೂಲಂಕುಷವಾಗಿ ಪರಿಶೀಲನೆ ಮಾಡಿ ಮುಂದುವರಿಯುವುದು ಸೂಕ್ತವೆಂದು ಹೇಳುತ್ತೇನೆ.

ಕೊನೆಯದಾಗಿ ನಾನು ಮೊದಲೇ ಹೇಳಿದ ಹಾಗೆ, ಸರ್ಕಾರದವರು ಇನ್ನಾವುದಕ್ಕೆ ಬೇಕಾದರೂ ಸಾಲ ತೆಗೆಯಲಿ ಅಥವಾ ಬಿಡಲಿ, ಇದಕ್ಕೆ ಸಾಲ ತೆಗೆಯಲೇಬೇಕು. ಯಾವ ಜಾಬಿನಲ್ಲಿ ದುಡ್ಡು ಕಡಿಮೆ ಮಾಡಿ ಮಿಗಿಸಿದರೂ ಕೂಡ ಅದನ್ನು ಇನ್ನು ಮೇಲೆ ಬರೀ ವಿದ್ಯುಚ್ಛಕ್ತಿಯ ಉತ್ಪಾದನೆಗಾಗಿ ಹಾಕಿ ಸೂಕ್ತವಾದ ರೀತಿಯಲ್ಲಿ ಉಪಯೋಗಿಸಬೇಕು. Planned economy ಎಂದು ನಾವೇನು ಹೇಳುತ್ತೇವೋ ಅದಕ್ಕೆ ಅನುಗುಣವಾಗಿ ಹಣವನ್ನು ಹಾಕತಕ್ಕ ಮಾರ್ಗ ಇದೇ ಎಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

•

## 13. ಪರಿಶಿಷ್ಟ ಜಾತಿ / ಪಂಗಡಗಳಿಗೆ ಬಡ್ತಿಯಲ್ಲಿ ಮೀಸಲಾತಿ ಚರ್ಚೆ

(28 ಮಾರ್ಚ್ 1978)

ಶ್ರೀ ಡಿ. ದೇವರಾಜ ಅರಸ್ (ಮುಖ್ಯಮಂತ್ರಿ).- ಭಾರತದ ಸಂವಿಧಾನ ಪರಿಶಿಷ್ಟ ಜಾತಿಗಳು ಪಂಗಡಗಳು ಮತ್ತು ಇತರೆ ಹಿಂದುಳಿದ ವರ್ಗಗಳ ಜನರನ್ನು ನಾಗರೀಕ ಸೇವೆಗಳಿಗೆ ನೇಮಕ ಮಾಡಿಕೊಳ್ಳಲು ಮೀಸಲಾತಿಯನ್ನು ಒದಗಿಸಿದೆ. ಅದಕ್ಕನುಗುಣವಾಗಿ ಭಾರತ ಸರ್ಕಾರ ಮತ್ತು ಎಲ್ಲ ರಾಜ್ಯ ಸರ್ಕಾರಗಳು ನಿಯಮಗಳನ್ನು ರಚಿಸಿಕೊಂಡು ಪರಿಶಿಷ್ಟ ಜಾತಿ/ಪಂಗಡಗಳಿಗೆ ಸೇರಿದ ಜನರಿಗೆ ನೇಮಕಾತಿಗಳಿಗಾಗಿ ಮೀಸಲಾತಿಯನ್ನು ಒದಗಿಸಲಾಗುತ್ತಿದೆ.

ನಮ್ಮ ರಾಜ್ಯದಲ್ಲಿ ಕ್ರಮವಾಗಿ ಪರಿಶಿಷ್ಟ ಜಾತಿಯವರಿಗೆ ಶೇಕಡ 15 ಮತ್ತು ಪರಿಶಿಷ್ಟ ಪಂಗಡದವರಿಗೆ ಶೇಕಡ 3ರಷ್ಟನ್ನು ನೇರ ನೇಮಕಾತಿಯ ಮೂಲಕ ಮಾಡುವ ಹುದ್ದೆಗಳಿಗೆ ಮೀಸಲಿರಿಸಲಾಗಿದೆ. ಆದರೆ ವಾಸ್ತವ ಪರಿಸ್ಥಿತಿಯಲ್ಲಿ ಈ ವರ್ಗಗಳಿಗೆ ಸಂಬಂಧಿಸಿದ ಅಭ್ಯರ್ಥಿಗಳ ಶೇಕಡವಾರು ಪ್ರಮಾಣವು. ರಾಜ್ಯ ನಾಗರೀಕ ಸೇವೆಗಳ ವರ್ಗ 1 ಮತ್ತು ವರ್ಗ 2 ರ ಒಟ್ಟು ಹುದ್ದೆಗಳಲ್ಲಿ ಶೇಕಡ 5 ಕ್ಕಿಂತಲೂ ಕಡಿಮೆ, ಹಾಗೇ ಇದೇ ಸೇವೆಗಳಲ್ಲಿ ಪರಿಶಿಷ್ಟ ಪಂಗಡದವರ ಶೇಕಡವಾರು ಪ್ರಮಾಣ ಶೇಕಡ ಒಂದರಷ್ಟಿದೆ. ಇದಕ್ಕೆ ಅನುರೂಪವಾಗಿ ವರ್ಗ 3ರ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಪ್ರಮಾಣ ಶೇಕಡ 7.5 ಮತ್ತು 0.7 ಇದೆ.

ರಾಜ್ಯ ಸರ್ಕಾರ ಕೆಲ ಸಂದರ್ಭದಲ್ಲಿ ಹಿಂದಿನದನ್ನು ಪರಿಗಣಿಸಿಕೊಂಡು, ಪರಿಶಿಷ್ಟ ಜಾತಿ/ಪಂಗಡದವರಿಗೆ ಸಮ ಪ್ರಮಾಣದ ಪ್ರತಿನಿಧಿತ್ವವನ್ನು ಅದರಲ್ಲಿಯೂ ಉನ್ನತ ಹಂತದ ಹುದ್ದೆಗಳಲ್ಲಿ ನೀಡಲು ಕೆಲ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು.

ಒಂದು ವೇಳೆ ನಾವು ರಾಜ್ಯದ ಎಲ್ಲ ಶ್ರೇಣಿಯ ನಾಗರೀಕ ಸೇವೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಸಾಕಷ್ಟು ಪ್ರಾತಿನಿಧ್ಯ ಕೊಡಲು ಕೇವಲ ನೇರ ನೇಮಕಾತಿ ವ್ಯವಸ್ಥೆಯ ಮೇಲೆ ಅವಲಂಬಿತರಾದರೆ ವಾಸ್ತವವಾಗಿ ಈ ಪ್ರಕ್ರಿಯೆಗೆ ಅನೇಕ ವರ್ಷಗಳೇ ಬೇಕಾಗಬಹುದು. ಆ ಕಾರಣದ ದೆಸೆಯಿಂದ ರಾಜ್ಯ ಸರ್ಕಾರ ಯೋಜಿಸುತ್ತಿರುವುದೆನೆಂದರೆ, ಈ ದುರ್ಬಲ ವರ್ಗಗಳಿಗೆ ಸಂಬಂಧಿಸಿದ ಜನರು ಸಾಕಷ್ಟು ಪ್ರಾತಿನಿಧ್ಯವನ್ನು ಎಷ್ಟು ಬೇಗ ಸಾಧ್ಯವೊ ಅಷ್ಟು ಶೀಘ್ರವಾಗಿ ಎಲ್ಲ ಶ್ರೇಣಿಗಳಲ್ಲಿ ನಿರ್ದಿಷ್ಟವಾಗಿ ಉನ್ನತ ಹುದ್ದೆಗಳಲ್ಲಿ ಪಡೆಯುವಂತಾಗಬೇಕು. ಹಾಗಾಗಿ ಈಗ ನಾವು ತೀರ್ಮಾನಿಸಿದ್ದೆನೆಂದರೆ, ಪರಿಶಿಷ್ಟ ಜಾತಿ ಮತ್ತು ಪಂಗಡದ ಜನರಿಗೆ ಸಂಬಂಧಿಸಿದಂತೆ ಮೀಸಲಾತಿಯನ್ನು ಬಡ್ತಿಯ ದೃಷ್ಟಿಯಿಂದಲೂ ಕೂಡ ಮಾಡಲಾಗುವುದು. ಎಲ್ಲಿ ನೇರ ನೇಮಕಾತಿಯ ಪ್ರಮಾಣವು ಶೇಕಡ 66.2/3ಕ್ಕಿಂತ ಕಡಿಮೆ ಇರುವುದೊ ಅಂತಹ ಕಡೆ ಎಲ್ಲಾ ಶ್ರೇಣಿಯ ಸೇವೆಗಳಲ್ಲಿ ಬಡ್ತಿಯ ಮೂಲಕ ಹುದ್ದೆಗಳನ್ನು ತುಂಬಲು ಮೀಸಲಾತಿಯನ್ನು ಒದಗಿಸಲಾಗುವುದು. ಇಂತಹ ಮೀಸಲಾತಿ ಬಡ್ತಿಯ ಹುದ್ದೆಗಳಿಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿಯವರಿಗೆ ಶೇಕಡ 15 ಮತ್ತು ಪರಿಶಿಷ್ಟ ಪಂಗಡದವರಿಗೆ ಶೇಕಡ 3ರ ಪ್ರಮಾಣದಷ್ಟು ಇರುತ್ತದೆ. ರಾಜ್ಯ ಸರ್ಕಾರ ಆಶಿಸುವುದೇನೆಂದರೆ ಬಡ್ತಿಯ ಹುದ್ದೆಗಳಲ್ಲಿ ಮೀಸಲಾತಿಗೆ ಅವಕಾಶ ಕಲ್ಪಿಸುವುದರ ಮೂಲಕ ರಾಜ್ಯದ ನಾಗರೀಕ ಸೇವ್ಯೆಗಳ ಎಲ್ಲಾ ಶ್ರೇಣಿಗಳಲ್ಲಿ ಅದರಲ್ಲೂ (ನಿರ್ದಿಷ್ಟವಾಗಿ) ಮುಖ್ಯವಾಗಿ ಪತ್ರಾಂಖಿತ ಶ್ರೇಣಿಯ ಹುದ್ದೆಗಳಿಗೆ ಪರಿಶಿಷ್ಟ ಜಾತಿ/ಪಂಗಡದ ಅಭ್ಯರ್ಥಿಗಳು ಹೆಚ್ಚು ಪ್ರಾತಿನಿಧ್ಯ ಹೊಂದುವಂತೆ ಕ್ರಮವನ್ನು ತೀವ್ರಗೊಳಿಸಲಾಗುವುದು.

ಹೀಗಿದ್ದರೂ, ಈ ಪ್ರಸ್ತಾಪಿತ ನಿಯಮಗಳು ಈಗಾಗಲೇ ನೀಡಿರುವ ಬಡ್ತಿಗಳಿಗೆ ಅನ್ವಯಿಸುವುದಿಲ್ಲ ಮತ್ತು ಹೊಸ ನಿಯಮಗಳು ರಚನೆಯಾಗುವವರೆಗೂ ಸಾಮಾನ್ಯ ನಡವಳಿಕೆಯಲ್ಲಿ ಮಾಡಲಾದ ಬಡ್ತಿಯ ಮೇಲೆ ಕೂಡ ಯಾವುದೇ ಪರಿಣಾಮ ಬೀರುವುದಿಲ್ಲ. ಅದೇನೆ ಆದರೂ ಎಲ್ಲ ವಿಭಾಗದ ಮುಖ್ಯಸ್ಥರಿಗೆ ಬಡ್ತಿಗಾಗಿ ಪ್ರಸ್ತಾವನೆಗಳನ್ನು ಪರಿಗಣಿಸುವ ಮೊದಲು ಪ್ರಸ್ತಾಪಿತ ತಿದ್ದುಪಡಿಗಳನ್ನು ಗಮನದಲ್ಲಿಟ್ಟಿರಬೇಕೆಂದು ಸಲಹೆ ನೀಡಲಾಗಿದೆ.

ಸರ್ಕಾರ ಎಷ್ಟು ಸಾಧ್ಯವೋ ಅಷ್ಟು ಬೇಗ ಈ ನಿಯಮಗಳನ್ನು ರೂಪಿಸಲು ಜಾಗ್ರತ ಕ್ರಮವನ್ನು ತೆಗೆದುಕೊಳ್ಳುತ್ತದೆ ಮತ್ತು ನಾವು ಯಾವ ಯಾವ ನಿರ್ಣಯಗಳನ್ನು ತೆಗೆದುಕೊಂಡಿದ್ದೇವೆಯೋ ಅದರ ಜಾರಿಗಾಗಿ ಎದುರು ನೋಡುತ್ತದೆ.

ಶ್ರೀ ಎಸ್. ಆರ್. ಬೊಮ್ಮಾಯಿ.- ನಾನು ಒಂದು ವಿಷಯದ ಬಗ್ಗೆ ಸ್ಪಷ್ಟೀಕರಣ ತಿಳಿಯಲು ಬಯಸುತ್ತೇನೆ. ಮೊದಲನೆಯ ದೃಷ್ಟಾಂತವಾಗಿ ಸಂವಿಧಾನದ ಅಧೀನದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಬೇಕಾಗಿರುವ ಸರಿಯಾದ ಪ್ರಾತಿನಿಧ್ಯತ್ವವನ್ನು ಕೊಡಲು ಸರ್ಕಾರ ತೆಗೆದುಕೊಂಡ ಪ್ರಸ್ತಾಪಿತ ನಿರ್ಣಯಕ್ಕೆ ನಾನು ಸ್ವಾಗತಿಸುತ್ತೇನೆ. ಹಾಗೇ ಇದೇ ಸಂದರ್ಭದಲ್ಲಿ ಈ ಉದ್ದೇಶಿತ ನಿಯಮಗಳು ಯಾವಾಗ ಜಾರಿಗೆ ಬರುತ್ತವೆ ಎಂದು ತಿಳಿಯ ಬಯಸುತ್ತೇನೆ. ಯಾಕೆಂದರೆ ಇಂತಹ ಭರವಸೆಯನ್ನು ಲೋಕೋಪಯೋಗಿ ಮಂತ್ರಿಗಳು ವರ್ಷದ ಹಿಂದೆಯೇ ನೇರ ಬಡ್ತಿಗೆ ಸಂಬಂಧಿಸಿದಂತೆ ನೀಡಿದ್ದರು ಮತ್ತು ಸಹಾಯಕ ಇಂಜಿನಿಯರ್ಸ್ ಹುದ್ದೆಗಳಿಗೆ ಬಡ್ತಿ ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಅವರ ಅನುಪಾತದಂತೆ ನೀಡಲು ತೀರ್ಮಾನಿಸಲಾಗಿತ್ತು. ಆದರೆ ನಂತರದಲ್ಲಿ ಅದನ್ನು ನಿರಾಕರಿಸಲಾಯಿತು. ಆದ್ದರಿಂದ ನಾನು ಸರ್ಕಾರದ ವತಿಯಿಂದ ತಿಳಿಯಬಯಸುವುದೆಂದರೆ ಎಷ್ಟು ಸಮಯದ ಒಳಗೆ ಈ ನಿಯಮಗಳನ್ನು ರಚಿಸಿ ಜಾರಿಗೊಳಿಸಲಾಗುತ್ತದೆಂದು ಎರಡನೇಯದಾಗಿ ನಾನು ಮತ್ತೊಂದು ಅಂಶದ ಬಗ್ಗೆ ತಿಳಿಯ ಬಯಸುವೆ ನಾಗರೀಕ ಸೇವೆಗಳು ಕೇವಲ ಕಂದಾಯ ಇಲಾಖೆ, ಶಿಕ್ಷಣ ಇಲಾಖೆ ಮತ್ತು ಲೋಕೋಪಯೋಗಿ ಇಲಾಖೆಗಳಿಗೆ (ಸೀಮಿತವಾಗಿಲ್ಲ) ನಿರ್ಬಂಧಿಸುವುದಿಲ್ಲ. ಇದರ ಬಗ್ಗೆ ನಾನು ವಿವರಣೆಯನ್ನು ನೀಡಬಯಸುವೆ. ಯಾಕೆಂದರೆ ಕೆಲವು ಸಮಯದಲ್ಲಿ ನಾಗರೀಕ ಸೇವೆಗಳು ಮತ್ತು ತಾಂತ್ರಿಕ ಜನರ ನಡುವೆ ಭಿನ್ನತೆಯನ್ನು ಮಾಡಬಹುದು. ಉದಾ: ವೈದ್ಯಕೀಯ ಮತ್ತು ಲೋಕೋಪಯೋಗಿ ಇಲಾಖೆಯಂತೆ. ಆದ್ದರಿಂದ ನಾನು ತಿಳಿಯ ಬಯಸುವುದೆಂದರೆ ಹಾಗೇನಾದರೂ ಈ ನಿಯಮಗಳನ್ನು ರಾಜ್ಯದ ಎಲ್ಲಾ ಸೇವೆಗಳಿಗೆ ಅನ್ವಯಿಸಲಾಗುವುದೇ ಅಥವಾ ಇಲ್ಲವೇ ಎಂದು.

ಶ್ರೀ ಜೆ. ಹೆಚ್. ಪಟೇಲ್- "ರಾಜ್ಯ ಸರ್ಕಾರ ಕೆಲವು ಸಂದರ್ಭದಲ್ಲಿ ಹಿಂದಿನ ಕ್ರಮಗಳನ್ನು ಪರಿಗಣಿಸಿಕೊಂಡು ಪರಿಶಿಷ್ಟ ಜಾತಿ ಮತ್ತು ಪಂಗಡದ ಅಭ್ಯರ್ಥಿಗಳಿಗೆ ಸಾಕಷ್ಟು ಪ್ರಾತಿನಿಧಿತ್ವವನ್ನು ಕೊಡಲು ಅದರಲ್ಲೂ ನಿರ್ದಿಷ್ಟವಾಗಿ ಉನ್ನತ ಶ್ರೇಣಿಯಲ್ಲಿ ಅದರಲ್ಲೂ ಮುಖ್ಯವಾಗಿ ಉನ್ನತ ಶ್ರೇಣಿಯ ರಾಜ್ಯ ನಾಗರೀಕ ಸೇವೆಗಳಲ್ಲಿ ಅವರಿಗೆ ಮೀಸಲಾತಿ ನೀಡಿದ ಪ್ರಮಾಣಕ್ಕಿಂತಲೂ ತುಂಬಾ ಕಡಿಮೆ ಇದ್ದರೆ. ಇದರಿಂದ ಕಂಡು ಬರುವುದೇನೆಂದರೆ ಪರಿಶಿಷ್ಟ ಜಾತಿಗಳ ಸಂಖ್ಯೆಯು ಸಾಕಷ್ಟು ಪ್ರಾತಿನಿಧ್ಯವನ್ನು ನೀಡಲು ಪರಿಗಣಿಸುತ್ತದೆ. ಆದರೆ ಒಂದು ವೇಳೆ

ನಾವು ನೇರ ನೇಮಕಾತಿಯ ಮೇಲೆ ಅವಲಂಬಿತರಾದರೆ ವಾಸ್ತವದಲ್ಲಿ ಹಲವು ವರ್ಷಗಳೇ ಬೇಕಾಗಬಹುದು. "ಎಂದಿದೆ" ಆದರೆ ಹಾಗೆಂದರೇ ಏನು ಅರ್ಥ? ಯಾಕೆ ಇದು ಇಷ್ಟು ವರ್ಷಗಳನ್ನು ತೆಗೆದುಕೊಳ್ಳುವುದು?

ಶ್ರೀ ಎಸ್. ಆರ್. ಬೊಮ್ಮಾಯಿ.- ನಾನು ಮತ್ತೊಂದು ವಿಷಯದ ಬಗ್ಗೆ ಸ್ಪಷ್ಟೀಕರಣ ತಿಳಿಯ ಬಯಸುವೆ. ಅದೇನೆಂದರೆ ಸರ್ಕಾರದಿಂದ ಮಾಡಲ್ಪಟ್ಟ ಸೂಚಿತ ನಿಯಮಗಳು ಕೇವಲ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಷ್ಟೆ ಅನ್ವಯಿಸುವುದೇ ಅಥವಾ ಹಾವಾನೂರು ಆಯೋಗದ ಅನ್ವಯ ವ್ಯಾಖ್ಯಾನಿಸಲಾದ ಹಿಂದುಳಿದ ವರ್ಗಗಳಿಗೂ ಕೂಡ ಅನ್ವಯವಾಗುವುದೇ? ಈ ಪ್ರಯೋಜನವನ್ನು ಹಿಂದುಳಿದ ವರ್ಗದ ಜನರಿಗೂ ಕೂಡ ದೊರೆಯುವಂತೆ ವಿಸ್ತರಿಸುವ ನಿಟ್ಟಿನಲ್ಲಿ ಸರ್ಕಾರ ಏನಾದರೂ ಯೋಚಿಸುತ್ತಿದೇಯೇ ಎಂಬುದನ್ನು ತಿಳಿಯಬಹುದೇ?

ಶ್ರೀ ಸಿ. ಎಂ. ಆರ್ಮುಗಂ.- ಮಾನ್ಯ ಮುಖ್ಯಮಂತ್ರಿಗಳು ಮಾಡಿದ ಹೇಳಿಕೆಯನ್ನು ನಾನು ಸ್ವಾಗತಿಸುವೆ. ನಾನು ಹೇಳುತ್ತೇನೆ ಬಡ್ತಿಯಲ್ಲಿ ಮೀಸಲಾತಿಯನ್ನು ಕಲ್ಪಿಸುವ ನಿರ್ಣಯ ತೆಗೆದುಕೊಂಡಿದ್ದರಲ್ಲಿ ನಮ್ಮ ರಾಜ್ಯ ಸರ್ಕಾರವೇ ಮೊದಲನೆಯದು ಎಂದು. ನಮ್ಮ ಸಂವಿಧಾನವು 29 ವರ್ಷಗಳ ಹಿಂದೆ ಜಾರಿಗೆ ಬಂದಿತು. ಆದರೆ ಇಡೀ ದೇಶದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಪ್ರಾತಿನಿಧ್ಯವು ಐ. ಎ. ಎಸ್. ನಲ್ಲಿ ಕೇವಲ ಶೇಕಡ 1.5, ಐ.ಪಿ.ಎಸ್.ನಲ್ಲಿ 2.5, ವರ್ಗ-1ರ ಹುದ್ದೆಗಳಲ್ಲಿ ಕೇವಲ ಶೇಕಡ 3, ವರ್ಗ3ರಲ್ಲಿ ಶೇಕಡ 4, ವರ್ಗ-4ರಲ್ಲಿ ಶೇಕಡ 7ರಷ್ಟಿದೆ. 29 ವರ್ಷಗಳು ಕಳೆದರೂ ಈ ವರ್ಗದ ಜನರು ಶೇಕಡ 18ರಮಟ್ಟಕ್ಕೆ ಬರಲಾಗಿಲ್ಲ. ವರ್ಗ-4ರ ಹುದ್ದೆಗಳಲ್ಲೂ ಇವರಿಗೆ ಸಾಕಷ್ಟು ಪ್ರಾತಿನಿಧ್ಯ ಇಲ್ಲ. ಟಿ.ಬಿ.ಎಸ್.(ಟಿ.ಬಿ.ಎಸ್. ಪ್ರವಾಸಿ ತಂಗುದಾಣ)ನಲ್ಲಿ ಅಡುಗೆ ಮಾಡುವ ಹುದ್ದೆಗಳನ್ನು ಕೂಡ ಪರಿಶಿಷ್ಟ ಜಾತಿಯವರಿಗೆ ನೀಡಲಾಗಿಲ್ಲ. ಸಫಾಯಿ ಕರ್ಮಚಾರಿ (ಸ್ವೀಪರ್) ಹುದ್ದೆಗಳನ್ನು ಹೊರತುಪಡಿಸಿ ಇತರ ಯಾವುದೇ ಹುದ್ದೆಗಳನ್ನು ಸಾಕಷ್ಟು ಪ್ರಮಾಣದಲ್ಲಿ ನೀಡಲಾಗಿಲ್ಲ. ಯಾವಾಗ ಶ್ರೀ ಜಗಜೀವನ್‌ರಾಂ ಕೇಂದ್ರ ರೈಲ್ವೆಖಾತೆ ಮಂತ್ರಿಯಾಗಿದ್ದರೂ ಆಗ ಅವರು ಬಡ್ತಿಯಲ್ಲಿ ಮೀಸಲಾತಿಯನ್ನು ನೀಡಬೇಕು ಎಂಬ ಅಂಶವನ್ನು ಮಾಡಿದರು. ಆದರೆ ಕೆಲವು ಜನರು ಈ ವಿಷಯವನ್ನು ಹೈಕೋರ್ಟ್ ಮತ್ತು ಸುಪ್ರೀಂ ಕೋರ್ಟ್‌ಗೂ ತೆಗೆದುಕೊಂಡು ಹೋದರು. ಸುಪ್ರೀಂಕೋರ್ಟ್‌ಬಡ್ತಿಯಲ್ಲಿಯೂ ಮೀಸಲಾತಿ ನೀಡಬೇಕು ಎಂದು ತೀರ್ಮಾನಿಸಿತು. ಇಲ್ಲಿ ನಾನು 16(4) ಉಪವಿಧಿಯನ್ನು ಉಲ್ಲೇಖಿಸುವೆ.

"ರಾಜ್ಯದ ಅಧೀನದಲ್ಲಿ ಬರುವ ಎಲ್ಲಾ ಸೇವೆಗಳಲ್ಲಿ ಹಿಂದುಳಿದ ವರ್ಗದವರಿಗೆ ಸರಿಯಾದ ಪ್ರಾತಿನಿಧ್ಯ ಇಲ್ಲ ಎಂದು ರಾಜ್ಯಕ್ಕೆ ಅನಿಸಿದರೆ, ಹಿಂದುಳಿದ ವರ್ಗದ ಪ್ರಜೆಗಳ ಪರವಾಗಿ ನೇಮಕಾತಿ ಅಥವಾ ಹುದ್ದೆಗಳನ್ನು ತುಂಬುವ ಸಲುವಾಗಿ ಮೀಸಲಾತಿ ಕಲ್ಪಿಸಲು ಮಾಡುವ ಯಾವುದೇ ಅವಕಾಶದಿಂದ ರಾಜ್ಯದಲ್ಲಿ ಈ ವಿಧಿಯು ನಿರ್ಬಂಧಿಸುವುದಿಲ್ಲ. "ಆದ್ದರಿಂದ ಸಂವಿಧಾನಾತ್ಮಕ ಅವಕಾಶದ ಅನುಸಾರ ರಾಜ್ಯ ಸರ್ಕಾರ ಬಡ್ತಿಯಲ್ಲಿ ಮೀಸಲಾತಿ ಕಲ್ಪಿಸಲು ಮುಂದೆ ಬರಬೇಕು.

ಕಳೆದ 29 ವರ್ಷಗಳಲ್ಲಿ ನಾವು ಶೇಕಡ 18ರ ಪ್ರಮಾಣದಷ್ಟು ಮೀಸಲಾತಿ ತಲುಪಲು ಅಸಾಧ್ಯವಾಗಿರುವ ದೃಷ್ಟಿಯಿಂದಾಗಿ ನಾನು ಈ ಹೇಳಿಕೆಯನ್ನು ಸ್ವಾಗತಿಸುತ್ತೇನೆ. ನೇಮಕಾತಿಯ ವಿಷಯದಲ್ಲಿ ಕೆಲವು ಸಲ ಇಲಾಖೆಗಳ ಮುಖ್ಯಸ್ಥರು ಪರಿಶಿಷ್ಟ ಜಾತಿಯೇತರರು ಇರುವುದರಿಂದ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವುದಿಲ್ಲ. ದುರುದ್ದೇಶದ ಮುಖ್ಯ ಕಾರ್ಯದರ್ಶಿ ರಾಜ್ಯವನ್ನು 10 ವರ್ಷಗಳವರೆಗೆ ಆಳಿದರು. ಇವರು ಈ ವರ್ಗದ ಜನರಿಗೆ ಬಡ್ತಿ ನೀಡಲು ಇಷ್ಟ ಪಡಲಿಲ್ಲ. (ಪ್ರಯತ್ನಿಸಲೇ ಇಲ್ಲ) ಒಂದು ವೇಳೆ ನಾವು ಈ ವಿಷಯವನ್ನು ಇಲಾಖೆಗಳ ಮುಖ್ಯಸ್ಥರಿಗೆ ಬಿಟ್ಟರೇ ಅವರು ಅದರಲ್ಲಿ ರಾಜಕೀಯ ಮಾಡಬಹುದು. ಅವರಲ್ಲಿ ಕೆಲವರಿಗೆ ಪರಿಶಿಷ್ಟ ಜಾತಿಯವರೆಂದರೆ ಕಟುಕರ ಮನೆಗಳಂತೆ ಇಲ್ಲಿ ಹಲವು ಕುರಿಗಳನ್ನು ಮತ್ತು ಪ್ರಾಣಿಗಳನ್ನು ಕೊಲೆ ಮಾಡಿದರೂ, ಯಾರೂ ಪ್ರಾಣಿಗಳ ಬಗ್ಗೆ ಪ್ರಶ್ನಿಸುವುದಿಲ್ಲ. ಹಾಗಿದೆ ಈ ಜನರ ಪರಿಸ್ಥಿತಿ. ಹಲವು ಪರಿಶಿಷ್ಟ ಜಾತಿಗಳ ಆಯೋಗಗಳು ಹಲವು ವರದಿಗಳನ್ನು ತಯಾರಿಸಿದ್ದರೂ ಅವುಗಳನ್ನು ಸಂಸತ್ತಿನ ಸದನದ ಮುಂದೆ ಚರ್ಚೆಗೆ ಇಡಲಿಲ್ಲ. ಹಾಗೇ ಹಿಂದಿನ ಸರ್ಕಾರಗಳಾಗಲೀ ಅಥವಾ ಸಮಿತಿಗಳಾಗಲೀ ಈ ವಿಷಯಗಳನ್ನು ಅಧಿಕಾರಬದ್ಧವಾಗಿ ನೋಡುವ ಪ್ರಯತ್ನವನ್ನು ಯಾವ ಸಂದರ್ಭದಲ್ಲಿಯೂ ಮಾಡಲಿಲ್ಲ.

ನಾನು ಶ್ರೀ ದೇವರಾಜ ಅರಸ್‌ರಿಗೆ ಅಭಾರಿಯಾಗಿದ್ದೇನೆ. ಯಾಕೆಂದರೆ ಮುಖ್ಯಮಂತ್ರಿಗಳು ನೇಮಕಾತಿಗಳು ಮತ್ತು ಬಡ್ತಿಯ ವಿಷಯಗಳೆರಡರಲ್ಲೂ ಏಕಕಾಲದಲ್ಲಿ ಮೀಸಲಾತಿಯನ್ನು ಒದಗಿಸಲು ಮುಂದೆ ಬಂದಿರುವುದರಿಂದ ನಮ್ಮ ಅಧಿಕಾರಿಗಳು ಈ ಅಂಶವನ್ನು ಈ ಹಿಂದೆ ಯಾವತ್ತೂ ಬಿಡುಗಡೆ ಮಾಡಲಿಲ್ಲ ಮತ್ತು ಸರ್ಕಾರಕ್ಕೂ ಸರಿಯಾದ ರೀತಿಯಲ್ಲಿ ಸಲಹೆ ನೀಡಲಿಲ್ಲ. ನಾನು ಈ ಸರ್ಕಾರದೊಂದಿಗೆ ತೃಪ್ತಿ ವ್ಯಕ್ತಪಡಿಸುವೆ. ಈ ವರ್ಗದ ಜನರಿಗೆ ಮೀಸಲಾತಿಯ ಅವಕಾಶವನ್ನು ಕಲ್ಪಿಸುತ್ತಿರುವುದಕ್ಕಾಗಿ ನಾನು ಸರ್ಕಾರಕ್ಕೆ ಅಭಾರಿಯಾಗಿದ್ದೇನೆ. ನನಗೆ ನಂಬಿಕೆ ಇದೆ. ಈ ಕ್ರಮವನ್ನು ಅತ್ಯಂತ ಪ್ರಾಮಾಣಿಕವಾಗಿ ಅನುಸರಿಸಲಾಗುವುದು ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದವರು ತಮ್ಮ ಪಾಲಿನ ಅವಕಾಶವನ್ನು ರಾಜ್ಯದ ಆಡಳಿತದಲ್ಲಿ ಪಡೆದುಕೊಳ್ಳುತ್ತಾರೆಂದು.

ಶ್ರೀ ಟಿ. ಆರ್. ಶಾಮಣ್ಣ.– ನಾನು ಒಂದೇ ಒಂದು ಸ್ಪಷ್ಟೀಕರಣ ಕೇಳುತ್ತೇನೆ. ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್‌ನಲ್ಲಿ ಸರಿಯಾದಂಥ ಕ್ವಾಲಿಫೈಡ್ ಹ್ಯಾಂಡ್ಸ್ ಸಿಕ್ಕುತ್ತಾ ಇಲ್ಲ ಎಂದು ಪ್ರಮೋಷನ್ಸ್‌ಗೆ ತೊಂದರೆ ಪಡುತ್ತಾ ಇರತಕ್ಕಂಥಾದಿದೆ. ಈ ರೀತಿ ತೊಂದರೆ ಬಾರದ ಹಾಗೆ ಅವರಿಗೆ ಅರ್ಹತೆ ಪಡೆಯುವುದಕ್ಕೆ ತಕ್ಕ ಕಾರ್ಯಕ್ರಮ ತೆಗೆದುಕೊಂಡು ಅರ್ಹತೆ ಬರುವ ತನಕ ಟೆಂಪೋರರಿ ಜಾಗಗಳಲ್ಲಿ ಅವರನ್ನು ಇಟ್ಟು ನಂತರ ಅವರು ಅರ್ಹತೆ ಪಡೆದುಕೊಳ್ಳುವುದಕ್ಕೆ ಕಾರ್ಯಕ್ರಮ ತೆಗೆದುಕೊಳ್ಳುತ್ತಿರಾ ?

ಶ್ರೀ ಡಿ. ದೇವರಾಜ್ ಅರಸ್.– ಸ್ವಾಮಿ ನಮ್ಮ ಮಾನ್ಯ ಸದಸ್ಯರು ಕೆಲವು ವಿವರಣೆಗಳನ್ನು ಕೇಳಿದ್ದಾರೆ. ಜೊತೆಗೆ ನಮ್ಮ ಆರ್ಯ್ಮಗರವರು ಮತ್ತು ಇನ್ನೂ ಒಬ್ಬಿಬ್ಬ ಸದಸ್ಯರು ಸರ್ಕಾರ ಮಾಡಿರುವ ಕೆಲಸವನ್ನು ಮೆಚ್ಚಿದ್ದಾರೆ. ಅದಕ್ಕಾಗಿ ಅವರೆಲ್ಲರಿಗೂ ಅಭಿನಂದನೆಗಳು. ಈ ಡೈರೆಕ್ಟ್ ರೆಕ್ರೂಟ್‌ಮೆಂಟ್ ಎಂದು ಹೇಳುವಾಗ ಶ್ರೀಮಾನ್ ಜೆ. ಹೆಚ್. ಪಟೇಲರು "If we have to ensure adequate representation" ಎಂದರೆ ಇದರ ಅರ್ಥ ಏನು ಎಂದು ಕೇಳಿದ್ದಾರೆ. ಇದರ

ಅರ್ಥ ಇಷ್ಟು ಈ ಡೈರೆಕ್ಟ್ ರೆಕ್ರೂಟ್‌ಮೆಂಟಿಗೆ ಕಾನೂನಿನಲ್ಲಿ ಇಷ್ಟು ಪರ್ಸೆಂಟ್ ರೆಪ್ರೆಸೆಂಟೇಷನ್ ಎಂದು ಮಾಡಿದ್ದೇವೆ, ಮಾಡಿದ್ದರೂ ಕೂಡ ಈ ರೆಕ್ರೂಟ್‌ಮೆಂಟ್ ಮಾಡುವಾಗ ಕೆಲವು ಸಂದರ್ಭದಲ್ಲಿ ಕ್ಲಾಸ್-3, ಕ್ಲಾಸ್-4 ಪೋಸ್ಟ್‌ಗಳು ಏನಿವೆ ಅದರಲ್ಲಿ ರೆಕ್ರೂಟ್‌ಮೆಂಟ್ ಕಾಲಕ್ಕೆ ನಡೆಯದೆ ಆಯಾಯ ಇಲಾಖೆಗೆ ಸಂಬಂಧಪಟ್ಟ ಅಧಿಕಾರಿಗಳು ತಮ್ಮ ಇಚ್ಛೆಗೆ ಯಾವುದು ಸರಿ ಎಂದು ಕಾಣುತ್ತೋ ಅಂಥವರನ್ನು ರೆಕ್ರೂಟ್‌ಮೆಂಟ್ ಮಾಡಿಕೊಂಡುಬಿಟ್ಟು ಕಾನೂನು ಅಪ್ಲಿಕೇಷನ್ ಮರೆತುಬಿಟ್ಟು ಮಾಡಿ ಬಿಟ್ಟಿದ್ದಾರೆ. ಹೀಗೆ 7-8 ವರ್ಷಗಳಿಂದಲೂ ಉಳಿದು ಬಿಟ್ಟಿದೆ. ಒಂದೊಂದು ಸಲ 20 ಸಹಸ್ರ, 30 ಸಹಸ್ರ ಜನರು ಹೀಗೆ ಲೋಕಲ್ ಕ್ಯಾಂಡಿಡೇಟ್ಸ್ ಆಗಿ ಬಂದು ಬಿಟ್ಟಿರುತ್ತಾರೆ. ಇದು ಒಂದಲ್ಲ ನಾಲ್ಕಾವಾರ್ತಿ ನಡೆದಿದೆ. ಮಾನ್ಯ ಸಭೆಗೆ ಗೊತ್ತಿರುವ ಹಾಗೆ ಮಾನ್ಯ ಶೀರ್ನಾಳಿ ಚಂದ್ರಶೇಖರವರು ಹೇಳುತ್ತಾ ಇದ್ದರು. ಲೋಕಲ್ ಕ್ಯಾಂಡಿಡೇಟ್ಸ್ 7-8 ವರ್ಷಗಳಿಂದ ಟೆಂಪೋರರಿ ಸರ್ವೀಸನ್ನು ಮಾಡಿಕೊಂಡು ಬಂದಿದ್ದಾರೆ, ಅವರನ್ನೆಲ್ಲಾ ಓಡಿಸಿ ಬಿಟ್ಟರೆ, ಅವರಲ್ಲಿ ವಯಸ್ಸಾಗಿರತಕ್ಕವರಿದ್ದಾರೆ. ಅವರಿಗೆ ಬೇರೆ ಎಲ್ಲೂ ಜಾಗ ಸಿಕ್ಕುವುದಿಲ್ಲ ಎಂದು ಹೇಳುತ್ತಿದ್ದರು. ಈ ವಿಷಯದ ಬಗ್ಗೆ ಇದೇ ಮಾನ್ಯ ಸಭೆಯಲ್ಲಿ ಚರ್ಚೆಯಾಗಿ ಹೋಗಲಿ ಎಲ್ಲರನ್ನು ಖಾಯಂ ಮಾಡಿಬಿಡಿ ಎಂದು ಹೇಳಿದರು. ಯಾವಾಗ ರೆಕ್ರೂಟ್‌ಮೆಂಟ್ ಆಗುವುದಿಲ್ಲ ಆಗ ಇಂತಹ ಸಮಸ್ಯೆಗಳು ಉದ್ಭವಿಸಿ ಮಾನವೀಯತೆಯಿಂದ ಹೀಗೆ ಎಲ್ಲರನ್ನು ಖಾಯಂಗೊಳಿಸಬೇಕು ಎಂದು ಹೇಳುವುದರಿಂದ ಸಾವಿರಾರು ಜನರು ಕೆಲಸಕ್ಕೆ ಬಂದು ಬಿಟ್ಟಿರುತ್ತಾರೆ. ಹೀಗೆ ಬರತಕ್ಕ ಜನರಿಗೆ ಪರ್ಸಂಟೇಜ್ ಪ್ರಕಾರ ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಟ್ರೈಬ್ಸ್‌ಗೆ ಕೊಟ್ಟಿರುವುದಿಲ್ಲ. ಹೀಗಾಗಿ ಬೇರೆಯವರ ಪರ್ಸೆಂಟೇಜ್ ಜಾಸ್ತಿಯಾಯಿತು. ಹೀಗೆ ಒಂದೊಂದು ಕಡೆ ಪರ್ಪಸ್‌ಫುಲ್ ಆಗಿ ಮಾಡಿರುವುದು ಇದೆ. ಕೆಲವು ಸಂದರ್ಭಗಳಲ್ಲಿ ನಿಜವಾಗಿಯೇ ಕೆಲವು ಕ್ಯಾಟಗರೀಸ್‌ಗೆ ಎಲಿಜಬಿಲಿಟಿ ಇಲ್ಲದೇ ಇರುವುದೂ ಇದೆ. ಹೀಗೆಲ್ಲಾ ಆಗಿ ಡೈರೆಕ್ಟ್ ರೆಕ್ರೂಟ್‌ಮೆಂಟ್ 15 ಪರ್ಸೆಂಟ್, 3 ಪರ್ಸೆಂಟ್ ರಿಸರ್ವೇಷನ್ ಇದ್ದರೂ ಸಹ ಆಗಿಲ್ಲ ಎನ್ನುವುದು ಅಂಕಿ ಅಂಶಗಳಿಂದ ಗೊತ್ತಾಗಿದೆ. ಅದನ್ನು ನಿವಾರಣೆ ಮಾಡುವುದಕ್ಕೆ ಇತ್ತೀಚಿನ ವರ್ಷಗಳಲ್ಲಿ ಅನೇಕ ಪ್ರಯತ್ನಗಳನ್ನು ಮಾಡುತ್ತಾ ಇದ್ದೇವೆ. ಕೆಲವು ಕ್ಯಾಟಗರಿಗಳಲ್ಲಿ 13,14,15 ಪರ್ಸೆಂಟ್‌ಗಿಂತ ಕೆಳಗಡೆ ಬಂದಿದೆ. ಈ ವಿವರಗಳು ಈಗ ನನ್ನ ಮುಂದೆ ಇಲ್ಲ. ಮುಂದೆ ಯಾವಾಗಲಾದರೂ ಇದರ ಬಗ್ಗೆ ತಿಳಿಸುತ್ತೇನೆ. ಡೈರೆಕ್ಟ್ ರೆಕ್ರೂಟ್‌ಮೆಂಟಿಗೆ 15 ಪರ್ಸೆಂಟ್ ಬರುವವರಿಗೆ ಕಾಯುವುದಕ್ಕೆ ಬಹಳ ದಿನಗಳು ಆಗುತ್ತವೆ. ಪ್ರಮೋಷನ್ಸ್ ಡೈರೆಕ್ಟ್ ರೆಕ್ರೂಟ್‌ಮೆಂಟ್ ಎಂದು ಎರಡು ಇರುತ್ತದೆ. ಪ್ರಮೋಷನ್‌ನಲ್ಲೂ ಕೂಡ ಈ ಪರ್ಸೆಂಟೇಜ್‌ನಲ್ಲಿ ಇಷ್ಟು ರಿಸರ್ವೇಷನ್ ಎಂದು ಮಾಡೋಣ ಎನ್ನುವುದು ಈಗಿನ ಅಭಿಪ್ರಾಯ ಅದನ್ನೇ ನಾನು ಹೇಳಿರತಕ್ಕಂಥಾದ್ದು. ಡೈರೆಕ್ಟ್ ರೆಕ್ರೂಟ್‌ಮೆಂಟ್‌ನಲ್ಲಿರತಕ್ಕಂಥ ಲೋಪವನ್ನು ಸರಿಪಡಿಸಬೇಕು ಎಂದರೆ ಬಹಳ ಕಾಲ ಹಿಡಿಯುತ್ತದೆ. ಆದುದರಿಂದ ಪ್ರಮೋಷನ್‌ನಲ್ಲಿ ಮಾಡುವುದು ಸೂಕ್ತ ಎಂದು ನಾನು ಹೇಳಿದೆ.

ಶ್ರೀ ಜೆ. ಹೆಚ್. ಪಟೇಲ್: ಇದನ್ನು ತಾತ್ಕಾಲಿಕವಾಗಿ ಮಾಡುತ್ತೀರೋ ಅಥವಾ ದೀರ್ಘಕಾಲಕ್ಕೆ ಮಾಡುತ್ತೀರೋ?

ಶ್ರೀ ಡಿ. ದೇವರಾಜ್‌ಅರಸ್. - ನಾವು ಮಾಡಿ ಕಾನೂನಿನಂತೆ ಹೋದರೆ ಶಾಶ್ವತವಾಗಿ ಇರಬೇಕಾಗುತ್ತದೆ. ಯಾರಿಗೂ ಕಿತ್ತು ಹಾಕುವ ಧೈರ್ಯ ಬರುವುದಿಲ್ಲ. ಇದು ತಾತ್ಕಾಲಿಕವಾದದ್ದಲ್ಲ. ಒಂದೊಮ್ಮೆ ನಾವು ನಿರ್ಣಯ ತೆಗೆದುಕೊಳ್ಳುತ್ತೇವೆ. ಅದು ಮುಂದುವರೆಯುತ್ತಿರಬೇಕು. ಹಾಗೇ ಆ ನಿಯಮಗಳು ಮುಂದುವರಿಯಬೇಕು.

ಶ್ರೀ ಕೆ. ಪುಟ್ಟಸ್ವಾಮಿ.- ಯಾವ ಸಮಯದವರೆಗೆ?

ಶ್ರೀ ಡಿ. ದೇವರಾಜ್‌ಅರಸ್.- ಶಾಶ್ವತವಾಗಿ ಇದು ನಿಲ್ಲಬೇಕು. ಶೇಕಡ 15ರ ಪ್ರಮಾಣವನ್ನು ತಲುಪಲು ಬಹಳ ಕಾಲವೇ ಬೇಕಾಗುವುದು. 50:50 ಪ್ರಮೋಷನ್‌ನಲ್ಲಿ ಡೈರೆಕ್ಟ್ ರೆಕ್ರೂಟ್‌ಮೆಂಟ್‌ನಲ್ಲಿದ್ದಾಗ ಅಲ್ಲೂ ಇಲ್ಲೂ ಇದ್ದೇ ಇರುತ್ತದೆ. 50ರಲ್ಲಿ 15 ಆಗೇ ಆಗುತ್ತದೆ.

ಈ 15 ಶೇಕಡವಾರು ಪ್ರಮಾಣವನ್ನು ತಲುಪುವವರೆಗೂ ತುಂಬಾ ಹೋರಾಟ ಮಾಡಬೇಕಾಗುತ್ತದೆ. ಇದು ನಿಧಾನ ಆಯಿತು. ಇದನ್ನು ಎಷ್ಟೋ ವರ್ಷಗಳ ಹಿಂದೆಯೇ ಮಾಡಬೇಕಾಗಿತ್ತು. ಹಿಂದೆ ಜಗಜೀವನ ರಾಂರವರು ರೈಲ್ವೆ ಮಿನಿಸ್ಟರಾಗಿದ್ದಾಗ ಕಾನ್‌ಸ್ಟಿ ಟ್ಯೂಷನ್ ಪ್ರಕಾರ ಪ್ರಮೋಷನ್ ಕೊಡುವುದಕ್ಕೆ ಸಾಕ್ಷ್ಯವೆನ್ನುವ ಬಗ್ಗೆ ಕೋರ್ಟು ಕಛೇರಿಗಳಲ್ಲಿ ವಾದ ವಿವಾದ ನಡೆದು ಸುಪ್ರೀಂ ಕೋರ್ಟ್‌ನಲ್ಲಿ ಕಾನ್‌ಸ್ಟಿಟೂಷನ್ ಪ್ರಕಾರ ಪ್ರಮೋಷನ್ಸ್ ಕೊಡುವುದಕ್ಕೆ ಅಧಿಕಾರವಿದೆ ಎಂದು ತೀರ್ಮಾನವಾಯಿತು ಇದನ್ನು ಎಲ್ಲಾ ಕಡೆ ಜಾರಿಗೆ ತರುತ್ತಿದ್ದಾರೆ. ನಾವೂ ಕೂಡ ಅದೇ ಕಾರಣದಿಂದ ಜಾರಿಗೆ ತರೋಣ ಎಂದು ಹೇಳಿರತಕ್ಕಂಥಾದ್ದು. ಮಾನ್ಯ ವಿರೋಧ ಪಕ್ಷದ ನಾಯಕರು ರೂಲ್ಸ್ ಫ್ರೇಂ ಮಾಡುವ ಬಗ್ಗೆ ಯಾವಾಗ ಮಾಡುತ್ತೀರಿ ಎಂದು ಕೇಳಿದ್ದಾರೆ. ಜೂನ್ ತಿಂಗಳಲ್ಲಿ ಅಥವಾ ಜೂನ್ ತಿಂಗಳ ಒಳಗಡೆ ರೂಲ್ಸ್ ಮಾಡಿ ಮುಗಿಸಬೇಕು ಎಂದು ಚೀಫ್ ಸೆಕ್ರೆಟರಿಯವರಿಗೆ ಮತ್ತು ಅಧಿಕಾರಗಳಿಗೆ ಹೇಳಿದ್ದೇನೆ. ಇದನ್ನು ಆದಷ್ಟು ಬೇಗ ಮಾಡಿಸುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡಿಸುತ್ತೇನೆ. ಇದರಿಂದ ಬ್ಯಾಕ್‌ವರ್ಡ್ ಕ್ಲಾಸ್‌ಗೆ ಅನ್ಯಾಯವಾಗಿದೆ ಎನ್ನುವ ಮಾತನ್ನು ಮಾನ್ಯ ಸದಸ್ಯರು ಹೇಳಿದರು. ಬ್ಯಾಕ್‌ವರ್ಡ್‌ಕ್ಲಾಸ್‌ಗೆ ಹಾವನೂರು ವರದಿಯ ಪ್ರಕಾರ ಅನ್ವಯಿಸುತ್ತದೆ ಎಂದು ನನ್ನ ಸ್ಟೇಟ್‌ಮೆಂಟ್‌ನಲ್ಲಿ ಸ್ಪಷ್ಟವಾಗಿದೆ. ಈಗ ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ಗೆ ಮಾತ್ರ ಇದೆ. ಮಾನ್ಯ ಸಭೆ ಬ್ಯಾಕ್‌ವರ್ಡ್ ಕ್ಲಾಸ್‌ಗೂ ಇದನ್ನು ಮಾಡಬೇಕು ಎಂದು ಅಭಿಪ್ರಾಯ ಪಟ್ಟರೆ ಇದನ್ನು ಸರ್ಕಾರ ಬಹಳ ಸಹಾನುಭೂತಿಯಿಂದ ಯೋಚನೆ ಮಾಡುತ್ತದೆ. ಇದು ಕಾನ್‌ಸ್ಟಿಟ್ಯೂಷನ್‌ಗೆ ವಿರುದ್ಧವಿಲ್ಲ ಎಂದು ನನ್ನ ತಿಳುವಳಿಕೆಗೆ ಬಂದಿದೆ ನೋಡೋಣ.

ಶ್ರೀ ಉಮಾಕಾಂತ ಬೋರ್ಕರ್.- ಮಾನ್ಯ ಮುಖ್ಯಮಂತ್ರಿಗಳು ತೆಗೆದುಕೊಂಡಿರುವ ನಿರ್ಣಯಕ್ಕಾಗಿ ನಾನು ಅವರನ್ನು ಹೃದಯಪೂರ್ವಕವಾಗಿ ಅಭಿನಂದಿಸುತ್ತೇನೆ. ಆದರೆ ಬಡ್ತಿನೀಡುವಾಗ ಸೀನಿಯಾರಿಟಿ ಆಧಾರದ ಮೇಲೆ ಕೊಡಲಾಗುವುದೋ ಅಥವಾ ದಕ್ಷತೆ ಮೇಲೆ ಕೊಡಲಾಗುವುದೋ ಅಥವಾ ಈ ಎರಡು ಅನ್ವಯಿಸಿ ಕೊಡಲಾಗುವುದೋ?

ಒಬ್ಬ ಸದಸ್ಯರು.- ಕ್ಲಾಸ್ 1 ಮತ್ತು ಕ್ಲಾಸ್ 2 ಹುದ್ದೆಗಳಿಗೆ ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ದೊರೆಯುವ ಶೇಕಡವಾರು ಸಂಖ್ಯೆ ಕಡಿಮೆ ಇದೆ. ಹಾಗಿರುವಾಗ ಕ್ಲಾಸ್ 1 ಮತ್ತು ಕ್ಲಾಸ್ 2 ಹುದ್ದೆಗಳಿಗೆ ಪರಿಶಿಷ್ಟ ವರ್ಗದವರಿಗೆ ಬಡ್ತಿ ನೀಡುವಾಗ ಯಾವ ರೀತಿ ಇದನ್ನು ಪರಿಹರಿಸುತ್ತೀರಿ?

ಶ್ರೀ ಕೆ. ಹೆಚ್. ಹನುಮೇಗೌಡ.- ಸಭೆ ಒಪ್ಪಿಗೆ ಕೊಡುವುದಾದರೆ, ಪರಿಶಿಷ್ಟ ವರ್ಗದವರಿಗೆ ಹೇಗೆ ಬಡ್ತಿಯಲ್ಲಿ ಮೀಸಲಿಡಲಾಗುವುದೋ ಹಾಗೆಯೇ ಹಾವನೂರು ವರದಿಯಲ್ಲಿ ಹಿಂದುಳಿದ ವರ್ಗದವರೆಂದು ಗೊತ್ತು ಮಾಡಲ್ಪಟ್ಟಿರುವವರಿಗೆ ಕೊಡುವುದರಲ್ಲಿ ನನ್ನದೇನೂ ಅಭ್ಯಂತರವಿಲ್ಲವೆಂದು ಹೇಳಿದರು ಹಿಂದುಳಿದ ಜನತೆಯ ಪರವಾಗಿ ನಾನು ಅವರನ್ನು ಇದಕ್ಕಾಗಿ ಅಭಿನಂದಿಸುತ್ತೇನೆ. ಬಹಳ ಕಷ್ಟಪಟ್ಟು ಓದಿ ಹೇಳುವವರು ಕೇಳುವವರು ಯಾರೂ ಇಲ್ಲದೇ, ರಾಜಕೀಯ ಪ್ರಭಾವವೂ ಇರದೆ ಎಷ್ಟೋ ಮಂದಿಯನ್ನು ಇಂದು ಇಗ್ನೋರ್ ಮಾಡಲಾಗಿದೆ. ಅಂತಹವರನ್ನು ಗುರುತಿಸಿ ಅವರಿಗೆ ಸಹಾಯ ಮಾಡುತ್ತೇವೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿರುವುದು, ಅವರಿಗೆ ದೈವ ಸಹಾಯ ಮಾಡಿದಂತಾಗಿದೆ ಎಂದು ಭಾವಿಸುತ್ತೇನೆ. ಆದುದರಿಂದ ಪರಿಶಿಷ್ಟ ವರ್ಗದವರಿಗೆ ಬಡ್ತಿಯಲ್ಲಿ ಹುದ್ದೆಗಳನ್ನು ಮೀಸಲಿಡುವಾಗ, ಅವರಂತೆಯೇ, ಹಾವನೂರು ವರದಿಯಲ್ಲಿ ಗುರುತಿಸಲ್ಪಟ್ಟಿರುವ ಹಿಂದುಳಿದ ವರ್ಗದವರಿಗೂ ಹುದ್ದೆಗಳನ್ನು ಮೀಸಲಾಗಿಡಬೇಕೆಂದು ಈ ಸಭೆಯ ಪರವಾಗಿ ಹೇಳುತ್ತೇನೆ.

ಶ್ರೀ ಸಿ. ಎ. ಚಂದ್ರೇಗೌಡ.- ಮಾನ್ಯ ಹನುಮೇಗೌಡರು ಸೂಚಿಸುವ ಅಭಿಪ್ರಾಯವನ್ನು ನಾವೆಲ್ಲರೂ ಒಪ್ಪುತ್ತೇವೆ.

ಶ್ರೀ. ಡಿ. ದೇವರಾಜ ಅರಸ್.- ಬಡ್ತಿಗಳನ್ನು ನೀಡುವ ಸಂದರ್ಭದಲ್ಲಿ ದಕ್ಷತೆ ಮತ್ತು ಸೀನಿಯಾರಿಟಿಯನ್ನು ಆಧಾರವನ್ನಾಗಿಟ್ಟುಕೊಂಡು ನೀಡುವಿರಾ ಎಂದು ಸದಸ್ಯರು ಕೇಳಿದ್ದಾರೆ. ಪರಿಶಿಷ್ಟ ವರ್ಗದವರಿಗೆ ಬಡ್ತಿ ಹುದ್ದೆಗಳನ್ನು ಮೀಸಲಿಡಬೇಕೆಂದು ಹೇಳುವಾಗ ಸೀನಿಯಾರಿಟಿಯನ್ನು ಬಿಟ್ಟೇ ಮಾಡಬೇಕಾಗುತ್ತದೆ.

ಶ್ರೀ ಉಮಾಕಾಂತ್ ಬೋರ್ಕರ್.- ನಾನು ಹೇಳಿದ್ದು, ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ಮಾತ್ರ ಅನ್ವಯಿಸುತ್ತದೆ. ಅವರಲ್ಲೇ ಬಹಳ ಮಂದಿ ಇದ್ದಾರೆ. ಆಗ ಯಾವ ಆಧಾರವನ್ನಿಟ್ಟುಕೊಂಡು ಮಾಡುವಿರಿ ಎನ್ನುವುದು ನನ್ನ ಪ್ರಶ್ನೆ.

ಶ್ರೀ ಡಿ. ದೇವರಾಜ ಅರಸ್.- ಅದಕ್ಕೆಲ್ಲಾ ನಿಬಂಧನೆಗಳನ್ನು ರಚಿಸಲಾಗುವುದು. ಅವರಲ್ಲೇ ನಾಲ್ಕೈದು ಮಂದಿ ಇದ್ದರೆ. ಯಾರಿಗೆ ಬಡ್ತಿ ನೀಡಬೇಕೆಂದು ನಿಬಂಧನೆಗಳನ್ನು ರಚಿಸಲಾಗುವುದು. Those are all matters of details. The rules will be framed according to which they will have to go.ಇನ್ನು ಎಫಿಷಿಯನ್ಸಿ ವಿಚಾರ. ಸಾಮಾಜಿಕ ನ್ಯಾಯ ದೊರಕಿಸಬೇಕೆನ್ನುವಾಗ ಸ್ವಲ್ಪ ಮಟ್ಟಿಗೆ ಎಫಿಷಿಯನ್ಸಿಯನ್ನೇ ಅಳತೆಗೋಲನ್ನಾಗಿ ಇಟ್ಟುಕೊಳ್ಳುವುದಕ್ಕಾಗುವುದಿಲ್ಲ. ಇನ್ನು ಹಿಂದುಳಿದ ವರ್ಗದವರಿಗೂ ಬಡ್ತಿ ಹುದ್ದೆಗಳನ್ನು ಮೀಸಲಿಡಬೇಕೆಂದು ಮಾನ್ಯ ಸಭೆಯ ಅಭಿಪ್ರಾಯ ಇರುವುದಾದರೆ ಬಹಳ ಸಂತೋಷ. ಸಭೆಯ ಸದಸ್ಯರೆಲ್ಲರೂ ಇದನ್ನು ಮಾಡುವುದು ಒಳ್ಳೆಯದೆಂದು ಹೇಳುತ್ತಿದ್ದಾರೆ. ಇದಕ್ಕೆ ಉತ್ತರವನ್ನು ನೀಡಬೇಕಾದರೆ ನಾನು ಬಹಳ ಎಚ್ಚರಿಕೆಯಿಂದ ಮಾತನಾಡಬೇಕಾಗುತ್ತದೆ. ಕಾರಣವೇನೆಂದರೆ, ಹಾವನೂರು ವರದಿ ಹೊರಗಡೆ ಬಂದಾಗಿನಿಂದಲೂ ನಿನ್ನೆ ಮೊನ್ನೆಯವರೆಗೂ ಅದರ ಬಗ್ಗೆ ಟೀಕೆಗಳು ವ್ಯಾಖ್ಯಾನಗಳು ನಡೆದಿರುವುದು ತಮಗೆಲ್ಲರಿಗೂ ಗೊತ್ತಿದೆ. ಬಹುಶಃ ಅದರ ಬಗ್ಗೆ ವ್ಯಾಖ್ಯಾನಗಳು ಇನ್ನೂ ನಡೆಯುತ್ತಲೂ ಇರಬಹುದು. ಇನ್ನು ಮುಂದಕ್ಕೆ ಸ್ವಲ್ಪ ಸ್ವಲ್ಪ ಕಡಿಮೆಯಾಗಬಹುದು.

ಶ್ರೀ ಎಸ್. ಆರ್. ಬೊಮ್ಮಾಯಿ.– ಸರ್ಕಾರ ಅವರನ್ನು ಎಕನಾಮಿಕಲಿ ಬ್ಯಾಕ್‌ವರ್ಡ್ ವರ್ಗಕ್ಕೆ ಸೇರಿಸಲಾಗುವುದೆಂದು ಭರವಸೆ ಕೊಟ್ಟಿದೆ, ಮತ್ತು ಆ ಬಗ್ಗೆ ಒಂದು ಸಮಿತಿಯನ್ನು ನೇಮಕ ಮಾಡಿದೆ. ಸರ್ಕಾರ ಮಾಡುತ್ತದೆನ್ನುವ ನಂಬಿಕೆಯಿಂದ ಇಂದು ಅವರು ಚಳುವಳಿಯನ್ನು ಮಾಡುತ್ತಿಲ್ಲ.

ಶ್ರೀ ಹೆಚ್. ಡಿ. ದೇವೇಗೌಡ.– ಹಾವನೂರು ವರದಿ ಬಗ್ಗೆ ಟೀಕೆಗಳು ನಡೆಯುತ್ತಿವೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿರುವ ಮಾತಿಗೆ ನಾನು ಪ್ರತಿಕ್ರಿಯೆ ವ್ಯಕ್ತಪಡಿಸುವುದಕ್ಕೆ ಬಯಸುವುದಿಲ್ಲ. ಹಿಂದುಳಿದ ವರ್ಗದವರಿಗೆ ನೆರವನ್ನು ನೀಡುವ ಒಂದು ಸಂಸ್ಥೆಯ ಉದ್ಘಾಟನೆಯನ್ನು ಮಾಡುತ್ತಾ ಮಾನ್ಯ ಮುಖ್ಯಮಂತ್ರಿಗಳು, ಹಾವನೂರು ಆಯೋಗದ ವರದಿಯಲ್ಲಿ ದೋಷಗಳಿದ್ದರೆ ಅವುಗಳನ್ನು ಪರಿಶೀಲನೆ ಮಾಡುವುದಕ್ಕೆ ಮತ್ತು ಸರಿಪಡಿಸುವುದಕ್ಕೆ ಸರ್ಕಾರ ಯೋಚನೆ ಮಾಡುತ್ತದೆ ಎನ್ನುವ ಮಾತನ್ನು ಹೇಳಿದ್ದಾರೆ. ಅದನ್ನು ನಾನೀಗ ಅವರ ಜ್ಞಾಪಕಕ್ಕೆ ತರಬಯಸುತ್ತೇನೆ. ಅವರ ಹೇಳಿಕೆ ಪತ್ರಿಕೆಗಳಲ್ಲೂ ಪ್ರಕಟವಾಗಿದೆ. ಆ ಹೇಳಿಕೆಯ ಕಟಿಂಗ್ ನನ್ನ ಬಳಿ ಇದೆ. ಆದರೆ ಇಂದು ನಾನದನ್ನು ತರಲಿಲ್ಲ. ಆದುದರಿಂದ, ಮಾನ್ಯ ಮುಖ್ಯಮಂತ್ರಿಗಳು ಅಂದು ಅವರು ಹೇಳಿದ್ದು ಸರಿಯೇ ಅಥವಾ ಪತ್ರಿಕೆಗಳಲ್ಲಿ ತಪ್ಪು ವರದಿಯಾಗಿದೆಯೇ ಎಂದು ತಿಳಿಸಬೇಕು.

ಶ್ರೀ ಡಿ. ದೇವರಾಜ ಅರಸ್.– ಚುನಾವಣೆ ಪೂರ್ವದಲ್ಲಿ ಹಿಂದುಳಿದ ವರ್ಗದವರ ನಿಗಮವನ್ನು ಉದ್ಘಾಟಿಸುತ್ತಾ ನಾನು ಏನು ಹೇಳಿದೆ ಎಂದು ನೆನಪು ಮಾಡಿದ, ಗೌರವಾನ್ವಿತ ಸದಸ್ಯರೂ, ಜನತಾ ಪಕ್ಷದ ಅಧ್ಯಕ್ಷರಿಗೆ ನನ್ನ ವಂದನೆಗಳು. ಆ ವಿಷಯಗಳನ್ನೂ ನಾನು ಯಾವತ್ತು ಮರೆಯುವುದಿಲ್ಲ ಎಂದು. ಗೌರವಾನ್ವಿತ ಸದಸ್ಯರಿಗೆ ಭರವಸೆ ಇಯ್ಯುತ್ತೇನೆ. ಆದರೆ, ಕೆಲವು ಸಂದರ್ಭಗಳಲ್ಲಿ ನಾನು ಈ ಅಂಶವನ್ನು ಅರ್ಥಮಾಡಿಕೊಂಡಿದ್ದೇವೆ. ಒಂದು ವೇಳೆ ಇಡೀ ರಾಜ್ಯವೇ ಹಿಂದುಳಿದ ವರ್ಗದವರ ಪಟ್ಟಿಯಲ್ಲಿ ಬರಬೇಕು ಎಂದು ಬಯಸಿದರೆ, ಏನನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಆ ಅಂಶವನ್ನೇ ನಾನು ಮಾನ್ಯ ಸಭೆಯ ಗಮನಕ್ಕೆ ತರಬೇಕು ಎಂದು ಬಯಸಿದ್ದೇನೆ. ತಾವೂ ಕೂಡ ಒಪ್ಪಬಹುದು. ಅದೇನೆಂದರೆ, ಒಂದು ವೇಳೆ ಇಡೀ ಸಮಾಜವೇ ಹಿಂದುಳಿದಿದ್ದರೆ, ನಂತರ ನಾವು ಹಿಂದುಳಿದ ವರ್ಗಗಳ ಆಯೋಗ, ಮೀಸಲಾತಿ, ಅದು ಮತ್ತು ಇದು? ಎಂದು ಹೊಂದುವುದರಲ್ಲಿ ಯಾವ ಅಂಶವಿದೆ? ಇದರಿಂದ ವ್ಯಕ್ತವಾಗುವ ಹೇಳಿಕೆ ಎಂದರೆ ಯಾರಿಗೆ ನಿಜವಾಗಿ ಸಹಾಯ ಬೇಕಾಗಿದೆಯೋ ಅಂಥ ಯಾವ ವರ್ಗದ ಜನರಿಗೂ ಸಹಾಯ ಮಾಡುವುದು ನಿಮಗೆ ಬೇಕಾಗಿರುವುದಿಲ್ಲ ಎಂದು, ತಿಳಿಯುತ್ತದೆ. ಅದೇನೇಯಾದರೂ, ಎಲ್ಲೋ ಒಂದು ಕಡೆ ನಾವು ವ್ಯತ್ಯಾಸ (ಭಿನ್ನತೆ)ಯನ್ನು ಮಾಡಬೇಕಾಗುತ್ತದೆ. ಮಾನ್ಯ ಆರುಮ್ಗಂ ಹೇಳಿದಂತೆ, 16(4)ರ ಉಪವಿಧಿಯ ಅಡಿಯಲ್ಲಿ ಇದಕ್ಕೆ ಸಂವಿಧಾನಾತ್ಮಕ ಅವಕಾಶ ಇದ್ದರೂ, ವರ್ಷಾನುಗಟ್ಟಲೇ ಈ ದೇಶದಲ್ಲಿ ಚರ್ಚೆ ನಡೆಯುತ್ತಲೇ ಇದೆ. ಕಾಕ ಕಾಲೇಕರ್ ಆಯೋಗದ ವರದಿ ಕೂಡ ನಮ್ಮಲ್ಲಿದೆ. ಈ ವರದಿಯನ್ನು ಎಲ್ಲ ಸೌಲಭ್ಯಗಳನ್ನು ಅನುಭವಿಸಿದ ಜನರ ಭಾಗದಿಂದ ತುಂಬಾ ಅನಾನುಕೂಲಕರವಾಗಿದೆ ಎಂದು ಪರಿಗಣಿಸಲ್ಪಟ್ಟಿದೆ. ಮತ್ತು ಇದು ಒಂದು ದಿನವೂ ಎಲ್ಲಿಯೂ ಬೆಳಕಿಗೆ ಬರಲೇ ಇಲ್ಲ. ಹೀಗಿದ್ದರೂ, ಅನಂತರದಲ್ಲಿ ಮತ್ತೊಮ್ಮೆ ಈ ವಿಚಾರವನ್ನು ತೆಗೆದುಕೊಂಡು ಆಯೋಗವನ್ನು ನೇಮಿಸಿದ್ದೇನೆ ಮತ್ತು ಆಯೋಗ

ಕೂಡ ಕೆಲವು ಅಂಕಿ ಅಂಶಗಳ(ಮಾಹಿತಿ) ಆಧಾರದ ಮೇಲೆ ವರದಿಯನ್ನು ನೀಡಿದೆ. ಹೆಚ್ಚು ಕಮ್ಮಿ ಈ ಆಯೋಗದ ವರದಿಯನ್ನು ಬೇರೆ ಯಾವುದೇ ವರದಿಗಿಂತ ತನ್ನ ನಿಲುವಿನಲ್ಲಿ ಹೆಚ್ಚು ವೈಜ್ಞಾನಿಕತೆಯನ್ನು ಹೊಂದಿದೆ ಎಂದು ಪರಿಗಣಿಸಬಹುದು. ಆಯೋಗವು ಗುರುತಿಸಿದ ಅನುಸಾರ ಮಾಡಿದ ಶಿಫಾರಸ್ಸುಗಳ ಮೇಲೆ ಯಾವಾಗ ನಾವು ನಿರ್ಣಯಗಳನ್ನು ತೆಗೆದುಕೊಳ್ಳಲು ಪ್ರಾರಂಭಿಸಿದೆವೋ ಆಗ ಒಂದು ವರ್ಗಜನ ಆರ್ಥಿಕ ಪರಿಸ್ಥಿತಿಯ ಆಧಾರದ ಮೇಲೆ ಹಿಂದುಳಿದ ವರ್ಗಗಳ ವ್ಯಾಖ್ಯಾನದ ವ್ಯಾಪ್ತಿಯನ್ನು ವಿಸ್ತರಿಸಬೇಕೆಂದು ಬಯಸುತ್ತಾರೆ. ಹಾಗೂ ಸೇವೆಗಳಿಗೋಸ್ಕರ ಮೀಸಲಾತಿಯನ್ನು ಮಾಡುವಾಗ ಈ ಅಂಶವನ್ನು ಕೂಡ ಪರಿಗಣಿಸಲು ನಾವು ಬದ್ಧರಾಗಿದ್ದೇವೆ. ನಾವು ಸೇವೆಗೋಸ್ಕರ ಮೀಸಲಾತಿಯನ್ನು ಹೆಚ್ಚಿಸಿದಂತೆ ಕೆಲವು ಕಾಲೇಜಿನ ವಿದ್ಯಾರ್ಥಿಗಳ ನೊಂದಣಿ ವಿಷಯ ವಿಸ್ತರಿಸಲು ಮುಂದಾಗಿದ್ದೇವೆ. ಏನು ಈ ಹಿಂದೆ ಇದ್ದ ಶೇಕಡ 48 ಅಥವಾ 49ರ ಪ್ರಮಾಣವನ್ನು ನಾವು 58(ಶೇಕಡ) ಕ್ಕೆ ಹೆಚ್ಚಿಸಿದ್ದೇವೆ. ಇರಲಿ, ಒಂದು ವೇಳೆ ನಾನು ವಿಷಯವನ್ನು ತಿದ್ದುಪಡಿಗೆ ನೆನಪಿಸಿದರೆ, ಪ್ರಾಯಶಃ ಬೇರೆ ಯಾವುದೇ ರಾಜ್ಯಗಳಿಗೆ ಹೋಲಿಸಿದರೆ ನಾವು ಮಾಡಿದ ಮೀಸಲಾತಿಯ ಪ್ರಮಾಣವೇ ತುಂಬಾ ಹೆಚ್ಚಿನದು ಎನಿಸಬಹುದು. ಒಂದು ವೇಳೆ ಬೇರೆ ಯಾವುದಾದರೂ ರಾಜ್ಯ ಶೇಕಡ 58 ಮತ್ತು ಶೇಕಡ 60ರಷ್ಟು ಮೀಸಲಾತಿಯನ್ನು ಹೊಂದಿದ್ದರೆ ಅದು ನನಗೆ ತಿಳಿದಿರುವುದಿಲ್ಲ. ನಾವು ಅಂತಹ ಪಂಗಡದವರಿಗಾಗಿ ಕೆಲಪ್ರಮಾಣದ ಅಂದರೆ ಶೇಕಡ 6ರಷ್ಟುನ್ನು ಕೂಡ ಎಚ್ಚರಿಕೆಯನ್ನು ತೆಗೆದುಕೊಂಡಿದ್ದೇವೆ.

ಸರ್ಕಾರ ಅಂತವರ ಪ್ರಾತಿನಿಧ್ಯವನ್ನು ಕುರಿತು ನೋಡುತ್ತಿದೆ. ಯಾವಾಗ ಮಂತ್ರಿಗಳು ಹಿಂದುಳಿದ ವರ್ಗಗಳ ನಿಗಮದ ಛೇರ್ಮನ್ ಆಗಿರುತ್ತಾರೋ ಮತ್ತು ಅದಕ್ಕಾಗಿ ಪ್ರತ್ಯೇಕ ಖಾತೆಯನ್ನು ತೆರೆಯಲಾಗುವುದೋ ಆ ಸಮಯದಲ್ಲಿ ಆ ವಿಚಾರಗಳ ಕುರಿತು ಮೇಲ್ವಿಚಾರಣೆ ನಡೆಸುವ ಹೊಣೆಗಾರಿಕೆ ಮಂತ್ರಿಯವರಿಗೆ ಸಂಬಂಧಿಸಿರುತ್ತದೆ. ಸಧ್ಯಕ್ಕೆ ಈಗಿರುವ ಮಂತ್ರಿಗಳು ಆ ಖಾತೆಯ ಉಸ್ತುವಾರಿ ಸಚಿವರಾಗಿದ್ದು, ಅವರು ಸ್ವತಃ ಹಿಂದುಳಿದ ವರ್ಗಗಳ ವರದಿಯನ್ನು ನೋಡಿಕೊಳ್ಳುವ ಇತರ ಸದಸ್ಯರುಗಳಲ್ಲಿ ಒಬ್ಬರಾಗಿದ್ದಾರೆ. ಆ ಪ್ರಶ್ನೆಯನ್ನೂ ನಾನು ಮರೆತಿಲ್ಲ. ಅದನ್ನು ತೆಗೆದುಕೊಳ್ಳಲಾಗುವುದು. ಆದರೆ ನಾನು ಏನು ಹೇಳಲು ಬಯಸುತ್ತೇನೆಂದರೆ, ನಾನು ಇದನ್ನು ಕೆಲವು ಎಚ್ಚರಿಕೆಗಳಿಂದ ಮಾಡಿದ್ದೇನೆ. ಯಾಕೆಂದರೆ ಈ ಸದನ ಮತ್ತು ಸಾರ್ವಜನಿಕರು ಇದನ್ನು ಹೇಗೆ ಬರಮಾಡಿಕೊಳ್ಳುತ್ತಾರೆ ಎನ್ನುವುದನ್ನು ಸರ್ಕಾರ ತಿಳಿಯಬಯಸುತ್ತದೆ. ಈಗ ನನಗೆ ತುಂಬಾ ಸಂತೋಷವಾಗಿದೆ ಕಾರಣ ಇಡೀ ಸದನವೇ ಸರ್ಕಾರದ ಜೊತೆ ಇರುವುದರಿಂದ. ನಾವು ನಿರ್ಣಯ ತೆಗೆದುಕೊಂಡಿರುವುದು ಈ ರೀತಿ ಎಂದು ಯಾವಾಗ ನಾವು ಹೇಳಿದ್ದೇವೋ ಅದನ್ನು ಎಲ್ಲರೂ ಸ್ವಾಗತಿಸಿದ್ದಾರೆ, ಮತ್ತು ಇದರ ಬಗ್ಗೆ ನನಗೆ ತುಂಬಾ ಸಂತೋಷವಾಗಿದೆ ಹಾಗೂ ನಾನು ಈ ಸದನದ ಎಲ್ಲಾ ಗೌರವಾನ್ವಿತ ಸದಸ್ಯರನ್ನು ವಂದಿಸುತ್ತೇನೆ. ಇದಕ್ಕೆ ಪೂರಕವಾಗಿ ಹೇಳುವ ವಿಚಾರವೆಂದರೆ ಹಿಂದೂಳಿದ ವರ್ಗಗಳು ಕೆಲವು ಬಡ್ತಿಯಾತ್ಮಕ ಮೀಸಲಾತಿಗಳು ಪಡೆಯುವಂತಾಗುವುದನ್ನು ನೋಡಲು ಅವರೂ ಕೂಡ ಇಷ್ಟಪಡುತ್ತಾರೆ. ನನ್ನ ಮಟ್ಟಿಗೆ ಹೇಳುವುದಾದರೆ, ಇದನ್ನು ತುಂಬಾ ತುಂಬಾ ಉತ್ತಮವೆಂದು ಸ್ವಾಗತಿಸುತ್ತೇನೆ ಅದೂ ನನ್ನ ಹೃದಯದಿಂದ ನಿಮಗೆ ತಿಳಿದಿರುವಂತೆ. ಕೆಲವು ಸಮಯದಲ್ಲಿ, ಎಲ್ಲ ಈ ವಿಚಾರಗಳನ್ನು ಕುರಿತು ಅತಿಹೆಚ್ಚು ಮಾತನಾಡುವ ಮನುಷ್ಯನಂತೆ ನಾನು ಕೂಡ ಕಾಣಿಸಬಹುದು. ಆದರೆ ಈಗ ಇದು

ಎರಡೂ ಸದನದ ಮಾನ್ಯ ಸದಸ್ಯರುಗಳಿಂದ ಬರುತ್ತಿರುವುದರಿಂದ, ಸರ್ಕಾರಕ್ಕೆ ಈ ವಿಷಯವನ್ನು ಕುರಿತು ಮುಂದಿನ ನಿರ್ಧಾರ ತೆಗೆದುಕೊಳ್ಳಲು ಸುಲಭವಾಗಿದೆ.

ಶ್ರೀ ಎಸ್. ಆರ್. ಬೊಮ್ಮಾಯಿ.- ಮಾನ್ಯ ಮುಖ್ಯಮಂತ್ರಿಗಳು ಬ್ಯಾಕ್ ವರ್ಡ್‌ಕ್ಲಾಸ್ ಬಗ್ಗೆ ಹೇಳುವಾಗ ಅದನ್ನು ಸಹಾನುಭೂತಿಯಿಂದ ವಿಚಾರ ಮಾಡುತ್ತೇವೆ ಎನ್ನುವ ಮಾತನ್ನು . ಹೇಳಿದರು. ಹಾವನೂರು ಕಮಿಷನ್ ಬಗ್ಗೆ ಹೇಳುವಾಗ ಅದು ಬಹಳ ಸೈಂಟಿಫಿಕ್ ಆಗಿ ಆಗಿದೆ ಎಂಬುದಾಗಿ ಹೇಳಿದ್ದಾರೆ. ಹಾವನೂರು ಕಮೀಷನ್ ವರದಿ ಬಗ್ಗೆ ಈ ಸದನದಲ್ಲಿ ಚರ್ಚೆಯಾಗಿರಲಿಲ್ಲ. ಕೆಳಮನೆಯಲ್ಲಿ ಚರ್ಚೆಯಾಗಿಲ್ಲ. ಹಾವನೂರು ಕಮೀಷನ್‌ನ ವರದಿಯನ್ನು ಸ್ವಾಗತಿಸಿದವರಲ್ಲಿ ನಾನೂ ಒಬ್ಬ. ಆದರೆ ಅದರಲ್ಲಿ ಕೆಲವು ದೋಷಗಳು ಇವೆ.

ಶ್ರೀ ಡಿ. ದೇವರಾಜಅರಸ್.- ನಾನು ಪ್ರಾಮಾಣಿಕವಾಗಿ ಹೇಳುವ, ಬೇರೆ ಹಲವು ವರದಿಗಳೊಂದಿಗೆ ಹೋಲಿಕೆ ಮಾಡಿದಾಗ ಇದು ಹೆಚ್ಚು ವೈಜ್ಞಾನಿಕವಾಗಿದೆ. ಇದಕ್ಕೂ ಹೊರತಾಗಿ ಕೆಲವೊಂದು ದೋಷಗಳು ಇರಬಹುದು. ಅಲ್ಲದೇ ಇದರಲ್ಲೂ ತಪ್ಪೇ ಇಲ್ಲ ಮತ್ತು ಏನೂ ಬದಲಾವಣೆ ಮಾಡದಷ್ಟು ಉತ್ತಮವಾದದ್ದು ಎಂದು ನಾನು ಹೇಳಿಲ್ಲವಲ್ಲ.

ಶ್ರೀ ಎಸ್. ಆರ್. ಬೊಮ್ಮಾಯಿ.- ರಾಜ್ಯದಲ್ಲಿ ಅತಿಹೆಚ್ಚು ಜನರು ಹಿಂದುಳಿದವರೆಂದು ಪ್ರಕಟಿಸಲಾಗಿದೆ. ಇದು ಈ ರಾಜ್ಯವನ್ನು ಬಿಟ್ಟು ದೇಶದಲ್ಲೆಲ್ಲೂ ಇಷ್ಟೊಂದು ಪ್ರಮಾಣದ ಹಿಂದುಳಿದವರು ಕಂಡುಬರುವುದಿಲ್ಲ.

ಶ್ರೀ ಡಿ. ದೇವರಾಜ ಅರಸ್. - ದೇಶದಾದ್ಯಂತ ಬೇರೆ ರಾಜ್ಯಗಳು ನಮ್ಮನ್ನು ಅನುಸರಿಸುತ್ತವೆ. ಕೇಂದ್ರ ಸರ್ಕಾರ ಈಗಾಗಲೇ ಈ ನಿಟ್ಟಿನಲ್ಲಿ ಸಮಾಲೋಚಿಸುತ್ತಿದೆ......

ಶ್ರೀ ಎಸ್. ಆರ್. ಬೊಮ್ಮಾಯಿ.- ನನಗೆ ಗೊತ್ತು ಭಾರತ ಸರ್ಕಾರ ಕೂಡಾ ಆ ವಿಷಯಗಳ ಮೇಲೆ ಯೋಚಿಸುತ್ತಿದೆ ಎಂದು. ಹಾವನೂರು ಕಮಿಷನ್ ಬಗ್ಗೆ ಈ ಮನೆಯಲ್ಲಿ ಚರ್ಚೆ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕು. ಹಾವನೂರು ಕಮೀಷನ್ನಿನ ರೀತಿಯಲ್ಲೆ ಶ್ರೀಮಾನ್ ನಾಡಗೌಡರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಹಿಂದೆ ಮಾಡಿದ್ದರು. ಅವರೂ ಕೂಡ ಒಂದು ವರದಿಯನ್ನು ಕೊಟ್ಟಿದ್ದರು. ಆದ್ದರಿಂದ ಹಾವನೂರು ಕಮಿಷನ್ನೇ ಪ್ರಥಮವಾಗಿ ಹಾಕಿದೆ ಎಂಬುದಾಗಿ ಹೇಳುವುದು ಸರಿಯಲ್ಲ. ಶ್ರೀಮಾನ್ ನಾಡಗೌಡರ ರಿಪೋರ್ಟ್ ಕಾರ್ಯಗತವಾಗಲಿಲ್ಲ. ಅದನ್ನು ನಾನು ಒಪ್ಪುತ್ತೇನೆ. ಇವತ್ತು ಹಾವನೂರು ಕಮಿಷನ್‌ನ ರಿಪೋರ್ಟ್ ಬಗ್ಗೆ ಬಹಳವಾಗಿ ಮಾತನಾಡಬೇಕಾಗಿದೆ. ಇದು ನನ್ನ ತಪ್ಪಲ್ಲ. ಆ ಒಂದು ಜಾತಿಯಲ್ಲಿ ನಾನು ಹುಟ್ಟಿದ್ದೇನೆ. ಆದ್ದರಿಂದ ನಾನು ಇದರ ಬಗ್ಗೆ ಮಾತನಾಡಿದರೆ ಅದಕ್ಕೆ ಬಣ್ಣ ಕಟ್ಟಬಹುದು. ಆ ದೃಷ್ಟಿಯಿಂದ ಸದನದಲ್ಲಿ ಹಾವನೂರು ಕಮಿಷನ್ ವರದಿಯ ಬಗ್ಗೆ ಚರ್ಚೆ ಮಾಡಲು ಅವಕಾಶ ಮಾಡಿಕೊಡಬೇಕು. ಈ ರಾಜ್ಯದಲ್ಲಿ ಎಲ್ಲರೂ ಮುಂದುವರಿದವರು ಇಲ್ಲ. ಎಲ್ಲ ಜನಾಂಗದಲ್ಲೂ ಕಡು ಬಡವರಿದ್ದಾರೆ. ಕೆಲವು ಜನಾಂಗದವರಿಗೆ ಶೇ 58ನ್ನು ರಿಸರ್ವೇಶನ್ ಮಾಡಿದ್ದೇನೆಂದು ಹೇಳಿದರು. ಆದರೆ ಶೇ 60ರಷ್ಟು ಜನರು ಬ್ಯಾಕ್ ವರ್ಡ್‌ಕ್ಲಾಸ್ ಎಂದು ನೀವೇ ಡಿಕ್ಲೇರ್ ಮಾಡಿದ್ದೀರಿ.

ಶ್ರೀ. ಡಿ. ದೇವರಾಜ ಅರಸ್.- ನಾನು ಮಾಡಿರುವುದು ವಾಸ್ತವಾಗಿದೆ ಅಷ್ಟೆ.

ಶ್ರೀ ಎಸ್. ಆರ್. ಬೊಮ್ಮಾಯಿ.- ಮಾನ್ಯ ಮುಖ್ಯಮಂತ್ರಿಗಳು ಬ್ಯಾಕ್‌ವರ್ಡ್ ಕ್ಲಾಸ್ ಬಗ್ಗೆ ಹೇಳುವಾಗ ಅದನ್ನು ಬಹಳ ಸಹಾನುಭೂತಿಯಿಂದ ವಿಚಾರ ಮಾಡುತ್ತೇವೆ ಎಂದು ಹೇಳಿದ್ದಾರೆ. ಅದರ ಬಗ್ಗೆ ನಾನು ಹೇಳುತ್ತಿಲ್ಲ. ಆದರೆ ಆ ರೀತಿ ವಿಚಾರ ಮಾಡುತ್ತೇವೆಂದು ಹೇಳಿ ಬಹಳ ವರ್ಷಗಳಾಗಿವೆ. ಆದ್ದರಿಂದ ಅದನ್ನು ಈಗ ತೆಗೆದುಕೊಂಡರೆ ಒಳ್ಳೆಯದು. ಆದ್ದರಿಂದ ಈ ಬಗ್ಗೆ ಕೂಡಲೇ ನಿರ್ಣಯ ತೆಗೆದುಕೊಳ್ಳಬೇಕಾಗಿದೆ. ಆದ್ದರಿಂದ ಹಾವನೂರು ಕಮಿಷನ್ ಬಗ್ಗೆ ಚರ್ಚೆಮಾಡಲು ಅವಕಾಶ ಕಲ್ಪಿಸಿಕೊಡಬೇಕೆಂದು ಮಾನ್ಯ ಅಧ್ಯಕ್ಷರವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಭೀಮಣ್ಣಖಂಡ್ರೆ.- ಮಾನ್ಯ ಮುಖ್ಯಮಂತ್ರಿಗಳು ಬಹಳ ಬುದ್ಧಿವಂತಿಕೆಯಿಂದ ಮಾತನಾಡಿದರು. ನಾವು ಹೇಳಿದರ ಬಗ್ಗೆ ಅವರು ಈ ಮನೆಗೆ ಭರವಸೆ ನೀಡಲಿಲ್ಲ. ಸಂಖ್ಯೆ ಹೆಚ್ಚು ಆಗಬಾರದು. ಹಾವನೂರು ಕಮಿಷನ್ ವರದಿಯನ್ನು ಜಾತೀಯ ಆಧಾರವಾಗಿಟ್ಟುಕೊಂಡು ಮಾಡುವುದು ಬೇಡ. ಎಲ್ಲ ಜನಾಂಗದಲ್ಲೂ ಗರೀಬರಿದ್ದಾರೆ. ಆರ್ಥಿಕ ದೃಷ್ಟಿಯಿಂದ ತೆಗೆದುಕೊಂಡು ಬ್ಯಾಕ್‌ವರ್ಡ್ ಕ್ಲಾಸ್ ಎಂದು ತೀರ್ಮಾನ ತೆಗೆದುಕೊಳ್ಳಬೇಕು. ಅದರ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಭರವಸೆ ನೀಡಬೇಕು.

# 14. ಪರಿಶಿಷ್ಟ ಜಾತಿ / ಪಂಗಡಗಳಿಗೆ ಪ್ರಾತಿನಿಧ್ಯದ ಬಗ್ಗೆ

(30ನೇ ಮಾರ್ಚ್,1978)

27ನೇ ಡಿಸೆಂಬರ್ 1977 ರಂದು ಈ ಆದೇಶವು ಸರ್ಕಾರದಿಂದ ಪ್ರಕಟಿಸಲ್ಪಟ್ಟಿತ್ತು. ಆದರೆ ಕರ್ನಾಟಕದಲ್ಲಿ ರಾಷ್ಟ್ರಪತಿ ಆಳ್ವಿಕೆಯನ್ನು ಜಾರಿಗೊಳಿಸುವ ಕೆಲವು ದಿನಗಳ ಮುಂಚೆ ರಾಷ್ಟ್ರಪತಿ ಆಳ್ವಿಕೆಯ ಹೇರಿಕೆಯ ನಂತರ ಈ ಆದೇಶವನ್ನು 27ನೇ ಡಿಸೆಂಬರ್ 1977ರಂದು ಹೊರಡಿಸಲು ಏನಾದರೂ ಕುತಂತ್ರ ನಡೆದಿದೆಯೋ ಎಂದು ಕಂಡು (ಹಿಡಿಯ ಬೇಕೆಂದು) ನಾನು ಮಾನ್ಯ ಮಂತ್ರಿಗಳಲ್ಲಿ ಮತ್ತು ಸಂಬಂದಪಟ್ಟ ಮಂತ್ರಿಗಳಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಎಸ್. ಆರ್. ಬೊಮ್ಮಾಯಿ.- ಸರ್, ನಿಜವಾಗಿಯೂ ಈ ಆದೇಶವನ್ನು ಹೊರಡಿಸಲು ಆ ಮಂತ್ರಿಯ ಮನಸ್ಸಿನಲ್ಲಿಯೇ ಅನುಮಾನವಿತ್ತು. ಲೋಕೋಪಯೋಗಿ ಇಲಾಖೆ (PWD) ಮಂತ್ರಿಗಳು ಮೊದಲಿನ ಆದೇಶವನ್ನು ಬದಲಾಯಿಸುವವರಿದ್ದಾರೆ ಎಂದು ಸಾರ್ವಜನಿಕ ಹೇಳಿಕೆಗಳನ್ನು ನೀಡಿದವರಲ್ಲಿ ನಾನು ಕೂಡ ಒಬ್ಬ ಮತ್ತು ಮೊದಲಿನ ಆದೇಶವನ್ನು ಪರಿಷ್ಕರಿಸುವುದರ ಬಗ್ಗೆಯೂ ಕೆಲವು ಆರೋಪಗಳಿದ್ದವು. ಈ ಆದೇಶವನ್ನು ರಾಷ್ಟ್ರಪತಿ (ಆಡಳಿತ) ಆಳ್ವಿಕೆಯನ್ನು ಹೇರುವ ಮೊದಲೇ ಹೊರಡಿಸಲಾಗಿತ್ತು.

ಶ್ರೀ ದೇವರಾಜ ಅರಸ್.- ಈ ತೀರ್ಮಾನವನ್ನು (ಕ್ಯಾಬಿನೆಟ್) ಮಂತ್ರಿಮಂಡಲ ತೆಗೆದುಕೊಂಡಿತ್ತು.

ಶ್ರೀ ಸಿ. ಎಂ. ಆರ್ಮುಗಂ.- ಹೌದಾದರೆ ಇಲಾಖೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನೇರ ನೇಮಕಾತಿ ಮತ್ತು ಮೀಸಲಾತಿ ಸಂಬಂಧದಲ್ಲಿ ಸಧ್ಯದಲ್ಲಿ ಈ ಪರಿಸ್ಥಿತಿಯಿದೆ. ಇದು ನಗರಸಭೆಯಂತೆ ಆಡಳಿತದಲ್ಲಿರಬಹುದು. ವರ್ಗ 4 (ನಾಲ್ಕನೇ) ಹುದ್ದೆಗಳಲ್ಲಿ ಪ್ರಾತಿನಿಧ್ಯವಿರಬಹುದು. ಆದರೆ ಬೇರೆ ಇಲಾಖೆಗಳಲ್ಲಿ ಮತ್ತು ಐ.ಎ.ಎಸ್. ಐ.ಪಿ.ಎಸ್. ಶ್ರೇಣಿಗಳಲ್ಲಿ ಹಾಗೂ ವರ್ಗ1,2 ರಲ್ಲಿ ನಾವು ಸರಿಯಾದ ಪ್ರಾತಿನಿಧ್ಯವನ್ನು ಹೊಂದಿಲ್ಲ. ಒಬ್ಬ ಮಾನ್ಯ ಸದಸ್ಯರು 'ಇದು ಯಾವ ರೀತಿ ಪರಿಶಿಷ್ಟ ಜಾತಿಯವರಿಗೆ ಸಹಾಯವಾಗುತ್ತದೆ" ಎಂದು ನನ್ನನ್ನು ಕೇಳಿದರು. ನಾನು ನಿಮಗೆ ಹೇಳುತ್ತೇನೆ. ಮಾನ್ಯರೇ, ಬಡ್ತಿಯಲ್ಲಿ ಮತ್ತು ಮೀಸಲಾತಿಯಲ್ಲಿ ಅವಕಾಶವಿದ್ದರೆ ಒಬ್ಬ ದ್ವಿತೀಯ ದರ್ಜೆ ಗುಮಾಸ್ತ ಪ್ರಥಮ ದರ್ಜೆ ಗುಮಾಸ್ತನಾಗಿ ಬಡ್ತಿ ಹೊಂದಬಹುದು ಮತ್ತು ಅವರು ದ್ವಿತೀಯ ದರ್ಜೆ ಗುಮಾಸ್ತನನ್ನು ನೇಮಕಾತಿ ಮಾಡಿಕೊಳ್ಳಬೇಕಾಗುತ್ತದೆ. ಮತ್ತು ಪ್ರಥಮ ದರ್ಜೆ ಗುಮಾಸ್ತನನ್ನು ತಹಶೀಲ್ದಾರ್ ಅಥವಾ ಕ್ಷೇತ್ರಾಭಿವೃದ್ಧಿ (ಬಿ.ಡಿ.ಒ) ಅಧಿಕಾರಿಯಾಗಿ ನೇಮಕ ಮಾಡಿದರೆ ಪ್ರಥಮ ದರ್ಜೆ ಗುಮಾಸ್ತನ ಹುದ್ದೆಗಳಿಗೆ ಮತ್ತೆ ನೇಮಕಾತಿಯನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ರೀತಿಯಾಗಿ ಬಡ್ತಿಯನ್ನು ನೀಡಿದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಪ್ರಾತಿನಿಧ್ಯವನ್ನು ನೀಡಿದಂತಾಗುತ್ತದೆ. ಕೊನೆಯದಾಗಿ ನಾನು ಹೇಳಲು ಇಚ್ಛಿಸುವುದೇನೆಂದರೆ 29 ವರ್ಷಗಳ ನಂತರವೂ ನಾವು ನೌಕರಿಗಳಲ್ಲಿ ಸಾಕಷ್ಟು ಪ್ರಾತಿನಿಧ್ಯವನ್ನು ಹೊಂದಿಲ್ಲ ಮತ್ತು ನೌಕರಿ ಎಂದರೆ ಬಡವರ್ಗದ ಸಾಮಾಜಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಲು ಆಗುವ ಒಬ್ಬನ ಖಾಯಂ ವರಮಾನದ ಮೂಲಗಳು.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಬಡ್ತಿಯಲ್ಲಿ ಸರ್ಕಾರವು ಕೈಗೊಂಡಿರುವ ಕಾರ್ಯಕ್ರಮಗಳನ್ನು ಮತ್ತೊಮ್ಮೆ ನಾನು ಸ್ವಾಗತಿಸುತ್ತೇನೆ. ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಮುಂದೆ ಬರಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ. ಇದು ಹೊಸ ವಿಷಯವೇನಲ್ಲ, ಮಹಾರಾಷ್ಟ್ರ ಸರ್ಕಾರ ಇದನ್ನು ಮಾಡಿದೆ. ಪರಿಶಿಷ್ಟ ಜಾತಿ ಮತ್ತು (quota)ಗಳನ್ನು ಪಡೆಯುವವರೆಗೆ ಬೇರೆ ಜಾತಿಯವರ ನೇಮಕಾತಿಗಳನ್ನು ನಡೆಸಕೂಡದೆಂದು ಈ ಮೊದಲೇ ಸೂಚಿಸಲಾಗಿತ್ತು. ಇದು ಮಹಾರಾಷ್ಟ್ರ ವಿಧಾನಸಭೆಯ ಸಲಹೆಯಾಗಿತ್ತು. ನಾನು ಈ ರೀತಿಯಾಗಿ ಸೂಚಿಸುತ್ತಿಲ್ಲ. ಕೊನೆ ಪಕ್ಷ ರಾಜ್ಯದಲ್ಲಿ ಆಡಳಿತಾತ್ಮಕ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ತಮ್ಮ ಪಾಲನ್ನು ಪಡೆಯುವ ಹಾಗೆ ಹೆಚ್ಚು ಹೆಚ್ಚು ಜನರನ್ನು ನೇಮಿಸಿಕೊಳ್ಳಬೇಕು.

ಶ್ರೀ ಕೆ. ವೆಂಕಟಪ್ಪ.- ಮಾನ್ಯ ಅಧ್ಯಕ್ಷರೇ ಇದಕ್ಕೆ ಸಂಬಂಧಪಟ್ಟಂತೆ ಎರಡು ವಿಷಯಗಳನ್ನು ಹೇಳುತ್ತೇನೆ. ಒಂದು ರಿಸರ್ವೇಷನ್‌ನಲ್ಲಿ 15-3 ಏನು ಇದೆ ಇದನ್ನು ಮಾಡುವುದರಲ್ಲಿ ಒಟ್ಟು 40 ಇದ್ದರೆ 15-3 ಎಂದರೆ ಅದರಲ್ಲಿ 7-3 ಬರುತ್ತದೆ. ಇದನ್ನು ಸ್ಟೇಟ್ ಲೆವಲ್‌ನಲ್ಲಿ ಮಾಡಿದರೆ ಸರಿಯಲ್ಲ. ಆದರೆ ಜಿಲ್ಲಾ ಮಟ್ಟದಲ್ಲಿ ಒಂದೊಂದು ಜಿಲ್ಲೆಗಳಲ್ಲಿ ಈ ರೀತಿ ಮಾಡುವುದಾದರೆ 40 ರಷ್ಟು ಆಗುತ್ತದೆ, ಎಂದರೆ ಕೆಲವು ಇಲಾಖೆಯವರು ಇವುಗಳನ್ನು ಬೇರ್ಪಡಿಸಿ ಅದನ್ನು ಸರಿಯಾದ ರೀತಿಯಲ್ಲಿ ಕೊಡಬೇಕು. ಎರಡನೇಯದು ಎಕ್ಸ್‌ಸರ್ವೀಸ್ ಮೆನ್‌ಗಳಿಗೆ 10 ಪರ್ಸೆಂಟ್ ರಿಸರ್ವೇಷನ್ ಇದೆ. ಅದರಲ್ಲಿಯೂ ಸಹಿತ ಅವರ ರಿಸರ್‌ವೇಷನ್ ಮಾಡಿದ ಮೇಲೆ 100 ಇದ್ದರೆ ಅದು 90 ರೊಳಗೆ ಎಂದು ಮಾಡಿದ್ದಾರೆ ಇದನ್ನು ಪರಿಶೀಲಿಸಬೇಕು.

ಶ್ರೀ ಎಸ್. ಎಸ್. ಅರಕೇರಿ.- ಈಗ ರಿಸರ್‌ವೇಷನ್ ಇರುವುದು ಸರಿ 15-3 ಇದು 25 ವರ್ಷದಿಂದ ಇದೆ ಆದರೂ ಸಿಗಬೇಕಾದ ಪರ್ಸೆಂಟೇಜ್ ಸಿಕ್ಕಿಲ್ಲವಾದ್ದರಿಂದ ಈ 18 ಪರ್ಸೆಂಟ್ ಸಿಕ್ಕುವವರೆಗೆ ರೆಕ್ರೂಟ್‌ಮೆಂಟ್ ಮಾಡಲಿಕ್ಕೆ ಮಾನ್ಯ ಮುಖ್ಯ ಮಂತ್ರಿಗಳು ಮನಸ್ಸು ಮಾಡಿದರೆ ಒಳ್ಳೆಯದಾಗುತ್ತದೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಶ್ರೀ ಪಿ. ಪಿ. ಹೆಗರೆ.- ಮಾನ್ಯ ಅಧ್ಯಕ್ಷರೇ ಸರ್ಕಾರಿ ಇಲಾಖೆಗಳಲ್ಲಿ ಹಾಗೂ ಸರ್ಕಾರಿ ಉದ್ಯಮಗಳಲ್ಲಿ ಮಾತ್ರ ಈ ರೀತಿ ರಿಸರ್‌ವೇಷನ್ ಕೊಡುವುದರ ಜೊತೆಗೆ ಖಾಸಗಿ ರಂಗಗಳಲ್ಲಿ ಇರುವ ವಿದ್ಯಾಸಂಸ್ಥೆಗಳಲ್ಲಿ ಹಾಗೂ ಖಾಸಗಿ ರಂಗಗಳಲ್ಲಿರುವ ಕಾರ್ಖಾನೆಗಳಲ್ಲಿಯೂ ಈ ರಿಸರ್‌ವೇಷನ್ ಕಡ್ಡಾಯ ಮಾಡಿದರೆ ಸಾಕಷ್ಟು ಜನರಿಗೆ ಕೆಲಸ ದೊರಕಲಿಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ ದಯಮಾಡಿ ಮಾನ್ಯ ಮುಖ್ಯಮಂತ್ರಿಗಳು ಇದರ ಬಗ್ಗೆ ಗಮನಹರಿಸಿ ಇದನ್ನು ಮಾಡಿದರೆ ಮಾನ್ಯ ಆರ್ಮುಗಂರವರು ಏನು ಹೇಳಿದ್ದಾರೆ ಅದಕ್ಕೆ ಪುಷ್ಟೀಕರಿಸಿದಂತಾಗುತ್ತದೆ. ಆದ್ದರಿಂದ ದಯಮಾಡಿ ಇದನ್ನು ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ದೇವರಾಜ ಅರಸ್ (ಮುಖ್ಯಮಂತ್ರಿ).- ಸರ್ ಗೌರವಾನ್ವಿತ ಸದಸ್ಯರಾದ ಆರ್ಮುಗಂರವರು ಹಲವಾರು ಇಲಾಖೆಗಳಲ್ಲಿ ಮತ್ತು ಸರ್ಕಾರಿ ಉದ್ಯಮಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಾತಿನಿಧ್ಯದಲ್ಲಿನ ತೊಂದರೆಗಳನ್ನು ಹೆಚ್ಚು ಮಾಡಿದ್ದಾರೆ. ಅವರು ಒದಗಿಸದಂತಹ ಅಂಕಿಅಂಶಗಳು ಮತ್ತು ಶೇಕಡಾವಾರು ಪ್ರಮಾಣಗಳು ಸರಿಯಾಗುತ್ತವೆಂದು ನಾನು ಭಾವಿಸುತ್ತೇನೆ. ಈ ಪ್ರಾತಿನಿಧ್ಯವು ಬಹಳಷ್ಟು ಮಟ್ಟಿಗೆ ಸಾಲುವುದಿಲ್ಲ ಎಂದು ನಾನು

ಹೇಳಿದರೆ ಸದನವು ಅಂಗೀಕರಿಸುತ್ತದೆಂದು ನಾನು ಭಾವಿಸಿದ್ದೇನೆ. ಇಲ್ಲಿರುವ ಪ್ರಶ್ನೆಯೆಂದರೆ ತುಳಿತಕ್ಕೊಳಗಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಂತಹ ಜನರ ಆಶೋತ್ತರಗಳನ್ನು ಯಾವ ರೀತಿ ಈಡೇರಿಸಬೇಕು ಮತ್ತು ಸಂವಿಧಾನದಲ್ಲಿ ಹಲವಾರು ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಾತಿನಿಧ್ಯದ ಬಗ್ಗೆ ಹಾಕಿರುವಂತಹ ನಿಯಮಗಳ ಅನುಸಾರ ಯಾವ ರೀತಿ ನಡೆದುಕೊಳ್ಳಬೇಕೆಂದು ಈ ವಿಷಯಕ್ಕೆ ಹಲವಾರು ವರ್ಷಗಳಿಂದ ಸರಿಯಾದ ಗಮನವನ್ನು ಕೊಟ್ಟಿಲ್ಲ. ನಾನು ಇದನ್ನು ಹೇಳಬೇಕಾದರೆ X ಅಥವಾ Y ಮೇಲೆ ಅಪವಾದ ಹೊರಿಸುತ್ತಿಲ್ಲ. ಸರಿಯಾದ ಪ್ರಾತಿನಿಧ್ಯವನ್ನು ದೊರಕಿಸಿಕೊಡುವ ಈ ಸಮಸ್ಯೆಯನ್ನು ಸುಸೂತ್ರ ರೀತಿಯಲ್ಲಿ ತಪ್ಪಿಸಿದ್ದಾರೆ. ಇನ್ನು ಮೇಲಾದರೂ ನಾವು ಈ ಪ್ರಾತಿನಿಧ್ಯವಿಲ್ಲದ ವರ್ಗದವರಿಗೆ ನ್ಯಾಯವನ್ನು ದೊರಕಿಸಿಕೊಡುವಲ್ಲಿ ನಮ್ಮ ತನುಮನಗಳನ್ನು ಕೇಂದ್ರೀಕರಿಸುವ ಎಂದು ಹೇಳಿದರೆ ಮಾನ್ಯ ಸದಸ್ಯರು ಒಪ್ಪಿಕೊಳ್ಳುತ್ತಾರೆಂದುಕೊಳ್ಳುತ್ತೇನೆ. ಈ ದಿಸೆಯಲ್ಲಿ ಹಲವಾರು ಸರ್ಕಾರಿ ಆದೇಶಗಳನ್ನು ಹೊರಡಿಸಲಾಗಿದೆ ಮತ್ತು ಅವರು ಅವುಗಳನ್ನು ನಮೂದಿಸುತ್ತಿಲ್ಲ. ಸರ್ಕಾರವು ಹಿಂದುಳಿದ ವರ್ಗಗಳ ವರ್ಗೀಕರಣ ಮತ್ತು ಸಂವಿಧಾನದಲ್ಲಿರುವ 64ನೇ ವಿಧಿಯ ಪ್ರಕಾರ ಹುದ್ದೆಗಳಲ್ಲಿ ಮೀಸಲಾತಿಯನ್ನು ಹೊರಡಿಸಿದೆ. ಇದು ಸದಸ್ಯರಿಗೆ ತಲುಪಿಸಲಾಗಿದೆಯೋ ನನಗೆ ಗೊತ್ತಿಲ್ಲ. ಇನ್ನೂ ಮೇಲಾದರೂ ಇದರ ಒಂದು ಪ್ರತಿಯು ಗೌರವಾನ್ವಿತ ಸದಸ್ಯರೆಲ್ಲರಿಗೂ ತಲುಪುವಂತೆ ನೋಡಿಕೊಳ್ಳುತ್ತೇನೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಪ್ರಾತಿನಿಧ್ಯವನ್ನು ಕುರಿತಂತೆ ಹಲವಾರು ವಿಷಯಗಳು ಇದರಲ್ಲಿ ನಮೂದಿಸಲ್ಪಟ್ಟಿವೆ.

ಶ್ರೀ ಸಿ. ಎಂ. ಆರ್ಮುಗಂ: C.M. ರವರು ಆದೇಶಗಳು ಕೆಲಸಗಳಲ್ಲಿ ಯಾವ ರೀತಿ ಲೋಪದೋಷಗಳು ಸಂಭವಿಸುತ್ತವೆಂದು ತಿಳಿಸಿದ್ದಾರೆ. ಈ ಲೋಪಗಳು ಸರ್ಕಾರದ ಆದೇಶಗಳ ವೃತ್ತಿ ಧರ್ಮಕ್ಕೆ ಒಂದು ವೈರುಧ್ಯ. ಗೌರವಾನ್ವಿತ ಸದಸ್ಯರು ಒಂದು ಕರ್ನಾಟಕ ವಿದ್ಯುತ್‌ಚ್ಛಕ್ತಿ ಮಂಡಳಿಯ ಸಂಗತಿಯನ್ನು ಹೇಳಿದರು. ಅವರು ಮಾಡಿಕೊಂಡ 224 ಜನರ ನೇಮಕಾತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಸಿಗಬೇಕಾದ ಶೇಕಡಾ 18 ರಷ್ಟು ಜಾಗದಲ್ಲಿ ಕೇವಲ ಶೇಕಡ 14 ಮಾತ್ರ ದೊರೆಕಿದೆ. ಇದು ಯಾವ ರೀತಿಯಲ್ಲಿ ನಡೆದಿದೆಯೆಂದು ಹೇಳುವ ಸ್ಥಿತಿಯಲ್ಲಿ ನಾನಿಲ್ಲ, ಇದಕ್ಕಾಗಿ ವಿಷಾದಿಸುತ್ತೇನೆ. ಆದರೆ ಈಗ ಗೌರವ ಸದಸ್ಯರು ಈ ಅನ್ಯಾಯವನ್ನು ಸದನದ ಗಮನಕ್ಕೆ ತಂದಿದ್ದಾರೆ. ಈ ವಿಷಯವು ಪರಿಶೀಲನೆಗೊಳಪಡಬೇಕು ಹಾಗೂ ಯಾವುದೇ ಸ್ತರದಲ್ಲಿ ಏನಾದರೂ ಕುತಂತ್ರ ನಡೆದಿದೆಯೋ ಎಂದೂ ಸಹ ಪರಿಶೀಲಿಸಬೇಕಾಗುತ್ತದೆ. ಒಂದು ವೇಳೆ ಏನಾದರೂ ಕುತಂತ್ರ ನಡೆದಿದ್ದರೆ ಅಂತಹ ವ್ಯಕ್ತಿಗಳನ್ನು ಶಿಕ್ಷೆಗೆ ಗುರಿಪಡಿಸಬೇಕು. ಇದನ್ನು ಸರ್ಕಾರವು ಮಾಡೇ ಮಾಡುತ್ತದೆ.

ಗೌರವ ಸದಸ್ಯರಿಗೆ ತಿಳಿಯದಂತೆ ವರ್ಷಾನುಗಟ್ಟಲೆಯಿಂದ ಆಗುತ್ತಿರುವ ಅನ್ಯಾಯವನ್ನು ತೊಡೆದು ಹಾಕಿ ನ್ಯಾಯವನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ಸರ್ಕಾರವು ಹಲವಾರು ಆದೇಶಗಳನ್ನು ಹೊರಡಿಸಿದೆ. ಹಿಂದುಳಿದ ವರ್ಗಗಳ ಸಮಿತಿಯ ವರದಿ ಬಂದ ಮೇಲೆ ನಾವು ವರ್ಗ 1 ಮತ್ತು 2ರ ನೇಮಕಾತಿಯಲ್ಲಿ ಮೊದಲಾಗುತ್ತಿದ್ದ ಅನ್ಯಾಯವನ್ನು ತೊಡೆದು ಹಾಕಲು ಕ್ರಮಗಳನ್ನು ಕೈಗೊಂಡಿದ್ದೇವೆ. ವರ್ಗ 1 ಮತ್ತು 2ರ ಹುದ್ದೆಗಳಿಗೆ ನೇಮಕಾತಿಗಳು ಆಗಾಗ್ಗೆ ಆಗುತ್ತಿರುತ್ತವೆ. ಲೋಕೋಪಯೋಗಿ ಇಲಾಖೆ (ಪಿ.ಡಬ್ಲ್ಯೂ.ಡಿ)ಯಂತಹ ಇಲಾಖೆಗಳಲ್ಲಿ 1962ನ್ನು ಹೊರತುಪಡಿಸಿ

ಒಂದು ಬಾರಿ ಸುಮಾರು 82 ಇಂಜಿನಿಯರ್‌ಗಳ ನೇಮಕಾತಿ ನಿಂತು ಹೋಗಿದೆ ಅಥವಾ ಸರ್ಕಾರವು ಈ ವಿಷಯವನ್ನು ಲೋಕ ಸೇವಾ ಆಯೋಗಕ್ಕೆ ತಿಳಿಸಲಿಲ್ಲ. ಸ್ಥಳೀಯ ಅಭ್ಯರ್ಥಿಗಳನ್ನು ತೆಗೆದುಕೊಳ್ಳುತ್ತಾ ಹೋಯಿತು. ಇದು ಎಲ್ಲಿಯವರೆಗೆ ಬಂತೆಂದರೆ ಒಂದು ಹಂತದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಸುಮಾರು 1000 ಕಿರಿಯ ಅಭಿಯಂತರರು ಮತ್ತು ಸಹಾಯಕ ಅಭಿಯಂತರರಿದ್ದರು ಮತ್ತು ಇದು ನಿಜವಾಗಿಯೂ ಮಾನವೀಯತೆಯ ಸಮಸ್ಯೆಯಾಗಿದ್ದಿತು. ಸ್ಥಳೀಯ ಅಭ್ಯರ್ಥಿಗಳಾಗಿ ತೆಗೆದುಕೊಂಡ ಈ ಎಲ್ಲ ರೀತಿಯ ಅಭಿಯಂತರರು ಸುಮಾರು 13 ಅಥವಾ 15 ವರ್ಷಗಳಿಂದ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಇದರಿಂದಾಗಿ ಸುಮಾರು 15 ವರ್ಷಗಳಿಂದ ಕಿರಿಯ ಅಭಿಯಂತರರ ಅಥವಾ ಸಹಾಯಕ ಅಭಿಯಂತರರ ಸ್ಥಾನಗಳಿಗೆ ನೇರ ನೇಮಕಾತಿ ನಡೆದೇ ಇಲ್ಲ. ನೂರಾರು ಸಹಾಯಕ ಅಭಿಯಂತರರಿಗೆ ಖಾಲಿಯಾದ ಸ್ಥಾನಗಳು ಇದ್ದಾಗ ಕಿರಿಯ ಅಭಿಯಂತರರಾಗಿ ಬಡ್ತಿ ನೀಡಲಾಯಿತು. ನಾವು ಈ ಸಮಸ್ಯೆಯನ್ನು ಪರಿಹರಿಸುವ ಸಮಯಕ್ಕೆ ಅವರಾಗಲೇ ಹಲವಾರು ವರ್ಷಗಳಿಂದ ಆ ಸ್ಥಾನದಲ್ಲಿ ದುಡಿಯುತ್ತಿದ್ದರು. ಸರ್ಕಾರವು ಈ ಎಲ್ಲಾ ಜನರನ್ನು ಮನೆಗೆ ಕಳುಹಿಸಬೇಕು ಎಂದು ತಾತ್ವಿಕವಾಗಿ ಹೇಳಬಹುದು. ಆದರೆ ಅವರು ಒಬ್ಬರು ಅಥವಾ ಇಬ್ಬರಲ್ಲ ನೂರಾರು. ನಾವು ಅವರನ್ನು ಮನೆಗೆ ಕಳುಹಿಸುವುದು ಸೂಕ್ತವಲ್ಲ. ಇದು ಅವರ ತಪ್ಪಲ್ಲ ಇದು ಸರ್ಕಾರದ ಲೋಪ ಸರ್ಕಾರ ಅವರನ್ನು ಸ್ಥಳೀಯ ಅಭ್ಯರ್ಥಿಗಳಾಗಿ ತೆಗೆದುಕೊಂಡಿತು ಮತ್ತು ನಾವು ಆ ಸಮಯದಲ್ಲಿ ಅವರನ್ನು ದೃಢಪಡಿಸಬೇಕಾಗಿತ್ತು. 300 ಖಾಲಿ ಹುದ್ದೆಗಳಲ್ಲಿ 100ನ್ನು ದೃಢಪಡಿಸಿ. 200ನ್ನು ನೇಮಕಾತಿ ಮಾಡಬೇಕೆಂದು ಸರ್ಕಾರ ನಿರ್ಧರಿಸಿತು. ನಾವು (ಸಹಾಯಕ ಅಭಿಯಂತರಿಗೆ) ಒದಗಿಸಲು ಒಂದು ಅವಕಾಶವನ್ನು ಮಾಡಿದ್ದೇವೆ ಇದು ಶೇಕಡ 30 ರಷ್ಟು ಆಗಬಹುದು. ಇದು ಹೆಚ್ಚಿನ ಸಂಖ್ಯೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭ್ಯರ್ಥಿಗಳನ್ನು ತುಂಬಿಕೊಳ್ಳಲು ತೀರ್ಮಾನ ಮಾಡಲಾಯಿತು ಮತ್ತೆ ವಾಸ್ತವದ ಸಮಸ್ಯೆ ಎಂದರೆ ಎಲ್ಲಾ 300 ಜನರನ್ನು ಒಂದೇ ಬಾರಿ ನೇಮಕಾತಿ ಮಾಡಿಕೊಳ್ಳಲಾಗಲಿಲ್ಲ. ಏಕೆಂದರೆ ಇದು ಇನ್ನೂ ಬೇರೆ ಆಡಳಿತಾತ್ಮಕ ಸಮಸ್ಯೆಗಳನ್ನು ಹುಟ್ಟುಹಾಕಬಹುದೆಂದು ಈ ಸಮಸ್ಯೆಯೊಳಗೆ ಸಂಪೂರ್ಣ ಹೋಗಿ, ನಾವು ಒಂದು ನಿರ್ಧಾರವನ್ನು ತೆಗೆದುಕೊಳ್ಳಬೇಕಾಯಿತು. ಇದು ಆಡಳಿತದ ಜವಾಬ್ದಾರಿ ಎಂದು ನಾನು ಹೇಳಬಯಸುತ್ತೇನೆ ಏಕೆಂದರೆ ನಾವು ನಂತರ ನಮ್ಮ ಇಲಾಖೆಯನ್ನು ಬಿಡಬೇಕಾಯಿತು.

ಶ್ರೀ ಎಸ್. ಎಸ್. ಅರಕೇರಿ:- ನೀವು ಇದರ ಬಗ್ಗೆ ಅಷ್ಟು ಜಾಗೃತರಾಗಿದ್ದೀರೇಕೆ?

ಶ್ರೀ ಡಿ. ದೇವರಾಜ ಅರಸ್:- ನಾನು ಸತ್ಯದ(ವಾಸ್ತವ) ಬಗ್ಗೆ ಜಾಗೃತನಾಗಿದ್ದೇನೆ, ಕಟ್ಟುಕತೆಯ ಬಗ್ಗೆ ಅಲ್ಲ. ನಾನು ಒಂದು ವಿಷಯದ ಬಗ್ಗೆ ಜಾಗೃತನಾಗಿದ್ದೇನೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಾತಿನಿಧ್ಯದ ಸಮಸ್ಯೆಯನ್ನು ಬಗೆಹರಿಸುವ ವಿಷಯದಲ್ಲಿ ನಮ್ಮ ನಿಷ್ಕ್ರಿಯತೆಯನ್ನು ಸಾಬೀತು ಪಡಿಸುವ ಒಂದು ಅಂಶವೂ ಇಲ್ಲ. ಆದರೆ ನಾನು ಈಗ ಏನು ಹೇಳಬಹುದೆಂದರೆ ಇನ್ನು ಮೇಲೆ ಈ ಸಮಸ್ಯೆಗೆ ಸರಿಯಾದ ಗಮನವನ್ನು ಕೊಡಬೇಕು. ಶೇಕಡ 18 ರಷ್ಟು ಬರುವವರೆಗೂ ಈ ಶೇಕಡಾವಾರನ್ನು ಮುಂದುವರೆಸಿಕೊಂಡು ಹೋಗಬೇಕೆಂದು ನಾನು ಹೇಳುವುದಿಲ್ಲ. ಇದು ನನ್ನ ಉದ್ದೇಶವೂ ಅಲ್ಲ. ಸರ್ಕಾರವು ಉದ್ದೇಶವನ್ನು ಕಾಲ ಕಾಲಕ್ಕೆ ಸರಿಯಾಗಿ ಹೊರಡಿಸಿರುವ ಆದೇಶಗಳಲ್ಲಿ ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಉದಾಹರಣೆಗೆ ಪ್ರಾಥಮಿಕ

ಶಾಲಾ ಶಿಕ್ಷಕರ ಹುದ್ದೆಗಳು ನನ್ನ ಪ್ರಕಾರ ಹಳೆಯ ಕೊರತೆಯನ್ನು ತುಂಬಲು ಶೇಕಡಾ 100 ರಷ್ಟು ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಶಿಕ್ಷಕರ ನೇಮಕಾತಿಯಾಗಬೇಕೆಂದು ಸರ್ಕಾರದ ಆದೇಶವಿದೆ. ಕೆಲವು ಕಡೆ ನಾವು ಕೇವಲ ಶೇಕಡಾ 15ರಷ್ಟು ಮೀಸಲಾತಿಗೆ ಬದ್ಧರಾಗಿರಬಾರದೆಂಬ ಗೌರವ ಸದಸ್ಯರ ಸಲಹೆಯನ್ನು ನಾನು ಒಪ್ಪುತ್ತೇನೆ. ಕೊರತೆಯನ್ನು ಸರಿಪಡಿಸಲು ನಾವು ಬೇರೆ ಕೆಲವು ಇಲಾಖೆಗಳಲ್ಲಿ ಆಗಾಗ ಶೇಕಡಾವಾರನ್ನು 25 ಅಥವಾ 30 ಕ್ಕೆ ಏರಿಸಬಹುದು. ಪ್ರಾಥಮಿಕ ಶಿಕ್ಷಕರ ವಿಷಯದಲ್ಲಿ ಮಾಡಿದಂತೆ ಸರ್ಕಾರವು ಇದನ್ನು ತುಂಬ ಅನುಕಂಪದ ದೃಷ್ಟಿಯಿಂದ ನೋಡುತ್ತದೆ ಮತ್ತು ನಾನು ಸದನಕ್ಕೆ ವಾಗ್ದಾನ ಮಾಡುತ್ತೇನೆ. ಈ ಪ್ರಾತಿನಿಧ್ಯದ ಸಮಸ್ಯೆಗೆ ಸಂಬಂಧಪಟ್ಟಂತೆ ನಾನು ಅನುಕಂಪವಿಲ್ಲದವ ಎಂದು ದೂಷಿಸಲ್ಪಡುವ ಬದಲು ಅತೀ ಅನುಕಂಪವಿರುವವನೆಂದು ದೂಷಿಸಲ್ಪಡಲು ಇಚ್ಛಿಸುತ್ತೇನೆ. ನಾವು ಅನುಕಂಪವುಳ್ಳವರಾಗಬೇಕು ಮತ್ತು ಈ ಸಮಸ್ಯೆಯು ಸರಿಯಾದ ಗಮನ ಸೆಳೆಯುವಂತೆ ನೋಡಿಕೊಳ್ಳಬೇಕು.

ಸರ್ಕಾರಿ ಉದ್ಯಮಗಳಿಗೆ ಸಂಬಂಧಪಟ್ಟಂತೆ ಗೌರವಾನ್ವಿತ ಸದಸ್ಯರು ಹೇಳಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪ್ರಾತಿನಿಧ್ಯಕ್ಕೆ ಸಂಬಂಧ ಪಟ್ಟಂತಹ ಹಲವಾರು ಅಂಕಿ ಅಂಶಗಳನ್ನು ನಾನು ಸಮ್ಮತ್ರಿಸುತ್ತೇನೆ. ಮತ್ತು ಇದನ್ನು ಜರೂರಾಗಿ ಸರಿಪಡಿಸಬೇಕಾಗಿದೆ. ನಾವು ಈಗಾಗಲೇ ಆದೇಶಗಳನ್ನು ಹೊರಡಿಸಿದ್ದೇವೆ ಮತ್ತು ಪ್ರತಿಯೊಂದು ಸರ್ಕಾರಿ ಉದ್ದಿಮೆಗೂ ಮೀಸಲಾತಿ ನೀತಿಯನ್ನು ಅನುಸರಿಸಬೇಕೆಂದು ನಿರ್ದೇಶನವನ್ನು ನೀಡಿದ್ದೇವೆ. ನಿಮಗೆ ಗೊತ್ತಿರುವಂತೆ ಈ ಆದೇಶವನ್ನು ಕಳೆದ ವರ್ಷ ಜಾರಿಗೊಳಿಸಲಾಯಿತು. ಗೌರವಾನ್ವಿತ ಸದಸ್ಯರು ಕೆಲವು ಅಂಶಗಳನ್ನು ನೀಡಿದ್ದಾರೆ (ತಿಳಿಸಿದ್ದಾರೆ) ಮತ್ತು ಅವು ಹೆಚ್ಚು ಕಡಿಮೆ ನಿಜವಿರಬಹುದು. ಆದರೆ ಇದು ಹಲವಾರು ವರ್ಷಗಳಿಂದ ಕ್ರೋಢೀಕರಣಗೊಂಡ ಅನ್ಯಾಯ. ಇನ್ನು ಮೇಲೆ ನಾವು ಅವಶ್ಯವಾಗಿ ಈ ಅಪರಾದವಾಗದಂತೆ ನೋಡಿಕೊಳ್ಳಬೇಕಾಗಿದೆ. ನಾವು ಇನ್ನು ಮೇಲೆ ಸರ್ಕಾರಿ ಉದ್ದಿಮೆಗಳಾದ ಕರ್ನಾಟಕ ವಿದ್ಯುತ್‌ಚ್ಛಕ್ತಿ ಮಂಡಳಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಮುಂತಾದವುಗಳು ಸರ್ಕಾರಿ ಆದೇಶವನ್ನು ಕಟ್ಟುನಿಟ್ಟಾಗಿ ಅನುಸರಿಸುವಂತೆ ಮತ್ತು ಅದಕ್ಕೆ ಬದ್ಧರಾಗಿರುವಂತೆ ನೋಡಿಕೊಳ್ಳಬೇಕಾಗಿದೆ.

ಸರ್, ಶ್ರೀ ಹೆಗ್ಡೆಯವರು ಎತ್ತಿದ ಮತ್ತೊಂದು ಅಂಶವೂ ಸಹ ಇಲ್ಲಿ ಪ್ರಸ್ತುತ. ನನಗನ್ನಿಸಿದ ಹಾಗೆ ನಾವು ಅನುದಾನಿತ ಶಾಲೆಗಳಿಗೂ, ಖಾಸಗಿ ಶಿಕ್ಷಣ ಸಂಸ್ಥೆಗಳಿಗೂ ತಮ್ಮ ನೇಮಕಾತಿಯ ಸಂದರ್ಭದಲ್ಲಿ ಸರ್ಕಾರದ ನಿಯಮಗಳನ್ನು ಅನುಸರಿಸುವಂತೆ ಆದೇಶಗಳನ್ನು ಕಳುಹಿಸಿದ್ದೇವೆ. ನಮ್ಮ ನಿಯಮಗಳನ್ನು ಅವು ಅನುಸರಿಸದೇ ಇದ್ದಲ್ಲಿ ಸರ್ಕಾರವು ಅವುಗಳಿಗೆ ನೀಡುತ್ತಿರುವ ಶೇಕಡಾ 80ರಷ್ಟು ಅನುದಾನವನ್ನು (ಧನಸಹಾಯ) ನಿಲ್ಲಿಸಲು ಹಿಂದೆ ಮುಂದೆ ನೋಡುವುದಿಲ್ಲ. ಇದು ಶಿಕ್ಷಕ ಸಿಬ್ಬಂದಿಯಲ್ಲಿದೆ ಶಿಕ್ಷಕೇತರ ಸಿಬ್ಬಂದಿಗೂ ಅನ್ವಯವಾಗುತ್ತೆ. ನೂರಾರು ಶಿಕ್ಷಣ ಸಂಸ್ಥೆಗಳಿರುವಾಗ ಈ ನಿಯಮಗಳ ಉಲ್ಲಂಘನೆ ಘಟನೆಗಳು ಕೆಲವು ಬಾರಿ ಸರ್ಕಾರದ ಗಮನಕ್ಕೆ ಬರುವುದಿಲ್ಲ. ಮತ್ತು ಕೆಳಸ್ತರದ ಅಧಿಕಾರಿಗಳು. ಸರಿಯಾದ ಸಮಯಕ್ಕೆ ಇಂತಹವುಗಳ ಬಗ್ಗೆ ವರದಿ ನೀಡುವುದಿಲ್ಲ. ಗೌರವಾನ್ವಿತ ಸದಸ್ಯರು ಇಂತಹ ಘಟನೆಗಳನ್ನು ಸರ್ಕಾರದ ಗಮನಕ್ಕೆ ತಂದಲ್ಲಿ ನಾನು ಅದನ್ನು ಸ್ವಾಗತಿಸುತ್ತೇನೆ. ಸರ್ಕಾರವು ಅವು ಅಂತಹ ಸಂಸ್ಥೆಗಳಿಗೆ ಧನಸಹಾಯವನ್ನು

ನಿಲ್ಲಿಸುವಂತೆಯೂ ಕ್ರಮಗಳನ್ನು ತೆಗೆದುಕೊಳ್ಳುತ್ತದೆ. ಈ ರೀತಿಯಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಾತಿನಿಧ್ಯವನ್ನು ನಾವು ಅಂದುಕೊಂಡ ಮಟ್ಟಕ್ಕೆ ತರುವುದನ್ನು ನೋಡಿಕೊಳ್ಳಬೇಕಾಗಿದೆ.

ಮೂಲತಃ ಖಾಲಿಸ್ಥಾನಗಳು 3 ಮತ್ತು 7ರ ನಡುವೆ ಇದ್ದರೆ ಒಂದು ಪರಿಶಿಷ್ಟ ಜಾತಿಗಾಗಿ, ಮತ್ತು 8 ಮತ್ತು 14ರ ನಡುವೆ ಇದ್ದರೆ ಎರಡು ಪರಿಶಿಷ್ಟ ಜಾತಿಗಾಗಿ ಮೀಸಲಿಡಲಾಗಿತ್ತು. ಇದೂ ಸಹ ತೃಪ್ತಿದಾಯಕವಾಗಿ ಕೆಲಸ ಮಾಡಲಿಲ್ಲ. ಏಕೆಂದರೆ ಒಂದು ವೇಳೆ 3ರೊಳಗೆ ಖಾಲಿ ಹುದ್ದೆಗಳಿದ್ದರೆ ಈ ಜನರಿಗೆ ಏನೂ ಸಿಗುತ್ತಿರಲಿಲ್ಲ. ಈ ಸಂದರ್ಭದಲ್ಲಿ ಹಿಂದುಳಿದ ವರ್ಗಗಳ ಮೀಸಲಾತಿಯು ಬಂತು. ಈ ಲೆಕ್ಕಾಚಾರವು 100 ಖಾಲಿ ಹುದ್ದೆಗಳ ಆಧಾರದ ಮೇಲೆ ಮಾಡಲಾಯಿತು. ಈ ಸೂತ್ರ ಅನ್ವಯದಲ್ಲಿದ್ದರೂ ಎಲ್ಲೊ ಏನೋ ತಪ್ಪಾಗಿರಬೇಕು. ಇದನ್ನು ನಾನು ಸದ್ಯಕ್ಕೆ ವಿವರಿಸಲು ಆಗುವುದಿಲ್ಲ. ಗೌರವಾನ್ವಿತ ಸದಸ್ಯರು ಹೇಳುವುದನ್ನು ನೋಡಿದರೆ ಈ ವಿಷಯವನ್ನು ಕೂಲಂಕುಶವಾಗಿ ನೋಡಿ, ಬೇರೊಂದು ಸಮಯದಲ್ಲಿ ಈ ಸದನದಲ್ಲಿ ನಾವು ಅಳವಡಿಸಿರುವ ಸೂತ್ರದಲ್ಲೇನಾದರೂ ಲೋಪವಿದೆಯೇ ಎಂಬುದನ್ನು ತಿಳಿಸುತ್ತೇನೆ. ಒಂದು ವೇಳೆ ಲೋಪವಿದ್ದಲ್ಲಿ ಇದನ್ನು ಪರಿಹರಿಸುವತ್ತ ಯೋಚಿಸೋಣ.

ಶ್ರೀ ಟಿ.ಆರ್. ಶಾಮಣ್ಣ:- ಶೀಘ್ರಲಿಪಿಗೆ (ಸ್ಟೆನೋಗ್ರಾಫಿಗೆ) ಸಂಬಂಧ ಪಟ್ಟಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕೇವಲ ವಿದ್ಯಾರ್ಥಿ ವೇತನಕ್ಕಾಗಿ ವಾಣಿಜ್ಯ ಶಿಕ್ಷಣ ಸಂಸ್ಥೆಗಳಿಗೆ ಬರುತ್ತಾರೆಯೇ ಹೊರತು ಕೋರ್ಸನ್ನು ಪೂರ್ಣಗೊಳಿಸುವುದಿಲ್ಲ.

ಶ್ರೀ ಡಿ. ದೇವರಾಜ ಅರಸ್:- ಹಲವಾರು ಸರ್ಕಾರಿ ಇಲಾಖೆಗಳಲ್ಲಿ ಮತ್ತು ಸರ್ಕಾರಿ ಉದ್ದಿಮೆಗಳಲ್ಲಿರುವ ಕಡಿಮೆ ಸಂಖ್ಯೆ ಪ್ರತಿನಿಧ್ಯದ ಬಗ್ಗೆ ನಾನು ಹೇಳುವುದು ಏನೂ ಇಲ್ಲ. ಏಕೆಂದರೆ ಒಂದಾನೊಂದು ಕಾಲದಲ್ಲಿ ಯಾರೂ ಇದರ ಬಗ್ಗೆ ಗಮನ ಹರಿಸಿರಲಿಲ್ಲ ಮತ್ತು ಅವರು ತಮಗೆ ಇಷ್ಟ ಬಂದ ಹಾಗೆ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಂಡರು. ಈಗ ನಾವು ಆದೇಶಗಳನ್ನು ಹೊರಡಿಸಿದ್ದೇವೆ. ಈಗ ಎಲ್ಲಾ ಸರಿ ಹೋಗಿದೆ ಎಂದೇನೂ ಅಲ್ಲ. ಕೆಲವು ವೇಳೆ ಸಾಕಷ್ಟು ಸಂಖ್ಯೆಯ ಅಭ್ಯರ್ಥಿಗಳು ಒಂದು ವರ್ಷದಲ್ಲಿ ತುಂಬಿಕೊಳ್ಳಲು ದೊರೆಯುವುದಿಲ್ಲ. ನಾನು ಈ ವಾದವನ್ನು ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯಿಸುವಂತೆ ಹೇಳುತ್ತಿಲ್ಲ.

ಮಿ-ಸ್ಪೀಕರ್:- ತಾಂತ್ರಿಕ ಹುದ್ದೆಗಳ ಬಗ್ಗೆ ಏನು ಹೇಳುವಿರಿ?

ಶ್ರೀ ಡಿ. ದೇವರಾಜಅರಸ್: - ತಾಂತ್ರಿಕ ಹುದ್ದೆಗಳಿಗೆ ಸಂಬಂಧಿಸಿದಂತೆ ನಾವು ಕ್ಯಾರಿ ಓವರ್ ಪದ್ಧತಿಯನ್ನು ಅನುಸರಿಸುವಂತೆ ಆದೇಶಗಳನ್ನು ಹೊರಡಿಸಿದ್ದೇವೆ. ಸಾಕಷ್ಟು ಸಂಖ್ಯೆಯ ಅಭ್ಯರ್ಥಿಗಳು ಸಿಗದಿದ್ದ ಪಕ್ಷದಲ್ಲಿ, ಎಷ್ಟು ಸಂಖ್ಯೆಯಲ್ಲಿ ಸಿಗುತ್ತಾರೋ ಅಷ್ಟನ್ನೇ ಎರಡು ವರ್ಷಗಳವರೆಗೆ ಮುಂದುವರೆಸಲು ನಾವು ಹೇಳಿದ್ದೇವೆ. ಒಂದು ವೇಳೆ ಒಂದು ವರ್ಷದಲ್ಲಿ 5 ಹುದ್ದೆಗಳಿದ್ದು, ಮತ್ತೊಂದು ವರ್ಷದಲ್ಲಿ 10 ಇದ್ದರೆ, ಒಟ್ಟು 15 ಆಗುತ್ತದೆ. 15 ಹುದ್ದೆಗಳಲ್ಲಿ ಮತ್ತೆ 10 ಅಥವಾ 12 ದೊರೆತರೆ ಅದನ್ನು ಇನ್ನೊಂದು ವರ್ಷಕ್ಕೆ ಮುಂದುವರೆಸಿಕೊಂಡು ಹೋಗಬೇಕಾಗುತ್ತದೆ.

ಈ ರೀತಿಯಲ್ಲಿ ಎರಡು ಬಾರಿ ಕ್ಯಾರಿ ಓವರ್ ಪದ್ಧತಿಯನ್ನು ಅನ್ವಯಿಸಿಕೊಂಡಿದ್ದೇವೆ. ಖಾಲಿ ಹುದ್ದೆಗಳು ಬೇರೆಯವರು ತೆಗೆದುಕೊಳ್ಳದಂತೆ ಅತ್ಯಂತ ಎಚ್ಚರಿಕೆ ವಹಿಸಿ ಈ ವಿಧಾನವನ್ನು ಅರಿಸಿಕೊಂಡಿದ್ದೇವೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಹಿತಾಸಕ್ತಿಯನ್ನು ಕಾಪಾಡುವುದು ನಮ್ಮ ನೀತಿಯಾಗಿ ಮಾಡಿಕೊಂಡಿದ್ದೇವೆ.

ಶೀಘ್ರಲಿಪಿಗಾರರ ಬಗ್ಗೆ ಹೇಳಿದಂತೆ ನಾನು ಶಾಮಣ್ಣನವರ ಸಲಹೆಯನ್ನು ಅರ್ಥಮಾಡಿ ಕೊಳ್ಳಲಾಗಲಿಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:- ಶಾಮಣ್ಣನವರು ಏನು ಹೇಳಿದರೆಂದರೆ ಪರಿಶಿಷ್ಟ ಜಾತಿಯವರು ಅನೇಕ ವಾಣಿಜ್ಯ ಶಾಲೆಗಳಿಗೆ ದಾಖಲಾಗುತ್ತಾರೆ. ಆದರೆ ಅವುಗಳನ್ನು ಪೂರ್ಣಗೊಳಿಸುವುದಿಲ್ಲ ಅವರು ಆ ಕೋರ್ಸ್‌ಗಳನ್ನು ಬಿಟ್ಟುಹೋಗುತ್ತಾರೆ ಏಕೆಂದರೆ ಬೇರೆ ಆಕರ್ಷಕ ಹುದ್ದೆಗಳಿಗೆ ಹೋಗಿ ಬಿಡುತ್ತಾರೆ.

ಶ್ರೀ ಟಿ. ಆರ್. ಶಾಮಣ್ಣ:- ಅವರು ವಿದ್ಯಾರ್ಥಿವೇತನ ತೆಗೆದುಕೊಳ್ಳುತ್ತಾರೆ ಮತ್ತು ಮಧ್ಯದಲ್ಲಿಯೇ ಬಿಟ್ಟು ಹೋಗುತ್ತಾರೆ.

ಶ್ರೀ ಎಸ್. ಆರ್. ಬೊಮ್ಮಾಯಿ:- ಮುಖ್ಯಮಂತ್ರಿಗಳು ಹೇಳಿದಂತೆ ಹಲವಾರು ವರ್ಷಗಳವರೆಗೆ ಸಂವಿಧಾನಾತ್ಮಕ ಕರಾರುಗಳು ಫಲಪ್ರದವಾಗಿರಲಿಲ್ಲ. ಉತ್ತಮ ಪರಿಶ್ರಮಗಳ ಹೊರತಾಗಿಯೂ ಸಂವಿಧಾನಾತ್ಮಕ ಕರಾರುಗಳನ್ನು ನೆರವೇರಿಸಲಾಗಿರಲಿಲ್ಲ. ಸಂದರ್ಶನಕ್ಕೆ ಹಾಜರಾದಾಗ ಅಗತ್ಯವಿರುವ ಯೋಗ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಲಭ್ಯವಿಲ್ಲದಿರುವುದನ್ನು ನಾನು ಕಂಡುಕೊಂಡಿದ್ದೇನೆ. ತಾಂತ್ರಿಕ ಹುದ್ದೆಗಳನ್ನು ಭರ್ತಿಮಾಡಲು ಕೆಲವು ಯೋಗ್ಯತೆಗಳು ಬೇಕಾಗಿರುತ್ತವೆ. ಉದಾಹರಣೆಗೆ, ನ್ಯಾಯಾಂಗ, ಲೋಕಸೇವಾ ಆಯೋಗವೂ 600 ಅಭ್ಯರ್ಥಿಗಳಿಗೆ ಪರೀಕ್ಷೆ ನಡೆಸಿದರೆ ಕೇವಲ 5 ಅಭ್ಯರ್ಥಿಗಳು ಮಾತ್ರ ಉತ್ತೀರ್ಣರಾಗಿದ್ದಾರೆ. ನಾನು ಹೇಳುವುದೇನೆಂದರೆ ಇವರಿಗೆ ಸಹಾಯ ಮಾಡಲು ಅವಿರತ ಕ್ರಮಗಳನ್ನು ಕೈಗೊಂಡಾಗಲೂ ಯೋಗ್ಯ ಅಭ್ಯರ್ಥಿಗಳು ಲಭ್ಯವಾಗುವುದಿಲ್ಲ. ನನ್ನ ಕೋರಿಕೆ ಏನೆಂದರೆ ಈ ಜನರು ಸರ್ಕಾರದ ಸವಲತ್ತುಗಳನ್ನು ಉಪಯೋಗಪಡಿಸಿಕೊಳ್ಳಲ್ಲ ತಮ್ಮನ್ನು ತಾವೇ ಸಿದ್ಧಪಡಿಸಿಕೊಳ್ಳಬೇಕು. ಈ ಜನರು ಐ.ಎ.ಎಸ್,ಐ.ಪಿ.ಎಸ್, ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅನುಕೂಲವಾಗುವಂತೆ ಅವರಿಗೆ ತರಬೇತಿಯನ್ನು ಕೊಡುವ ಯೋಜನೆಗಳನ್ನು ತೆಗೆದುಕೊಳ್ಳಲು ಅನುವಾಗುವಂತೆಯೂ ಪ್ರತ್ಯೇಕ ತರಬೇತಿ ಸಂಸ್ಥೆಗಳನ್ನು ತೆರೆಯಬೇಕು. ಈ ಜನರ ನಿರುದ್ಯೋಗ ಸಮಸ್ಯೆಯು ಕೇವಲ ಮೀಸಲಾತಿಯನ್ನು ಭರ್ತಿ ಮಾಡಿಕೊಳ್ಳುವಂತೆ ಆದೇಶ ಹೊರಡಿಸಿದರೆ ಬಗೆಹರಿಯುವುದಿಲ್ಲ. ಅವರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಯೋಗ್ಯರಾಗಿರುವಂತೆ ಕೆಲವು ಯೋಜನೆಗಳನ್ನು ಜಾರಿಗೆ ತರಬೇಕು.

ಶ್ರೀ ಡಿ. ದೇವರಾಜ ಅರಸ್:- ನನ್ನ ಗೌರವಾನ್ವಿತ ಸ್ನೇಹಿತರು ತಾಂತ್ರಿಕ ಮತ್ತು ಇತರೆ ಹುದ್ದೆಗಳ ಬಗ್ಗೆ ಮಾತನಾಡುತ್ತಿದ್ದಾರೆ. ಆದರೆ ವರ್ಗ 3 ಮತ್ತು 4ನೇ ಹುದ್ದೆಗಳೂ ಇವರಿಗೆ ಸರಿಯಾಗಿ ಕೊಡುತ್ತಿಲ್ಲ. ನಾವು ಇದರ ಬಗ್ಗೆ ಏನು ಹೇಳಬೇಕು?

ನಾನು ಎಂದಿಗೂ ಸಮಸ್ಯೆಗಳ ಗುಣ ಅಥವಾ ದೋಷಗಳ ಬಗ್ಗೆ ಹೋಗಿಲ್ಲ. ಆದರೆ ಒಂದು ಸಂಗತಿ ಎಂದರೆ ರಾಜ್ಯವನ್ನು ಆಳುತ್ತಿರುವವರಲ್ಲಿ ಹಲವಾರು ವರ್ಷಗಳಿಂದ ಈ ಜನರ ಬಗ್ಗೆ ಬೇಜವಾಬ್ದಾರಿ. ಆದ್ದರಿಂದ ಈ ಜನರ ಈ ರೀತಿಯ ಅಸಮರ್ಪಕ ಪ್ರಾತಿನಿಧ್ಯವನ್ನು ನಾವು ತಳ್ಳಿಹಾಕುವಂತಿಲ್ಲ. ಅಂಕಿ-ಅಂಶಗಳು ನಮ್ಮ ಮುಂದಿದೆ. ಆ ಎಲ್ಲಾ ಪ್ರಶ್ನೆಗಳ ಬಗ್ಗೆ ಚರ್ಚಿಸುವುದು ಬೇಡ. ಇವರು ಐ. ಎ. ಎಸ್, ಐ. ಪಿ.ಎಸ್, ಮತ್ತು ತಾಂತ್ರಿಕ ಹುದ್ದೆಗಳಿಗೆ ತರಬೇತಿ ಕೊಡುವ ಸಲಹೆಯನ್ನು ನೀಡಿದ್ದಾರೆ. ಆದರೆ ವರ್ಗ 3ನೇ ಹುದ್ದೆಗಳ ಗತಿ ಏನು? ಇವರಿಗೆ ಗೊತ್ತಿರುವ ಶೈಕ್ಷಣಿಕ ಸವಲತ್ತುಗಳನ್ನು ಉಪಯೋಗಿಸಿಕೊಂಡಿದ್ದರೆ ಈ ಇಪ್ಪತ್ತು ವರ್ಷಗಳಲ್ಲಿ ಸರ್ಕಾರಿ ನೌಕರರ ಸಾವಿರಾರು ಮಕ್ಕಳಿರುತ್ತಿದ್ದರು. ಅವರ ಮಕ್ಕಳು ಮುಂದುವರೆದ ಜನಾಂಗದ ಮಕ್ಕಳ ಜೊತೆಗೆ ಸ್ಪರ್ಧಿಸುತ್ತಿದ್ದರು. ಬರೀ ತರಬೇತಿ ಸಂಸ್ಥೆಗಳನ್ನು ತೆರೆದರೆ ಮಾತ್ರವಲ್ಲ ಅವರಿಗೆ ಸರಿಯಾದ ಅಗತ್ಯವಿದೆ. ನಾನು ತರಬೇತಿಗೊಳಿಸುವ ಯೋಚನೆಯನ್ನು ಅಲ್ಲಗಳೆಯುತ್ತಿಲ್ಲ, ಅದು ಒಳ್ಳೆ ಯೋಚನೆ ನಾವು ಇದನ್ನು ಸ್ವಾಗತಿಸಬೇಕು. ಆದರೆ ವಾಸ್ತವವಾಗಿ ಈ ಅವಕಾಶಗಳನ್ನು ಅವರು ಉಪಯೋಗಿಸಿಕೊಂಡಿದ್ದಾಗಿದ್ದರೆ ಅವರು ಉನ್ನತ ಜಾತಿಯ ಮತ್ತು ಸಾಮಾಜಿಕವಾಗಿ ಮುಂದುವರಿದವರ ಜೊತೆಗೆ ಸ್ಪರ್ಧಿಸುತ್ತಿದ್ದರು.

ಶ್ರೀ ಟಿ. ಚೌಡಯ್ಯ:- ಈ ಸಮಸ್ಯೆಯನ್ನು ನಿವಾರಿಸುವಲ್ಲಿ ತಾಂತ್ರಿಕವಾದ ತೊಡಕಿದೆ. ಅಭ್ಯರ್ಥಿಗಳನ್ನು ನೇಮಿಸುವಲ್ಲಿ 1:10 ಅನುಪಾತವನ್ನು ಅನುಸರಿಸಲಾಗುತ್ತದೆ. ಆಯ್ಕೆಯ ಸಾಮಾನ್ಯ ಅರ್ಹತೆಯ ಆಧಾರದ ಮೇಲೆ ನಡೆಯುತ್ತದೆ. ಇದನ್ನು ಅನುಸರಿಸಿದರೆ ಶೇಕಡಾ 50 ರಷ್ಟಕಿಂತಲೂ ಕಡಿಮೆ ಅಂಕ ಪಡೆದುಕೊಂಡವರು ಸಂದರ್ಶನಕ್ಕೆ ಬರಲಾಗುವುದಿಲ್ಲ ಆದ್ದರಿಂದ ನಾವು ವಯಸ್ಸಿನಲ್ಲಿ ಸಡಿಲಿಕೆ ನೀಡಬೇಕಾಗುತ್ತದೆ. ನನ್ನ ಪ್ರಕಾರ ಹಿಂದುಳಿದ ವರ್ಗದವರಿಗೆ ವಯೋಮಿತಿ 28ವರ್ಷಕ್ಕಿಂತ ಜಾಸ್ತಿ ಮತ್ತು ಪರಿಶಿಷ್ಟ ಜಾತಿಯವರಿಗೆ 33 ವರ್ಷಕ್ಕಿಂತ ಜಾಸ್ತಿ ಇದನ್ನು ಮಾಡಿದರೆ ಆಗ ಹೆಚ್ಚಿನ ಅಭ್ಯರ್ಥಿಗಳನ್ನು ಭರ್ತಿಮಾಡಿಕೊಳ್ಳಲು ಅವಕಾಶವಿರುತ್ತದೆ ಹಾಗೂ ಸಂದರ್ಶನದಲ್ಲಿ ಬರಲು ಅವಕಾಶಗಳಿರುತ್ತವೆ. ವಯಸ್ಸು ಮತ್ತು ಅನುಪಾತವನ್ನು ಆಯ್ಕೆಯಲ್ಲಿ ಬದಲಾಯಿಸಬೇಕು.

ಶ್ರೀ ಬಿ. ಶಿವಣ್ಣ:- ಪರಿಶಿಷ್ಟ ಜಾತಿಯವರ ಗುಣಮಟ್ಟದ ಬಗೆಗೆ ವಿರೋಧಿ ನಾಯಕರು ಮಾಡಿರುವ ಆರೋಪವನ್ನು ನಾನು ಅಲ್ಲಗೆಳೆಯುತ್ತೇನೆ. ಪರಿಶಿಷ್ಟ ಜಾತಿಯವರು ಗುಣಮಟ್ಟದಲ್ಲಿ ಕೆಳದರ್ಜೆಯವರೇನಲ್ಲ.

ಶ್ರೀ ಎಸ್. ಆರ್, ಬೊಮ್ಮಾಯಿ:- ನಾನು ಅವರು ಕೆಳಮಟ್ಟದವರೆಂದು ಎಂದಿಗೂ ಹೇಳಿಲ್ಲ. ನಾನು ಹೇಳಿದುದೇನೆಂದರೆ ಅವರಿಗೆ ಪ್ರತ್ಯೇಕ ತರಬೇತಿಯನ್ನು ಕೊಡಬೇಕೆಂದು.

ಶ್ರೀ ಬಿ. ಶಿವಣ್ಣ:- ಯೋಗ್ಯವಾದ ಇಂಜಿನಿಯರ್ (ಅಭಿಯಂತರರು) ಮತ್ತು ವೈದ್ಯರು ಇಲ್ಲವೆಂದು ಇವರು ಹೇಳುತ್ತಾರೆ. ನೂರಾರು ಜನರು ಈ ಜನಾಂಗದಲ್ಲಿದ್ದಾರೆ, ವಿಜ್ಞಾನಿಗಳೂ ಸಹ ಇದ್ದಾರೆ. ಒಂದೇ ಒಂದು ಅಂಶವೆಂದರೆ ಅವರು ತಾರತಮ್ಯ ಮಾಡುತ್ತಾರೆ. 30 ಜನ ವೈದ್ಯರು, ಎಂ.ಬಿ.ಬಿ.ಎಸ್, ಪರೀಕ್ಷೆಗೆ ಕುಳಿತುಕೊಳ್ಳುವವರಿದ್ದಾರೆ. ಅವರು ಶೇಕಡಾ 35ಕ್ಕಿಂತ ಜಾಸ್ತಿ ಅಂಕಗಳನ್ನು ಕೊಡುವುದಿಲ್ಲ. ಅಲ್ಲಿ ಮುಖ್ಯಕಾರ್ಯದರ್ಶಿಯ, ಜಿಲ್ಲಾಧಿಕಾರಿಯ, ಕುಲಪತಿಗಳ ಅಥವಾ ಬೇರೆ ಮುಖ್ಯ ವ್ಯಕ್ತಿಗಳ ಮಕ್ಕಳಿರಬಹುದು. ಅವರೆದುರು ಈ ಬಡ ಹುಡುಗರು ಯಾವ

ರೀತಿ ಸ್ಪರ್ಧಿಸಬಹುದು. ಆದ್ದರಿಂದ ಸ್ಥಾನ ಮತ್ತು ಪ್ರಭಾವ (Influence) ಪರೀಕ್ಷಾ ಸಮಯದಲ್ಲಿ ಕೆಲಸ ಮಾಡುತ್ತದೆ. ಮೆಟ್ರಿಕ್ಯುಲೇಷನ್‌ನಲ್ಲಿ ನನಗೆ ಶೇಕಡಾ 35ರಷ್ಟು ಮಾತ್ರ ಕೊಟ್ಟರು. ಆದರೂ ನಾನು ಒಬ್ಬ ಎಂ. ಎಲ್.ಎ ಆದೆ ಎಲ್ಲಿದೆ ಗುಣಮಟ್ಟ? ಒಂದು ಬಾರಿ ಒಬ್ಬ ಅಮೇರಿಕಾದ ವಿಜ್ಞಾನಿ ಹೇಳಿದರು "ನಿನ್ನ ಶಕ್ತಿಯನ್ನು ವ್ಯರ್ಥಮಾಡಬೇಡ, ಇಲ್ಲದಿದ್ದರೆ ನೀನು ಅಶಕ್ತನಾಗುತ್ತೀಯ" ಆದರೆ ನಮ್ಮ ಜನ ಬಹಳ ಶಕ್ತಿವಂತರು. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ದೂರುತ್ತಿರುವ ಪ್ರಕಾರ ಪರೀಕ್ಷೆಗೆ ಕುಳಿತುಕೊಂಡಾಗಲೆಲ್ಲ ಪರೀಕ್ಷೆ ನಡೆಸುವವರು ಅವರನ್ನು ನೋಡಿ ತಮಾಷೆ ಮಾಡುತ್ತಾರೆಂತೆ. ಏಕೆಂದರೆ ನಮ್ಮ ಜಾತಿಯ ಪರೀಕ್ಷಕರು ಅಲ್ಲಿ ಇರುವುದಿಲ್ಲ. ಸದನದ ನಮ್ಮ ನಾಯಕ ಮಿ:ಅರಸ್‌ರವರು ಪರಿಶಿಷ್ಟ ಜಾತಿ ಜನರಿಗೆ ಒಳ್ಳೆಯ ಸೇವೆಯನ್ನು ಮಾಡುತ್ತಿದ್ದಾರೆ. ಆದ್ದರಿಂದ ನಾನು ಹೇಳಬಯಸುವುದೇನೆಂದರೆ ನಮ್ಮ ಜನರೂ ಸಹ ಬುದ್ಧಿವಂತರು ಮತ್ತು ನೀವು ಕೊಡುವ ಯಾವುದೇ ಕೆಲಸಕ್ಕೂ ಯೋಗ್ಯರು ನಾನು ವಿರೋಧಿ ನಾಯಕರಲ್ಲಿ ಕೇಳಿಕೊಳ್ಳುವುದೇನೆಂದರೆ ಪರಿಶಿಷ್ಟ ಜಾತಿಯಲ್ಲಿ ಕಡಿಮೆ ಗುಣಮಟ್ಟದ ಜನರು ಇಲ್ಲವೆಂದು ತಿಳಿದುಕೊಳ್ಳಬೇಕು.

ಶ್ರೀ ಬಿ. ಹೆಚ್. ಲಕ್ಷ್ಮಣಯ್ಯ (ಬೇಲೂರು):- ಸ್ವಾಮಿ ಮಾನ್ಯ ಮುಖ್ಯಮಂತ್ರಿಗಳು ಹೇಳಿದರು ಇತ್ತೀಚಿಗೆ ಕೆಲವು ಸರ್ಕಾರಿ ಆದೇಶಗಳನ್ನು ಮಾಡಿದ್ದೇವೆ ಎಂದು. ಮಾನ್ಯ ಆರ್ಮುಗಂ ಅವರು ಮಾತನಾಡುತ್ತಾ ರೀಸೆಂಟಾಗಿ ಕೆಲವು ಅಪಾಯಿಂಟ್‌ಮೆಂಟ್ಸ್‌ಗಳನ್ನು ಕೊಡುವ ವಿಚಾರ ಅದರಲ್ಲೂ ಕೂಡ ಪರ್ಸೆಂಟೇಜ್ ಮೆಂಟೇನ್ ಮಾಡಿಲ್ಲ ಎಂದು. ಅದಕ್ಕಾಗಿ ನಾನು ಮಾನ್ಯ ಮುಖ್ಯಮಂತ್ರಿಗಳನ್ನು ಕೇಳುತ್ತೇನೆ. ಇನ್ನು ಮುಂದೆ ಅಪಾಯಿಂಟ್‌ಮೆಂಟ್ ಮಾಡುವುದರಲ್ಲಿ ಯಾವ ಅಧಿಕಾರಿ 18 ಪರ್ಸೆಂಟ್ ಕಡ್ಡಾಯವಾಗಿ ತೆಗೆದುಕೊಳ್ಳುವುದಿಲ್ಲ ಅಂಥವರ ಬಗ್ಗೆ ಏನಾದರೂ ಕ್ರಮ ತೆಗೆದುಕೊಳ್ಳುತ್ತೀರಾ? ಈಗ 20 ವರ್ಷಗಳಿಂದ ಏನೋ ನಡೆದು ಬಂದದ್ದು ಆಗಿ ಹೋಯಿತು. ಇನ್ನೂ ಮುಂದಾದರೂ ಸರ್ಕಾರದವರು ಆ ಆದೇಶವನ್ನು ಹೊರಡಿಸಿದಂತೆ ಅಧಿಕಾರಿಗಳು ಹರಿಜನ ಗಿರಿಜನರಿಗೆ ರೆಕ್ರೂಟ್‌ಮೆಂಟ್‌ನಲ್ಲಿ ಮತ್ತು ಪ್ರಮೋಷನ್‌ನಲ್ಲಿ 18 ಪರ್ಸೆಂಟ್ ತೆಗೆದುಕೊಳ್ಳುವಂತೆ ಸೂಚನೆ ಕೊಡಬೇಕೆಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಮಿ: ಸ್ಪೀಕರ್:- ಮುಖ್ಯಮಂತ್ರಿಗಳು ಇದನ್ನು ಸ್ಪಷ್ಟವಾಗಿ ಹೇಳಿದ್ದಾರೆ.

ಶ್ರೀ ಎಸ್. ಆರ್. ಬೊಮ್ಮಾಯಿ:- ಶ್ರೀಮಾನ್ ಶಿವಣ್ಣನವರು ನನ್ನನ್ನು ಸರಿಯಾಗಿ ತಿಳಿದುಕೊಂಡರೋ ಇಲ್ಲವೋ ಗೊತ್ತಿಲ್ಲ. ಹರಿಜನರಲ್ಲಿ ವಿದ್ಯಾವಂತರು, ಬುದ್ಧಿವಂತರು ಮತ್ತು ಬಹುದೊಡ್ಡ ಮಟ್ಟದ ಜ್ಞಾನಿಗಳು ಇಲ್ಲ ಎಂದು ನಾನು ಹೇಳುವುದಿಲ್ಲ. ಅವರಿಗೆ ಆರ್ಥಿಕ ತೊಂದರೆಗಳು ಇರುವುದರಿಂದ ಹಾಗೂ ಇನ್ನೂ ಕೆಲವು ಸೌಕರ್ಯಗಳು ಇಲ್ಲದೇ ಇರುವುದರಿಂದ ಅವರು ಮೇಲ್ಪಟ್ಟದವರೊಡನೆ ಕಾಂಪಿಟ್ ಮಾಡುವುದಕ್ಕಾಗುವುದಿಲ್ಲ. ಆದ್ದರಿಂದ ಅವರಿಗೆ ಸರ್ಕಾರದಿಂದ ಸ್ಪೆಷಲ್ ಸ್ಕಾಲರ್ ಷಿಪ್, ಫ್ರೀ ಎಜುಕೇಷನ್, ಹಾಸ್ಟಲ್ ಫೆಸಿಲಿಟೀಸ್ ಇತ್ಯಾದಿಗಳು ಅವರಿಗೆ ಸಾಕಷ್ಟು ಇನ್ನು ಸಿಕ್ಕುತ್ತಿಲ್ಲ, ಅದನ್ನು ಒದಗಿಸಬೇಕು. ತಹಶೀಲ್ದಾರರ ಪೋಸ್ಟಿಗೆ, ಮುನ್ಸೀಫ್ ಪೋಸ್ಟಿಗೆ, ಇಂಜಿನಿಯರ್ ಪೋಸ್ಟಿಗೆ, ಡಾಕ್ಟರ್ ಪೋಸ್ಟಿಗೆ ಅವರು ಬರಬೇಕಾದರೆ ಅವರಿಗೆ ಸ್ಪೆಷಲ್ ಟ್ರೈನಿಂಗ್ ಕೊಡಬೇಕು. ಶ್ರೀಮಾನ್ ಶಿವಣ್ಣನವರು ಮತ್ತೊಂದು ವಿಷಯವನ್ನು ಹೇಳಿದರು, ಅದೇನೆಂದರೆ ಪರೀಕ್ಷೆಗಳಲ್ಲಿ ಮಾರ್ಕ್ಸ್ ಹಾಕುವುದರಲ್ಲಿ ಮಾಲ್ ಪ್ರಾಕ್ಟೀಸ್ ನಡೆಯುತ್ತದೆ

ಎಂದು ಹೇಳಿದರು. ಅದಕ್ಕೆ ಮೇಲ್ಪಟ್ಟದ ಪರೀಕ್ಷಕರು ತಮ್ಮ ತಮ್ಮ ಜಾತಿಯವರಿಗೆ ಪರೀಕ್ಷೆಗಳಲ್ಲಿ ಮಾರ್ಕ್ಸ್ ಕೊಡುವುದನ್ನು ಮಾಲ್ ಪ್ರಾಕ್ಟೀಸ್ ನಡೆದರೆ ಅಂಥಾದ್ದನ್ನು ಕೂಡಲೇ ತಡೆಯಬೇಕಾಗುತ್ತದೆ. ಹೀಗಿದ್ದಲ್ಲಿ ಪರೀಕ್ಷೆ ಗುಣಮಟ್ಟ ಇಲ್ಲವಾಗುತ್ತೆ ಮುಂದೆ ಪ್ರತಿಯೊಂದು ಇಲ್ಲವಾಗುತ್ತೆ. ಆದುದರಿಂದ ಅದು ನಡೆಯುತ್ತಾ ಇಲ್ಲ. ಆದ್ದರಿಂದ ಶ್ರೀಮಾನ್ ಶಿವಣ್ಣನವರು ಹೇಳಿದ್ದಂಥಾದ್ದು ಸತ್ಯಕ್ಕೆ ದೂರವಾದುದಲ್ಲ ಅಲ್ಲಿ ನಡೆಯಬಹುದು. ಅದನ್ನು ಕೂಡಲೇ ನಿಲ್ಲಿಸಿ ಹರಿಜನರಿಗೆ ಟ್ರೈನಿಂಗ್ ಕೊಡುವಂತಹ ಇನ್ಸ್ಟಿಟ್ಯೂಷನ್‌ಗಳು ಆಗಬೇಕು. ಅದಕ್ಕೆ ಅವಕಾಶವನ್ನು ಕಲ್ಪಿಸಿಕೊಡಬೇಕು ಎಂದು ನಾನು ಸಲಹೆ ಕೊಟ್ಟಿದ್ದೇನೆ. ನಾನು ಅದನ್ನು ವಿರೋಧಿಸಿ ಮಾತನಾಡಿಲ್ಲ.

ಮಿ: ಸ್ಪೀಕರ್:- ನನ್ನ ಗಮನಕ್ಕೆ ಬಂದಿರುವಂತೆ ಕೆಲವು ಸರ್ಕಾರಿ ಇಲಾಖೆಗಳು, ಸಂವಿಧಾನಾತ್ಮಕ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ನೇಮಕಾತಿಯ ನಿಯಮಗಳನ್ನು ರೂಪಿಸಿಲ್ಲ. ಆದ್ದರಿಂದ ಅಲ್ಲಿಯೂ ಸಹ ಅನ್ಯಾಯ ನಡೆದಿದೆ. ಈ ನಿಯಮಗಳನ್ನು ಸರಿಪಡಿಸಲು ಸರ್ಕಾರಕ್ಕೆ ಎಷ್ಟು ಸಮಯ ಬೇಕು

ಶ್ರೀ ಡಿ. ದೇವರಾಜ ಅರಸ್:- ಸರ್, ಸದನದ ಗಮನಕ್ಕೆ ತಂದ ಒಂದು ಅಂಶವೆಂದರೆ ನೇಮಕಾತಿಯಲ್ಲಿ ಅನುಸರಿಸುತ್ತಿರುವ ಅನುಪಾತದ ಬಗ್ಗೆ. ಈಗ ಇದು 1:10 ಇದೆ. ಮುಂಚೆ 1:4 ಇತ್ತು. ಹೆಚ್ಚು ಜನರಿಗೆ ಅವಕಾಶ ನೀಡುವ ಸಲುವಾಗಿ ನಾವು1:10 ಮಾಡಿದ್ದೇವೆ. ಅಲ್ಲಿಗೆ ಬರುವ ಒಟ್ಟು ಅರ್ಜಿಗಳ ಸಂಖ್ಯೆಯನ್ನು ನೀವು ಸ್ವಲ್ಪ ಗಮನದಲ್ಲಿಟ್ಟುಕೊಳ್ಳಬೇಕು. ಒಂದು ವೇಳೆ 20 ಅಥವಾ 40 ಸಾವಿರವಾದರೆ ವರ್ಷವಾದರೂ ನೇಮಕಾತಿ ನಡೆಯುವುದಿಲ್ಲ. ಇಂತಹ ಸಂದರ್ಭದಲ್ಲಿ ಮುಂದಿನ ನೇಮಕಾತಿಯೇ ಇರುವುದಿಲ್ಲ. 100 ಖಾಲಿ ಹುದ್ದೆಗಳಿದ್ದರೆ ನಾವು 1000 ಅರ್ಜಿಗಳನ್ನು ಕರೆಯುತ್ತೇವೆ. ಇದರಲ್ಲಿ ಅವರು ಆಯ್ಕೆ ಮಾಡುತ್ತಾರೆ. ಇದು ವಾಸ್ತವ ಸ್ಥಿತಿ. ನೀವು ಬಹು ಸಂಖ್ಯೆಯ ಅರ್ಜಿಗಳನ್ನು ಕರೆದರು ಅದು ನಿರುದ್ಯೋಗದ ಸಮಸ್ಯೆಯನ್ನು ನಿವಾರಿಸುವುದಿಲ್ಲ. ಇದೆಲ್ಲಾ ಖಾಲಿ ಹುದ್ದೆಗಳು ಸಂಖ್ಯೆಯ  ಮೇಲೆ ಆಧಾರಿತವಾಗಿರುತ್ತದೆ.

ಶಾಸನಾತ್ಮಕ ಸಂಸ್ಥೆಗಳು ನೇಮಕಾತಿಯ ನಿಯಮಗಳನ್ನು ರೂಪಿಸಿಲ್ಲ ಎಂಬ ಅಂಶದ ಬಗ್ಗೆ ಹೇಳುವುದಾದರೆ ನಾವು ಈ ನೇಮಕಾತಿಯ ನಿಯಮಗಳು ರೂಪಿಸುವ ಹಾಗೆ ನೋಡಿಕೊಳ್ಳುತ್ತೇವೆ. ಕೆಲವು ದಿನಗಳ ಹಿಂದೆ ಬಡ್ತಿಯ ಖಾಲಿ ಹುದ್ದೆಗಳು ಮೀಸಲಾಗಿಡಬೇಕೆಂಬುದರ ಬಗ್ಗೆ ನಾವು ಒಂದು ನಿರ್ಧಾರವನ್ನು ಕೈಗೊಂಡಿದ್ದವು. ಬಡ್ತಿಯನ್ನು ಎಲ್ಲಿ ಇದುವರೆಗೂ ನೀಡಿಲ್ಲವೋ ಅಲ್ಲಿ ಈ ಬಡ್ತಿಯಲ್ಲಿ ಮೀಸಲಾತಿಯ ಬಗ್ಗೆ ಸರ್ಕಾರದ ಆದೇಶದಲ್ಲಿ ನಿಯಮಗಳು ರೂಪುಗೊಳ್ಳುವವರೆಗೂ ಖಾಲಿ ಹುದ್ದೆಗಳನ್ನು ಯಾವುದೇ ರೀತಿಯಲ್ಲಿ ಭರ್ತಿಮಾಡಬಾರದೆಂದು ನಾನು ಈಗಾಗಲೇ ನಿರ್ದೇಶನವನ್ನು ಕೊಟ್ಟಿದ್ದೇನೆ. ಕರ್ನಾಟಕ ವಿದ್ಯುತ್‌ಶಕ್ತಿ ಮಂಡಳಿಯ ವಿಷಯದಲ್ಲಿ ನನ್ನ ಗಮನಕ್ಕೆ ಬಂದ ಪ್ರಕಾರ ಸಹಾಯಕ ಅಭಿಯಂತರರು ಮತ್ತು ಕಾರ್ಯನಿರ್ವಾಹಕ ಅಭಿಯಂತರರ ವಿಭಾಗದಲ್ಲಿ ಪರಿಶಿಷ್ಟ ಜಾತಿಗಳ ಪ್ರಾತಿನಿಧ್ಯತೆ ಇಲ್ಲ. ನೇಮಕಾತಿಯ ನಿಯಮಗಳು ರೂಪುಗೊಳ್ಳುವವರೆಗೂ ಬಡ್ತಿಯಲ್ಲಿ ನಿಲ್ಲಿಸಲು ನಾನಾಗಲೇ ಆದೇಶವನ್ನು ಕಳುಹಿಸಿದ್ದೇನೆ. ಈ ರೀತಿಯಾಗಿ ಸರ್ಕಾರವು ಹೊರಡಿಸಿದ ಯಾವುದೇ ಆದೇಶವು ಕಾರ್ಯಗತಗೊಳ್ಳುವಂತೆ ನೋಡಿಕೊಳ್ಳುವಲ್ಲಿ ಸರ್ಕಾರವು ಪ್ರಾಮಾಣಿಕವಾಗಿದೆ.

ಮುದ್ರಕರು : ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾ.ಸೂ. 1414

## 1999- 2000ನೇ ಸಾಲಿನ ಗ್ರಂಥಾಲಯ ಉಪ ಸಮಿತಿಯ ಸದಸ್ಯರುಗಳು

ಶ್ರೀಯುತರುಗಳಾದ :

| | | | |
|---|---|---|---|
| 1. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಪಾಟೀಲ ಕಾಕಾಸಹೇಬ ಪಾಂಡುರಂಗ | ” | ಸದಸ್ಯರು |
| 3. | ಸಿರಾಜ್ ಶೇಖ್ | ” | ” |
| 4. | ಪಿ.ಎಂ. ರಂಗನಾಥ್ | ” | ” |
| 5. | ಎನ್. ಸಂಪಂಗಿ | ” | ” |
| 6. | ಡಾ: ಹೆಚ್.ಎಲ್. ನಾಗೇಗೌಡ | ವಿಧಾನ ಪರಿಷತ್ತಿನ ಸದಸ್ಯರು | ” |
| 7. | ಡಾ: ವಿ.ಎಸ್. ಆಚಾರ್ಯ | ” | ” |
| 8. | ಕೆ.ಸಿ. ಪುಟ್ಟಸಿದ್ದಶೆಟ್ಟಿ | ” | ” |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

### ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಯಾಕೂಬ್ ಶರೀಫ್
   ಕಾರ್ಯದರ್ಶಿ
2. ಟಿ. ರಾಜಣ್ಣ
   ವಿಶೇಷ ಕಾರ್ಯದರ್ಶಿ
3. ಎಸ್.ಬಿ. ಪಾಟೀಲ್
   ಜಂಟಿ ಕಾರ್ಯದರ್ಶಿ
4. ಟಿ.ಎನ್. ಧ್ರುವಕುಮಾರ್
   ಉಪ ಕಾರ್ಯದರ್ಶಿ